# ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾ ಪ್ರಬಂಧ

ಸಂಶೋಧಕ

ಚನ್ನಮಲ್ಲಪ್ಪ ಜುಬೀರ್

ಮಾರ್ಗದರ್ಶಕರು

ಡಾ. ಕೆ. ಎಂ. ಮೈತ್ರಿ





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ ೫೮೩ ೨೭೬

ಅಕ್ಟೋಬರ್ ೨೦೦೧

# ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಪಿಎಚ್.ಡಿ. ಮಹಾ ಪ್ರಬಂಧ

ಸಂಶೋಧಕ

ಚನ್ನಮಲ್ಲಪ್ಪ ಜುಬೀರ್

18.11.08

ಮಾರ್ಗದರ್ಶಕರು

ಡಾ. ಕೆ. ಎಂ. ಮೈತ್ರಿ





ಬುಡಕಟ್ಟು ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ ೫೮೩ ೨೭೬

ಅಕ್ಟೋಬರ್ ೨೦೦೧

# <u>ಮಾರ್ಗದರ್ಶಕರ ದೃಢೀಕರಣ ಪತ್ರ</u>

ಶ್ರೀ ಚನ್ನಮಲ್ಲಪ್ಪ ಜುಬೀರ್ ಅವರು ***ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ*** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪಿಎಚ್. ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧದ ವಿಷಯವನ್ನು ಇದುವರೆಗೂ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲ ವೆಂದು ದೃಢೀಕರಿಸುತ್ತೇನೆ.



**ಡಾ.ಕೆ.ಎಂ.ಮೈತ್ರಿ**
ಮಾರ್ಗದರ್ಶಕರು ಮತ್ತು ಪ್ರವಾಚಕರು
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ** : **ವಿದ್ಯಾರಣ್ಯ**

**ದಿನಾಂಕ** : ೨೪.೧೦.೨೦೦೧

## ಸಂಶೋಧಕನ ಪ್ರಮಾಣ ಪತ್ರ

***ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ*** ಎಂಬ ಮಹಾಪ್ರಬಂಧವನ್ನು ಪಿಎಚ್. ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು ಡಾ.ಕೆ.ಎಂ.ಮೈತ್ರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಮಹಾಪ್ರಬಂಧದಲ್ಲಿ ಇರುವ ಯಾವುದೇ ಅಂಶವನ್ನು ಈ ಮೊದಲು ಭಾಗಶ: ಆಗಲಿ, ಪೂರ್ಣವಾಗಿ ಆಗಲಿ ಪ್ರಕಟಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಚನ್ನಮಲ್ಲಪ್ಪ ಜುಬೀರ್**
ಸಂಶೋಧಕ
**ಬುಡಕಟ್ಟು ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ** : **ವಿದ್ಯಾರಣ್ಯ**

**ದಿನಾಂಕ** : ೨೮-೧೦-೨೦೦೯

# ಅರಿಕೆ

ಅಧ್ಯಾಪನದಲ್ಲಿ ನಿರತನಾದ ನನಗೆ ಹೆಚ್ಚುಹೆಚ್ಚಾಗಿ ಅಧ್ಯಯನ ಮಾಡಿದಂತೆಲ್ಲ ಸಂಶೋಧನೆ ಕೈಗೊಳ್ಳಬೇಕೆಂಬ ಕುತೂಹಲ ನನ್ನಲ್ಲಿ ಉಂಟಾಯಿತು. ಸಂಶೋಧನೆಯಿಂದ ಜ್ಞಾನದ ಕ್ಷಿತಿಜ ವಿಸ್ತಾರಗೊಂಡು ಅಧ್ಯಾಪನಕ್ಕೆ ಇನ್ನು ಅನುಕೂಲವಾಗುತ್ತದೆಂದು, ಖಂಡಿತವಾಗಿ ಸಂಶೋಧನೆ ಕೈಗೊಳ್ಳಲೇಬೇಕೆಂಬ ಆಸೆ ನನ್ನಲ್ಲಿ ಅಂಕುರಿಸಿತು. ಹಂಪಿ ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದ ಪ್ರವಾಚಕರಾದ ಡಾ.ಕೆ.ಎಂ. ಮೈತ್ರಿಯವರಲ್ಲಿ ನನ್ನ ವಿಚಾರವನ್ನು ವ್ಯಕ್ತ ಪಡಿಸಿದಾಗ ಅವರು ತುಂಬು ಮನಸ್ಸಿನಿಂದ ಪ್ರೋತ್ಸಾಹಿಸಿದರು. ಡಾ.ಕೆ.ಎಂ. ಮೈತ್ರಿಯವರ ಮಾರ್ಗದರ್ಶನ ನನಗೆ ಲಭಿಸಿದ್ದು ನಿಜವಾಗಲು ನನ್ನ ಅದೃಷ್ಟವೆಂದೇ ಭಾವಿಸಿದ್ದೇನೆ. ನನ್ನ ಸಂಶೋಧನೆಯ ಪ್ರತಿಹಂತದಲ್ಲೂ ಸೂಕ್ತವಾದ ಸಲಹೆ ಸೂಚನೆಗಳನ್ನು ನೀಡಿ ತಮ್ಮ ಅಪಾರವಾದ ವಿದ್ವತ್ತನ್ನು ಮುಕ್ತಮನಸ್ಸಿನಿಂದ ನನಗೆ ಧಾರೆ ಎರೆದಿದ್ದಾರೆ.

ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ ಎಂಬ ಮಹತ್ತರವಾದ ವಿಷಯವನ್ನು ನೀಡಿ ಸಂಶೋಧನೆಯಲ್ಲಿ ನನಗೆ ತೀವ್ರ ಉತ್ಸಾಹ, ಆಸಕ್ತಿ ಹುಟ್ಟಿಸಿ ಅತ್ಯಂತ ಸೂಕ್ತ ರೀತಿಯಲ್ಲಿ ಮಾರ್ಗದರ್ಶನ ನೀಡಿದ್ದಾರೆ. ಅದಕ್ಕಾಗಿ ಮೊಟ್ಟಮೊದಲಿಗೆ ಡಾ.ಕೆ.ಎಂ. ಮೈತ್ರಿಯವರಿಗೆ ನನ್ನ ಕೃತಜ್ಞತೆಗಳು. ನಾನು ಮಾರ್ಗದರ್ಶಕರ ಮನೆಗೆ ಹೋದಾಗಲೆಲ್ಲ ನನ್ನನ್ನು ಬಹಳ ಸೌಜನ್ಯದಿಂದ ಅಷ್ಟೇ ಉದಾರ ಭಾವದಿಂದ ವಾತ್ಸಲ್ಯ ತೋರಿಸಿದ ಅವರ ಶ್ರೀಮತಿಯವರಾದ ದಾಕ್ಷಾಯಣಿ ಮೈತ್ರಿಯವರ ಉಪಕಾರವನ್ನು ಸ್ಮರಿಸುತ್ತ ಅವರಿಗೂ ನನ್ನ ಧನ್ಯವಾದಗಳನ್ನು ಸಮರ್ಪಿಸುತ್ತೇನೆ. ಬುಡಕಟ್ಟು ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ.ಹಿ.ಚಿ.ಬೋರಲಿಂಗಯ್ಯನವರ ಪ್ರೋತ್ಸಾಹ ಕೂಡ ಅನನ್ಯವಾದದ್ದು,ಅವರಿಗೂ ನನ್ನ ಧನ್ಯವಾದಗಳು.

ಅಧ್ಯಾಪಕರಲ್ಲಿ ಬೋಧನೆಯ ಗುಣಮಟ್ಟ ವೃದ್ಧಿಗೊಳ್ಳಬೇಕಾದರೆ, ಸಂಶೋಧನೆ ಅತ್ಯಂತ ಅವಶ್ಯವೆಂದು ಹೇಳುವ ನಮ್ಮ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ರಾಘವೇಂದ್ರ ಪಟವಾರಿ ಅವರ ಮಾತು ನನ್ನ ಸಂಶೋಧನೆಗೆ ಪ್ರೇರಣೆಯನ್ನು ಒದಗಿಸಿತು. ಸಂಶೋಧನೆಯ ಹಾದಿಯಲ್ಲಿ ಆಗಾಗ ನನಗೆ ಸೂಕ್ತ ಮಾತುಗಳಿಂದ ಹುರಿದುಂಬಿಸಿದ ನನ್ನ ವಿದ್ಯಾಗುರುಗಳು ಆಗಿರುವ ಪ್ರೊ. ಪಟವಾರಿಯವರಿಗೆ ನನ್ನ ಪ್ರಣಾಮಗಳು. ನನ್ನ ಸಂಶೋಧನೆಗೆ ಪ್ರೇರಣೆ ನೀಡಿದ ಕಾಲೇಜಿನ

ಹಿರಿಯ ಸಹೋದ್ಯೋಗಿಗಳಾದ ಡಾ. ಆರ್.ಪಿ. ಶಂಕರ್, ಜೆಡ್.ಬಿ. ಹುಮರ್, ಎಂ.ಪ್ರಭುಶೆಟ್ಟಿ, ಸುರೇಶ ಡೊಂಗ್ರಿ, ಡಾ. ಎಂ.ಪಿ.ನಾಯಕ, ಪಂಡಿತ ಬಳಂಗಿ ಮತ್ತು ಶಿವಪುತ್ರ ಸರ್ವೋದಯ, ಡಾ. ಶಿವಶರಣಪ್ಪ ದಾಬಾ, ಹುಜುರ್ ಮೊಯಿನುದ್ದಿನ್, ಶಿವಶರಣಪ್ಪ ಬಿರಾದಾರ, ಅರುಣಿತ ಆಲ್‌ಮೇಲ್ಕರ್, ಅಶೋಕ ಮಟ್ಟಿ, ಶರಣಪ್ಪ ಮಾಳಗಿ, ಮನೋಜ್‌ಕುಮಾರ ಇವರಿಗೆಲ್ಲ ನನ್ನ ಅನಂತ ವಂದನೆಗಳು.

ನನ್ನ ಸಂಶೋಧನೆಗೆ ಅಗತ್ಯವಾದ ಗ್ರಂಥಗಳನ್ನು ನೀಡಿ ಸಹಕರಿಸಿದ ಗ್ರಂಥಪಾಲಕರಾದ ಶ್ರೀ ಎಸ್.ಎಂ. ಮೋರೆ ಮತ್ತು ಶ್ರೀ ಗುರುಲಿಂಗಯ್ಯ ಚಿಕ್ಕಮಠ ಅವರ ಉಪಕಾರವನ್ನು ಈ ಸಂದರ್ಭದಲ್ಲಿ ಸ್ಮರಿಸದಿರಲಾರೆ. ಸೂಕ್ತವಾದ ಸಲಹೆ ಸೂಚನೆಗಳನ್ನು ನೀಡಿ ಸಾಂದರ್ಭಿಕವಾಗಿ ಚರ್ಚಿಸಿ ಬರವಣಿಗೆಗೆ ಒಂದು ರೂಪಕೊಡುವಲ್ಲಿ ಸಹಕರಿಸಿದ ಸ್ನೇಹಿತಾದ ಡಾ. ರೋಲೆಕರ್ ನಾರಾಯಣ ಅವರಿಗೆ ನನ್ನ ಅನಂತ ಕೃತಜ್ಞತೆಗಳು. ಅವರ ಶ್ರೀಮತಿಯವರ ಸೌಜನ್ಯವನ್ನು ಮನದುಂಬಿ ಸ್ಮರಿಸುತ್ತಾ ಅವರಗೂ ವಂದನೆಗಳನ್ನು ಸಲ್ಲಿಸುತ್ತೆನೆ.

ಕ್ಷೇತ್ರಕಾರ್ಯದಲ್ಲಿ ಜೊತೆಗೆ ಬಂದು, ಬರವಣಿಗೆಯನ್ನು ನೇರ್ಪುಗೊಳಿಸುವಲ್ಲಿ ಶ್ರಮಿಸಿದ ಆತ್ಮಿಯ ಸ್ನೇಹಿತರಾದ ಸುಭಾಷ್ಚಂದ್ರ ಕೌಲಗಿ ಅವರ ಸಹಕಾರವನ್ನು ಯಾವತ್ತು ಮರೆಯಲಾರೆ ಹಾಗೆಯೇ ಅವರ ಶ್ರೀಮತಿ ನಿರ್ಮಲ ಕೌಲಗಿ ಅವರ ಉಪಕಾರವನ್ನು ಸ್ಮರಿಸದಿರಲಾರೆ. ಹಿರಿಯ ಸಹೋದರಿ ಸಮಾನರಾದ ಡಾ. ಮಲ್ಲಿಕಾ ಘಂಟಿಯವರು ತಮ್ಮ ಮೌಲಿಕ ಮಾತುಗಳಿಂದ ನನ್ನ ಸಂಶೋಧನಾ ಆಸಕ್ತಿಯನ್ನು ಹೆಚ್ಚಿಸಿದ್ದಾರೆ, ಆಗಾಗ ಸೂಕ್ತ ತಿಳುವಳಿಕೆ ನೀಡಿ ಉಪಕರಿಸಿದ ಅವರಿಗೆ ಅನಂತ ನಮನಗಳು, ಹಾಗೆಯೇ ನನ್ನ ವಿದ್ಯಾಗುರುಗಳಾದ ಡಾ. ಎಸ್. ಎಚ್.ಕಾವಂಟೆ, ಡಾ. ಬಿ.ಎಂ. ಬಾಯಿನ್ ಅವರನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತಾ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಸಂಶೋಧನೆಯ ಪ್ರಗತಿಯನ್ನು ಆಗಾಗ ವಿಚಾರಿಸುತ್ತ, ಸಕಾಲಕ್ಕೆ ಮುಗಿಸುವಂತೆ ಹುರುಪಿನ ಮಾತುಗಳಿಂದ ಪ್ರೋತ್ಸಾಹಿಸಿದ ಹಿರಿಯ ಸ್ನೇಹಿತರಾದ ಶ್ರೀ ರಘುನಾಥರೆಡ್ಡಿ ಪಾಟೀಲ್, ಶರಣಪ್ಪ ಮಾಸ್ತರ,ಸಿದ್ರಾಮಪ್ಪ, ನರಸಪ್ಪ ಮಾಸ್ತರ, ರಾಜಪ್ಪ, ಕಾಶಪ್ಪ,ಮಲ್ಲಿಕಾರ್ಜುನ ಗುಂಟಿ ಇವರೆಲ್ಲರಿಗೆ ನನ್ನ ಧನ್ಯವಾದಗಳು.

ನನ್ನ ಸಂಶೋಧನೆಯಲ್ಲಿ ಸಿಂಹಪಾಲು ಕ್ಷೇತ್ರಕಾರ್ಯ, ಭೇಟಿ ನೀಡಿದ ಸ್ಥಳಗಳಲ್ಲಿ ವಿವರವಾದ ಮಾಹಿತಿಯನ್ನು ಒದಗಿಸಿದ ಮಹನೀಯರಾದ ಜೆ. ಅಗಸ್ಟಿನ್ ನ್ಯಾಯವಾದಿಗಳು, ಶ್ರೀಮತಿ ವಿಜಯಲಕ್ಷ್ಮಿ ಮುಂಡರಗಿ, ವೆಂಕಟೇಶ ಬಿ., ಹಣ್ಮಂತ್ರಾಯ ಕುರಿಕೋಟಿ, ಬಸವರಾಜ ಕೊಂಕಲ್, ಶಾಂತಪ್ಪ ಡಂಬಲ, ದೇವಿಂದ್ರಪ್ಪ ಕರಿಕಳ್ಳಿ, ಭೀಮಣ್ಣ ಮೇಟಿ, ಶ್ರೀಶೈಲ ಪುಜಾರಿ,

ಮಲ್ಲಿಕಾರ್ಜುನ ಸಂಗವಾರ, ಮಲ್ಲಪ್ಪ, ದೇವಿಂದ್ರಪ್ಪ, ದಾಸನ್ ಹಣ್ಮಂತ, ಪಂಪಾಪತಿ ಪಾಟೀಲ್, ರಾಜಾ ವೆಂಕಟಪ್ಪ ನಾಯಕ, ರಾಜಾ ವಾಸುದೇವ ನಾಯಕ ಮತ್ತು ವಕ್ತೃಗಳಾದ, ಶ್ರೀ ಯಲ್ಲಪ್ಪ ಗಲಗ್, ದ್ಯಾವಪ್ಪ ಮಲ್ಲಪ್ಪ ಮತ್ತು ಸಾಬಣ್ಣ ಇವರೆಲ್ಲರಿಗೆ ನನ್ನ ಪ್ರಣಾಮಗಳು.

ನನ್ನ ಸಂಶೋಧನಾ ಕಾರ್ಯಕ್ಕೆ ಸೂಕ್ತ ಮಾಹಿತಿ ಒದಗಿಸಿದ ಜಿಲ್ಲೆಯ ಎಲ್ಲಾ ತಾಲೂಕ ಪಂಚಾಯಿತಿ ಅಧಿಕಾರಿಗಳಿಗೆ ಮತ್ತು ಗುಲಬರ್ಗಾ ವಿಶ್ವವಿದ್ಯಾಲಯ ಮತ್ತು ಹಂಪಿ ಕನ್ನಡ ವಿಶ್ವವಿದ್ಯಾಲಯದ ಎಲ್ಲಾ ಗ್ರಂಥಾಲಯ ಸಿಬ್ಬಂದಿ ವರ್ಗದವರಿಗೆ, ಸ್ನೇಹಿತರಿಗೆ, ಗುಲಬರ್ಗಾ ಜಿಲ್ಲೆಯಲ್ಲಿಯ ರಾಜಕೀಯದಲ್ಲಿರುವ ಬುಡಕಟ್ಟು ಸದಸ್ಯರಿಗೆ, ಅಧ್ಯಕ್ಷರಿಗೆ ಮತ್ತು ಉಪಾಧ್ಯಕ್ಷರಿಗೆ ಹಾಗೂ ಎಲ್ಲಾ ಬುಡಕಟ್ಟು ಸಮುದಾಯದ ಬಂಧುಗಳಿಗೆ ನನ್ನ ಕೃತಜ್ಞತೆಗಳು.

ಯಾವತ್ತು ನನ್ನ ಶ್ರೆಯೋಭಿವೃದ್ಧಿಯನ್ನು ಬಯಸುತ್ತ ನನ್ನ ಪ್ರಯತ್ನಶೀಲನನ್ನಾಗಿಸಿದ ನನ್ನ ತಂದೆ ತಾಯಿಗಳಾದ ಶ್ರೀ ಯಲ್ಲಪ್ಪ ಮತ್ತು ಶ್ರೀಮತಿ ಮಲ್ಲಮ್ಮ ಇಂದು ಅವರು ಬದುಕುಳಿದಿಲ್ಲ. ಆದರೂ ಅವರ ಚೈತನ್ಯ ಯಾವತ್ತು ನನಗೆ ಸ್ಪೂರ್ತಿಯ ಶಿಲೆಯಾಗಿದೆ. ಅವರನ್ನು ಈ ಸಂದರ್ಭದಲ್ಲಿ ಅಂತಃ ಕರಣ ಪೂರ್ವಕವಾಗಿ ಸ್ಮರಿಸಿಕೊಳ್ಳುತ್ತೇನೆ. ನನ್ನ ಬದುಕಿನ ಬೆಳವಣಿಗೆ ಯನ್ನು ಕಂಡು ಹರ್ಷಚಿತ್ತರಾಗಿ ಮೆಚ್ಚುಗೆಯನ್ನು ವ್ಯಕ್ತಪಡಿಸುವ ಎಲ್ಲಾ ಅಣ್ಣಂದಿರು-ಅತ್ತಿಗೆಯಂದಿರಿಗೆ ಅನಂತ ಕೃತಜ್ಞತೆಗಳು. ಚಿಕ್ಕಪ್ಪನೆಂಬ ಕಕ್ಕುಲತೆ ತೋರುವ ಅಣ್ಣಂದಿರ ಮಕ್ಕಳ ಅಕ್ಕರೆಯನ್ನು ನೆನೆಯದಿರಲಾರೆ. ನನ್ನ ಎಲ್ಲಾ ಅಕ್ಕ ತಂಗಿಯರ ಒಲುಮೆ ಭಾವದಿಂದರ ನಲುಮೆಯನ್ನು ಹೃದಯ ಪೂರ್ವಕ ಸ್ಮರಿಸುತ್ತೇನೆ.

ಅಳಿಯನ ಏಳಿಗೆ ಮುಕ್ತಕಂಠದಿಂದ ಬಣ್ಣಿಸುವ ಪ್ರೀತಿಯ ಅತ್ತೆ ಮಾವಂದಿರಾದ ಶ್ರೀ ಭೀಮಣ್ಣ ಮತ್ತು ಶ್ರೀ ಲಕ್ಷ್ಮಿದೇವಿ ಅವರಿಗೆ ಅನಂತ ಪ್ರಣಾಮಗಳು.

ಇನ್ನು ಮಡದಿಯ ಸಹಕಾರನ್ನು ಮರೆಯಲಾದೀತೇ ! ಸಂಶೋಧನೆಯ ಸಂದರ್ಭದಲ್ಲಿ ಮನೆಯ ಸಂಪೂರ್ಣ ಜವಾಬ್ದಾರಿಯನ್ನು ಸಮರ್ಥವಾಗಿ ನಿಭಾಯಿಸುತ್ತ, ಅನಂತ ಸಹಕಾರವನ್ನು ನೀಡಿದ ಪ್ರೀತಿಯ ಪತ್ನಿ ಸುಗುಣಾವತಿಯ ಹೃದಯವಂತಿಕೆಯನ್ನು ಸ್ಮರಿಸುವೆ. ಗದ್ದಲ ಗಲಾಟೆ ಮಾಡದೆ ಅಧ್ಯಯನಕ್ಕೆ ಅನುಕೂಲ ಮಾಡಿಕೊಟ್ಟ ಮುದ್ದು ಮಕ್ಕಳಾದ ಸೌಮ್ಯ, ಸಿಂಧು ಮತ್ತು ನವೀನ್‌ಕುಮಾರ ಇವರಿಗೆ ಪ್ರೀತಿಯ ನೆನೆಕೆಗಳು.

ಮನೆಯ ಎಲ್ಲರೀತಿಯ ಜವಾಬ್ದಾರಿಗಳನ್ನು ಹೊತ್ತು ಸಹಕಾರ ನೀಡಿದ ಅಣ್ಣನ ಮಕ್ಕಳಾದ ಸಾಯಬಣ್ಣ ಮತ್ತು ಮಲ್ಲಪ್ಪ ಇವರಿಗೂ ನನ್ನ ನೆನೆಕೆಗಳು.

ಅಂದವಾಗಿ ಬೆರಳಚ್ಚು ಮಾಡಿದ ಐ.ಎಸ್.ಸಿ.ಟಿ. ಗಣಕ ಯಂತ್ರದ ನಿರ್ದೇಶಕರಾದ ಶ್ರೀ ಖಾಜೀಂ ಹುಸೇನ್ ಮತ್ತು ಶ್ರೀ ಯೇಸುರಾಜ, ಶ್ರೀ ಮಲ್ಲಿಕಾರ್ಜುನ ಗಡ್ಡಿಮನಿ, ಶ್ರೀ ಪ್ರವೀಣಕುಮಾರ ಕರ್ಣಿ ಹಾಗೂ ಸಾದತ್ ಹುಸೇನ್, ಶ್ರೀನಿವಾಸ್ ಕಲಾಲ್ ಹಾಗೂ ಪುಟ ವಿನ್ಯಾಸ ಮಾಡಿಕೊಟ್ಟ ಶ್ರೀ ಎ. ಎಂ.ಕೃಪಾಶಂಕರ್ ಇವರಿಗೆಲ್ಲ ನನ್ನ ಕೃತಜ್ಞತೆಗಳು.

ಸಂಶೋಧನೆಗೆ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲ ವಿದ್ಯಾರ್ಥಿಗಳನ್ನು ಹೃದಯ ಪೂರ್ವಕವಾಗಿ ಸ್ಮರಿಸುತ್ತೇನೆ.

ಚನ್ನಮಲ್ಲಪ್ಪ ಜುಬೀರ್

## ಪರಿವಿಡಿ

## ೧.೧. ಪೀಠಿಕೆ

ನಿಸರ್ಗ ನಿರ್ಮಿತ ಸೃಷ್ಟಿ ಮತ್ತು ಸೃಷ್ಟಿಕೃತ ಜೀವಿಗಳ ವಿಷಯ ನಿಗೂಢವಾಗಿದ್ದು, ವೈವಿಧ್ಯಮಯವಾಗಿದೆ. ಅದರ ಉಗಮ, ವಿಕಾಸ ಇತ್ಯಾದಿಗಳ ಮೇಲೆ ಅನೇಕ ವಿಜ್ಞಾನಿಗಳು ತಮ್ಮ ಗಮನಹರಿಸಿದ್ದಾರೆ. ಜೀವಿಯ ವಿಕಾಸವು ಅಕಶೇರುಕದಿಂದ ಕಶೇರುಕ ಜೀವಿಗಳಾಗಿ ರೂಪಾಂತರ ಹೊಂದುತ್ತ ಆದಿಮಾನವ, ಮಾನವ, ಅಧುನಿಕ ಅಥವಾ ಗಣಕಯುಗದ ಮಾನವ ಇತ್ಯಾದಿಗಳಾಗಿ ಕಾಲಾಂತರದಲ್ಲಿ ವಿಕಶಿಸಿದ ಅಂಶಗಳನ್ನು ವಿಕಾಸವಾದ ಹೇಳುತ್ತದೆ.

ಸೃಷ್ಟಿಕೃತ ಸರಳ ಜೀವನ ಗಿರಿಜನ(ಆದಿವಾಸಿ)ರದಾದರೆ, ಕೃತಕ ಮತ್ತು ಸಂಕೀರ್ಣವಾದ ಜೀವನ ನಗರವಾಸಿ ಜನರದಾಗಿದೆ. ಇಂದು ಸಮಾಜೀಕರಣ, ಸಂಸ್ಕೃತೀಕರಣ, ನಗರೀಕರಣ, ಪಾಶ್ಚಿಮಾತ್ಯೀಕರಣ, ಅಧುನೀಕರಣ ಮತ್ತು ಸರಕಾರದ ಯೋಜನೆ ಇತ್ಯಾದಿಗಳಿಂದಾಗಿ ನಗರ, ಗ್ರಾಮ ಮತ್ತು ಗಿರಿಜನ(ಆದಿವಾಸಿ) ಪ್ರದೇಶಗಳಲ್ಲಿ ವಾಸಿಸುವ ಜನರ ಜೀವನದ ಮೇಲೆ ಗಣನೀಯ ಪ್ರಮಾಣದ ಪ್ರಭಾವ ಬೀರಿ ಜೀವನದಲ್ಲಿ ಬದಲಾವಣೆ ತಂದಿದೆ, ತರುತ್ತಲಿದೆ. ಹೀಗಾಗಿ ಗುಲಬರ್ಗಾ ಜಿಲ್ಲೆಯ ಬುಡಕಟ್ಟುಗಳ ಮೂಲ ಸಂಸ್ಕೃತಿ ಮತ್ತು ಪರಂಪರೆಯಲ್ಲಿ

ಸಾಕಷ್ಟು ಬದಲಾವಣೆಯಾದದ್ದು ಕಂಡು ಬಂದಿದೆ. ಈ ಬದಲಾವಣೆ ಜಿಲ್ಲೆಯ ಬುಡಕಟ್ಟುಗಳ ಸಂಸ್ಕೃತಿಯ ಮೇಲೆ ಗಣನೀಯ ಪ್ರಮಾಣದಲ್ಲಿ ಆಗದೆ ಅವುಗಳ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಜೀವನದಲ್ಲಿ ಸಾಕಷ್ಟು ಬದಲಾವಣೆ ತಂದಿದೆ. ೧೯೯೩ರ ನಂತರದಲ್ಲಿ ಪಂಚಾಯತ ಚುನಾವಣೆಯಿಂದ ಬುಡಕಟ್ಟುಗಳು ರಾಜಕೀಯದಲ್ಲಿ ಸಕ್ರೀಯವಾಗಿ ಭಾಗವಹಿಸಲು ಹಾಗೂ ಪಂಚಾಯತಿಗಳಿಗೆ ಆಯ್ಕೆಯಾಗಿ ಪ್ರಜೆಗಳ ಸೇವೆ ಯಲ್ಲಿ ತೊಡಗಲು ಏಷ್ಟರ ಮಟ್ಟಿಗೆ ಸಫಲವಾಗಿವೆ ಎಂಬುವುದನ್ನು ಅರಿಯುವ ವಿಸ್ತೃತ ಅಧ್ಯಯನವೇ ಇದಾಗಿದೆ.

## ೧.೨. ಊಹೆಗಳು

### ೧.೨.೧ ಮೀಸಲಾತಿಯು ರಾಜಕೀಯ ಅವಕಾಶವನ್ನು ಕಲ್ಪಿಸುವುದು

"ಗೋಡೆಗೆ ಇದ್ದವನು ಲೋಡಿಗೆ, ಲೋಡಿಗೆ ಇದ್ದವನು ಗೋಡೆಗೆ " ಎಂಬುವ ನಾಣ್ಣುಡಿಯು ಸತ್ಯ. ಏಕೆಂದರೆ ಪ್ರಾಚೀನ ಕಾಲದಿಂದಲೂ ಕಾಡಿನಲ್ಲಿ ಇದ್ದು, ಅದನ್ನೇ ತನ್ನ ಸರ್ವಸ್ವ ಎಂದು ಆದಿಮಾನವ ಭಾವಿಸಿದ್ದನು. ಅಕ್ಷರದ ಅರಿವು ಇಲ್ಲದೆ ಅಲೆಮಾರಿ ಜೀವನವನ್ನು ಅನುಸರಿಸುವ ಬುಡಕಟ್ಟು ಮಾನವ ಇಂದು ಸಂಸತ್ತಿನಲ್ಲಿ ಕುಳಿತು ಪ್ರಜೆಗಳ ಕಲ್ಯಾಣಕ್ಕಾಗಿ ಅಗತ್ಯವಾದ ಕಾನೂನುಗಳ ಬಗ್ಗೆ ಯೋಚಿಸುತ್ತ ಅಧಿಕಾರದ ಗದ್ದುಗೆ ಏರಲು ಮೀಸಲಾತಿಯು ಸಹಾಯಕವಾಗುವುದು.

ಸರಕಾರಗಳು ರೂಪಿಸಿದ ಮೀಸಲಾತಿಯ ಸೌಲಭ್ಯಗಳು ಬುಡಕಟ್ಟು ಸಮುದಾಯ ಗಳಿಗೆ ವರವಾಗಿ ಪರಿಣಮಿಸುತ್ತಿವೆ. ರಾಜಕೀಯ, ಸರಕಾರ, ಆಡಳಿತ, ಕಾನೂನು ಹಾಗು ಚುನಾವಣೆ ಇವುಗಳ ಗಂಧ ಗಾಳಿಯೇ ಗೊತ್ತಿಲ್ಲದ ಬುಡಕಟ್ಟು ಮಾನವ ಅವುಗಳನ್ನು ಅರಿತು ಅದರಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದಾನೆ. ಮೀಸಲಾತಿಯ ಸೌಲಭ್ಯಗಳು ಎಲ್ಲಾ ಬುಡಕಟ್ಟು ಸಮುದಾಯಗಳಿಗೆ ರಾಜಕೀಯ ಅವಕಾಶವನ್ನು ಕಲ್ಪಿಸುತ್ತಿವೆ.

### ೧.೨.೨. ಬಹುಸಂಖ್ಯಾತ ಜಾತಿಯ ಮತದಾರರ ಆಸಕ್ತಿಯು ಬುಡಕಟ್ಟು ರಾಜಕೀಯವನ್ನು ನಿರ್ಧರಿಸುವುದು

ಪ್ರತಿಯೊಂದು ಮತಕ್ಷೇತ್ರ ಹಲವಾರು ಮತದಾರರನ್ನು ಒಳಗೊಂಡಿರುತ್ತದೆ. ಆ ಎಲ್ಲಾ ಮತದಾರರು ಒಂದೇ ಧರ್ಮ, ಜಾತಿ, ಸಮುದಾಯಕ್ಕೆ ಸೇರಿರದೆ, ಹಲವಾರು ಜಾತಿಗಳು,

ಧರ್ಮಗಳು ಮತ್ತು ಬುಡಕಟ್ಟುಗಳಿಗೆ ಸೇರಿದವರಾಗಿರುತ್ತಾರೆ. ಆದರೆ ಚುನಾವಣೆಯ ವೇಳೆಯಲ್ಲಿ ಪ್ರತಿನಿಧಿಯನ್ನು ಆಯ್ಕೆ ಮಾಡುವಾಗ ಆ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಬಹು ಸಂಖ್ಯಾತ ಜಾತಿಯ ಮತದಾರರ ಇಚ್ಛೆಯೇ ಅಂತಿಮವಾಗು ವುದು. ಈ ಬಹುಸಂಖ್ಯಾತರ ಆಸಕ್ತಿ ಮತ್ತು ಅಭಿರುಚಿಯು ಬುಡಕಟ್ಟು ರಾಜಕೀಯವನ್ನು ನಿರ್ಧರಿಸುವುದು.

### ೧.೨.೩. ಮೀಸಲಾತಿ ಕ್ಷೇತ್ರದಿಂದ ಆಯ್ಕೆಗೊಂಡ ರಾಜಕೀಯ ಸದಸ್ಯರು ಸಾಮಾನ್ಯ ಸದಸ್ಯರಿಗಿಂತ ಅಸಮರ್ಥರೇನು ಇರುವುದಿಲ್ಲ

ಸಾಮಾನ್ಯ ಕ್ಷೇತ್ರದಿಂದ ಆಯ್ಕೆಯಾದ ಸದಸ್ಯರು ವರ್ಚಸ್ಸಿನಿಂದ, ಘನತೆ ಮತ್ತು ಅಂತಸ್ತುಗಳಿಂದ ಆಯ್ಕೆಯಾಗಿದ್ದಾರೆ ಎಂದು ತಿಳಿದು, ಮೀಸಲಾತಿ ಸೌಲಭ್ಯಪಡೆದು ಆಯ್ಕೆಯಾದ ಸದಸ್ಯರನ್ನು ಬ್ಯಾಕ್‌ಡೋರ್‌ನಿಂದ (ಹಿಂಬಾಗಿಲು) ಆಯ್ಕೆಯಾದವರು ಎಂದು ಭಾವಿಸುವದು ತಪ್ಪು. ಏಕೆಂದರೆ ರಾಜಕೀಯ ಆಸಕ್ತಿ, ಅರಿವು, ಮತ್ತು ಅಭಿರುಚಿಗಳು ವ್ಯಕ್ತಿಯಿಂದ ವ್ಯಕ್ತಿಗೆ, ಜಾತಿಯಿಂದ ಜಾತಿಗೆ ಮತ್ತು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುವುದು ಸಹಜ. ಆದರೆ ಎಲ್ಲಾ ಸದಸ್ಯರನ್ನು ಒಂದೇ ದೃಷ್ಟಿಕೋನದಿಂದ ಅಳೆಯುವದು ತಪ್ಪು. ಇಂದು ರಾಜಕೀಯವು ಎಲ್ಲರಿಗೆ ಆಸಕ್ತಿಪೂರ್ಣ ವಿಷಯವಾಗಿದೆ. ಜನಸೇವೆ, ಅಧಿಕಾರದ ವ್ಯಾಮೋಹ ಎಲ್ಲರಿಗೆ ಇರುತ್ತದೆ. ಆದ್ದರಿಂದ ಮೀಸಲಾತಿ ಕ್ಷೇತ್ರ ದಲ್ಲಿ ಆಯ್ಕೆಗೊಂಡ ರಾಜಕೀಯ ಸದಸ್ಯರು ಸಾಮಾನ್ಯ ಸದಸ್ಯರಿಗಿಂತ ಅಸಮರ್ಥರೇನು ಇರಲಿಕ್ಕಿಲ್ಲ.

## ೧.೩. ಅಧ್ಯಯನದ ಸ್ವರೂಪ

ಗುಲಬರ್ಗಾ ಜಿಲ್ಲೆಯಲ್ಲಿ ೨೦ ಬುಡಕಟ್ಟು ಸಮುದಾಯಗಳಿರುವವು. ೧೯೯೧ರ ಜನಗಣತಿಯ ಅಂಕಿ ಅಂಶಗಳ ಪ್ರಕಾರ ಒಟ್ಟು ೧೧೦೯೩೫( ಪುರುಷರು ೫೪೮೭೪, ಸ್ತ್ರೀಯರು ೫೬೧೬೧) ಬುಡಕಟ್ಟು ಜನರಿರುವರು. ಜಿಲ್ಲೆಯಲ್ಲಿ ವಾಸಿಸುವ ಬುಡಕಟ್ಟುಗಳಲ್ಲಿ ಶೇಕಡಾ ೮೮ರಷ್ಟು ಗ್ರಾಮೀಣ ಮತ್ತು ಗುಡ್ಡಗಾಡು ಪ್ರದೇಶಗಳಲ್ಲಿ ವಾಸಿಸುವವರಾಗಿದ್ದರೆ, ನಗರ ಪ್ರದೇಶಗಳಲ್ಲಿ ಕೇವಲ ಶೇಕಡಾ ೧೨ರಷ್ಟು ಜನ ವಾಸಿಸುತ್ತಾರೆ.

೧೯೮೧ರ ಜನಗಣತಿಯ ವರದಿಲ್ಲಿ ದಾಖಲಾಗಿರುವಂತೆ ಪ್ರಕಾರ ಗುಲಬರ್ಗಾ ಜಿಲ್ಲೆಯಲ್ಲಿ ವಾಸಿಸುವ ಬುಟಕಟ್ಟು ಸಮುದಾಯಗಳೆಂದರೆ, ಆದಿಯಾನ ೨೭, ಬಾವಚ, ಬಾಮ್ಚು ೦೧,

ಭಿಲ್ ೦೫, ಚೋಧರಾ ೦೫, ಗೊಂಡ, ನಾಯ್ಕಪೋಡ್,ರಾಜಗೊಂಡ ೮೦೭, ಹಕ್ಕಿಪಿಕ್ಕಿ ೦೧, ಇರುಳಿಗ ೭೪, ಜೇನುಕುರುಬ ೧೮೭, ಕಾಡುಕುರುಬ ೧೨೮೮, ಕಥೋಡಿ ೪೩, ಕೋಳಿಧೋರ್ ೫೬೭, ಟೋಕರೆ ಕೋಳಿ, ಕೊರಗ ೨೦, ಕೋಯ, ಭೀನೆಕೋಯ, ರಾಜ್‌ಕೋಯ ೧೨೪೯, ಕುಡಿಯ, ಮೇಲಕುಡಿಯ ೦೧, ಮೇದ ೧೧೧೮, ನಾಯಕ ೨೪೧೬, ಪಲ್ಲಿಯಾನ ೦೯, ರಠಾವ ೦೧, ಯರವ ೩೨. ಒಟ್ಟು ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಜನಸಂಖ್ಯೆ ೭೮೪೧. ಈ ಬುಡಕಟ್ಟುಗಳು ಹೆಚ್ಚುಹೆಚ್ಚಾಗಿ ಬೆಟ್ಟಗುಡ್ಡ ಪ್ರದೇಶ ಗಳಲ್ಲಿ ವಾಸಿಸುತ್ತಿದ್ದು ಇನ್ನು ತಮ್ಮ ಪರಂಪರೆಯನ್ನು ಉಳಿಸಿಕೊಂಡು ಬಂದಿವೆ. ೨೧ನೇ ಶತಮಾನದ ಗಣಕಯುಗದಲ್ಲಿ ಮಾನವ ಬದುಕು ಸಾಗಿರುವಾಗ ಹೆಚ್ಚಿನ ಬುಡಕಟ್ಟು ಸಮುದಾಯಗಳು ಇನ್ನು ತಮ್ಮ ಕುಲಕಸುಬನ್ನೇ ಆಶ್ರಯಿಸಿ ಜೀವನ ಸಾಗಿಸುತ್ತಿವೆ. ನಗರೀಕರಣ, ಔದ್ಯೋಗೀಕರಣ, ಶಿಕ್ಷಣದ ಪ್ರಭಾವ ಮತ್ತು ಸರಕಾರದ ವಿಶೇಷ ಸೌಲಭ್ಯ ಮುಂತಾದ ಅಂಶಗಳು ಇವರಿಗೆ ಇಂದು ಸ್ಪಂದಿಸುತ್ತಿದ್ದು ಇವರ ಜೀವನ ಕ್ರಮದಲ್ಲಿ ಹೆಚ್ಚಿನ ಬದಲಾವಣೆ ತರುತ್ತಿರುವುದು ಗಮನಾರ್ಹ ಸಂಗತಿ. ಅಕ್ಷರ ಜ್ಞಾನ, ಸಾಮಾಜಿಕ ಪರಿಸರದ ಅರಿವು ಮತ್ತು ಆರ್ಥಿಕ ಬದಲಾವಣೆಯ ಜೊತೆಗೆ ರಾಜಕೀಯ ಪ್ರಜ್ಞೆಯೂ ಇವರಲ್ಲಿ ಮೂಡುತ್ತಿರುವದು, ಪ್ರಜಾಪ್ರಭುತ್ವದ ಯಶಸ್ವಿಗೆ ಮಹತ್ವದ ತಿರುವಾಗಿದೆ ಎಂದು ಹೇಳಬಹುದು.

೧೯೯೩ರಲ್ಲಿಯ ಕರ್ನಾಟಕ ಸರಕಾರದ ಪಂಚಾಯತ ರಾಜ್ ವ್ಯವಸ್ಥೆಯ ಜಾರಿಯಿಂದಾಗಿ ಸಮಾಜದ ಎಲ್ಲ ವರ್ಗಗಳಿಗೂ ಸರಕಾರಿ ಮತ್ತು ರಾಜಕೀಯ ಕಾರ್ಯ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಡಲಾಗಿದೆ. ಗ್ರಾಮ ಪಂಚಾಯತ್, ತಾಲೂಕಾ ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್, ನಗರ ಪಾಲಿಕೆ ನಗರಸಭೆ, ಪುರಸಭೆ, ಕ್ಷೇತ್ರಗಳಲ್ಲಿ ಮೀಸಲಾತಿ ಸೌಲಭ್ಯ ದೊರಕಿದೆ. ವಿಧಾನ ಸಭೆ ಮತ್ತು ಲೋಕ ಸಭೆ ಗಿಂತಲೂ, ವಿಶೇಷವಾಗಿ ಗ್ರಾಮ ಪಂಚಾಯತಿ, ತಾಲೂಕಾ ಪಂಚಾಯತಿ ಹಾಗೂ ಜಿಲ್ಲಾ ಪಂಚಾಯತಿಯ ರಾಜಕೀಯದಲ್ಲಿ ಸಮಾಜದ ಎಲ್ಲ ವರ್ಗದ ಜನರಿಗೆ ತಮ್ಮನ್ನು ತೊಡಗಿಸಿ ಕೊಳ್ಳಲು ಹೆಚ್ಚು ಅವಕಾಶ ಕಲ್ಪಿಸಲಾಗಿದೆ. ಬುಡಕಟ್ಟು ಜನರು ಇದರಿಂದ ಹೊರತಾಗಿಲ್ಲವೆಂದು ಹೇಳಬಹುದು. ಇದೊಂದು ರೀತಿಯ ಆರೋಗ್ಯಕರ ಲಕ್ಷಣವಾದರೂ ಇದರ ಸಾಧಕ-ಬಾಧಕಗಳಂತೂ ಇದ್ದೇ ಇವೆ ಎನ್ನುವ ವಿಚಾರ ಗಮನಾರ್ಹವಾದದ್ದು.

೧೯೯೩ರ ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಗುಲಬರ್ಗಾ ಜಿಲ್ಲೆಯ ಹತ್ತು ತಾಲೂಕಗಳಲ್ಲಿ ಶೇ ೩ರಷ್ಟು ಮೀಸಲಾತಿ ಸೌಲಭ್ಯವನ್ನು ಬುಡಕಟ್ಟು ಸಮುದಾಯಗಳಿಗೆ ಕಲ್ಪಿಸಲಾಗಿದೆ. ಈ ಮೀಸಲಾತಿಯಿಂದ ಎಲ್ಲ ವರ್ಗದವರಿಗೆ ಮತ್ತು ಬುಡಕಟ್ಟು ಸಮುದಾಯ ಗಳಿಗೆ ಅಧಿಕಾರದ ಆಸಕ್ತಿ ಮತ್ತು ರಾಜಕೀಯ ಪ್ರಜ್ಞೆ ಬೆಳಿಸಿಕೊಳ್ಳಲು ಅನುಕೂಲವಾಗಿದೆ. ೧೯೯೩ರ ಚುಣಾವಣೆಯಲ್ಲಿ ಆಯ್ಕೆಯಾದ ಬುಡಕಟ್ಟು ಸದಸ್ಯರ ವಿವರ ಹೀಗಿರುವದು: ೨೮೩ ಗ್ರಾಮ ಪಂಚಾಯತ, ೧೯ ತಾಲೂಕ ಪಂಚಾಯತ ಹಾಗೂ ೦೩ ಜನ ಜಿಲ್ಲಾ ಪಂಚಾಯತ ಸದಸ್ಯರಿರುವರು. ಇವರು ಸಕ್ರೀಯವಾಗಿ ಸರಕಾರ ಮತ್ತು ಆಡಳಿತಾತ್ಮಕ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿರುವುದು ಪ್ರಸ್ತುತ ಸಮೀಕ್ಷೆಯಿಂದ ಗೊತ್ತಾಗಿದೆ. ಈಗಾಗಲೇ ಜಿಲ್ಲೆಯಲ್ಲಿ ಬುಡಕಟ್ಟು ಸಮುದಾಯದ ಮಾಜಿ ಸಚಿವರು ಮತ್ತು ಹಾಲಿ ವಿಧಾನ ಸಭೆಯ ಸದಸ್ಯರು ಇದ್ದು ಬುಡಕಟ್ಟು ರಾಜಕೀಯ ಪ್ರಜ್ಞೆಯನ್ನು ಎತ್ತಿ ತೋರಿಸುತ್ತದೆ.

ಮಹಾತ್ಮಾ ಗಾಂಧೀಜಿಯವರ ಕನಸಿನ **ಗ್ರಾಮರಾಜ್ಯ** ಅಥವಾ **ಗ್ರಾಮಸ್ವರಾಜ್ಯ**, ಇಂದು ನನಸಾದರೆ ಮನುಷ್ಯನ ಸರ್ವತೋಮುಖ ಏಳಿಗೆ ಸಾಧ್ಯ. ಈ ಹಿನ್ನೆಲೆಯಿಂದ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಸಮುದಾಯಗಳ ಅಧ್ಯಯನ ಅವಶ್ಯವಾಗಿದೆ. ಜಿಲ್ಲೆಯ ಬುಡಕಟ್ಟುಗಳು ಸಾಮಾಜಿಕ, ಶೈಕ್ಷಣಿಕ ಮತ್ತು ಆರ್ಥಿಕ ಸ್ಥಿತಿಗತಿಗಳ ಹಿನ್ನೆಲೆಯಲ್ಲಿ ಅವರ ರಾಜಕೀಯವನ್ನು ಕುರಿದು ಅಧ್ಯಯನಿಸುವುದು ಈ ಸಂಶೋಧನಾಧ್ಯಯನದ ಪ್ರಮುಖ ಉದ್ದೇಶವಾಗಿದೆ. ಈ ಅಧ್ಯಯನದ ಭೌಗೋಳಿಕ ವ್ಯಾಪ್ತಿಯನ್ನು ಗುಲಬರ್ಗಾ ಜಿಲ್ಲೆಯ ಎಲ್ಲ ಬುಡಕಟ್ಟುಗಳ ರಾಜಕೀಯಕ್ಕೆ ಮಾತ್ರ ಸೀಮಿತ ಗೊಳಿಸಲಾಗಿದೆ.

## ೧.೪. ಅಧ್ಯಯನದ ಮಹತ್ವ

ಆದಿವಾಸಿಯಾಗಿ ಬದುಕು ಪ್ರಾರಂಭಿಸಿದ ಬುಡಕಟ್ಟು ಮಾನವನು ಇಂದು ನಾಗರಿಕತೆಯತ್ತ ತನ್ನ ಒಲವನ್ನು ತೋರಿಸುತ್ತಿರುವುದು ಸಾಮಾಜಿಕ ಸಾರ್ವತ್ರಿಕ ಸತ್ಯ. ಕಾಡು ನಾಡಾಗಿ, ನಾಡು ನಗರವಾಗಿ ತೀವ್ರವಾಗಿ ಪರಿವರ್ತನೆ ಹೊಂದುತ್ತಿರುವಾಗ ಆದಿಮಾನವನು ಕಾಡಿನಲ್ಲಿ ಪ್ರಾಣಿ ಪಕ್ಷಿಗಳನ್ನು ಬೇಟೆಯಾಡಿ ಜೀವನ ಸಾಗಿಸುವ ಕಾಲ ಇಂದು ಕಣ್ಮರೆಯಾಗುತ್ತಿದೆ. ಬುಡಕಟ್ಟು ಮಾನವನು ಸಂಸ್ಕೃತಿಯಿಂದ ಅಥವಾ ನಾಗರಿಕತೆಯಿಂದ ದೂರ ಉಳಿದು ದಿನವಿಡಿ

ಆಹಾರಕ್ಕಾಗಿ ನಿರಂತರ ಹೋರಾಟ ಮಾಡುವದರ ಜೊತೆಗೆ ತನ್ನದೇ ಆದ ಕತ್ತಲೆಯ ಪ್ರಪಂಚದಲ್ಲಿ ವಾಸಿಸುತ್ತಿದ್ದನು.

ಹೀಗಾಗಿ ಇಂದು ಅದೇ ಬುಡಕಟ್ಟು ಧುರೀಣರು ಸಂಸತ್ತಿನಲ್ಲಿ ಕುಳಿತು ದೇಶದ ಅಭಿವೃದ್ಧಿ ಹಾಗೂ ಪ್ರಜೆಗಳ ಸರ್ವತೋಮುಖ ಬೆಳವಣಿಗೆಗಾಗಿ ಅಗತ್ಯವಾದ ನಿಯಮಗಳನ್ನು ರಚಿಸುವುದರಲ್ಲಿ, ಇತರ ಸಮುದಾಯಗಳ ನಾಯಕರ ಜೊತೆ ಸಕ್ರಿಯವಾಗಿ ಭಾಗವಹಿಸುತ್ತಿರುವರು. ಕೇಂದ್ರ ಮತ್ತು ರಾಜ್ಯ ಸರಕಾರಗಳು ಪ್ರಜಾಪ್ರಭುತ್ವದ ಡಿಯಲ್ಲಿ ಬುಡಕಟ್ಟು ಸಮುದಾಯಗಳಿಗೆ ರಾಜಕೀಯದಲ್ಲಿಯೂ ಮೀಸಲಾತಿಯ ಸೌಲಭ್ಯವನ್ನು ಕಲ್ಪಿಸಿವೆ.

ಕರ್ನಾಟಕ ಸರಕಾರವು ರಾಜಕೀಯ ಅಧಿಕಾರವನ್ನು ವಿಕೇಂದ್ರಿಕರಣಗೊಳಿಸಿದೆ. ಪಂಚಾಯತ್ ರಾಜ್ ವ್ಯವಸ್ಥೆಯ ಜಾರಿಯಿಂದಾಗಿ ಸಮಾಜದ ಎಲ್ಲಾ ವರ್ಗದ ಜನರಿಗೆ ರಾಜ್ಯದ ರಾಜಕೀಯದಲ್ಲಿ ಭಾಗವಹಿಸಲು ಅವಕಾಶ ದೊರೆತಿದೆ. ಈ ಹಿನ್ನೆಲೆಯಿಂದ ಬುಡಕಟ್ಟುಗಳ ರಾಜಕೀಯ ಅಧ್ಯಯನ ಅವಶ್ಯವಾಗಿದೆ. ಬುಡಕಟ್ಟುಗಳ ರಾಜಕೀಯ ಬದುಕಿಗೆ ಹೊಸ ದಿಕ್ಕು ತೋರಿಸುವಲ್ಲಿ ಮೀಸಲಾತಿ ಹೇಗೆ ಸಹಾಯಕವಾಗಿದೆ ಎಂಬುದನ್ನು ಪತ್ತೆ ಮಾಡುವಲ್ಲಿ ಈ ಅಧ್ಯಯನ ವಿಶೇಷ ಮಹತ್ವವನ್ನು ಪಡೆದಿದೆ.

ಸ್ಥಳೀಯ ಸಂಸ್ಥೆಗಳಲ್ಲಿ ಬುಡಕಟ್ಟು ನಾಯಕರು ಜನಸೇವೆ ತಮ್ಮ ಉಸಿರೆಂದು ಭಾವಿಸಿ ನಿಸ್ವಾರ್ಥತೆಯಿಂದ ತಮ್ಮನ್ನು ತಾವು ರಾಜಕೀಯದಲ್ಲಿ ತೊಡಗಿಸಿಕೊಂಡಿದ್ದಾರೆ. ಸರಕಾರದ ಗುರಿಗಳನ್ನು ಈಡೇರಿಸುವದು ತಮ್ಮ ಕರ್ತವ್ಯವೆಂದು ತಿಳಿದು ಶ್ರಮಿಸುವ ಬುಡಕಟ್ಟು ನಾಯಕರ ಸಾಧನೆಗಳನ್ನು ಮತ್ತು ಅದರ ರಾಜಕೀಯ ಹಿನ್ನಲೆಯನ್ನು ಅರಿಯುವದು ಮಹತ್ವದ್ದಾಗಿದೆ. ಸಮಾಜದ ತೀರ ಕೆಳವರ್ಗದ ಹಾಗೂ ಎಲ್ಲಾ ಸೌಲಭ್ಯಗಳಿಂದ ಸಾವಿರಾರು ವರ್ಷಗಳಿಂದಲೂ ವಂಚಿತರಾಗಿ ಕಾಡು ಮೇಡುಗಳಲ್ಲಿ, ಪ್ರಾಣಿಯಂತೆ ಜೀವಿಸುತ್ತಿರುವ ಬುಡಕಟ್ಟುಗಳ ಬದುಕಿಗೆ ಆಶಾದಾಯಕ ವಿಚಾರ ನಡೆದದ್ದು ಸ್ವಾತಂತ್ರ್ಯ ನಂತರದ ಕಾಲದಲ್ಲಿ. ಭಾರತೀಯ ಸಂವಿಧಾನ ೩೪೧ರ ಮತ್ತು ೩೪೨ನೇ ವಿಧಿಯ ಪ್ರಕಾರ ಬುಡಕಟ್ಟುಗಳ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಹಾಗೂ ರಾಜಕೀಯ ಕ್ಷೇತ್ರದಲ್ಲಿ ಸ್ಥಾನಮಾನ ಒದಗಿಸಿಕೊಡುವಲ್ಲಿ ವಿಶೇಷ ಕಾನೂನು ರೂಪಿಸಲಾಯಿತು. ಇವುಗಳ ಜಾರಿಯಿಂದಾಗಿ ಅವರಿಗೆ ಹೆಚ್ಚಿನ ಸೌಲಭ್ಯಗಳು ದೊರಕಿವೆ.

ನಿಧಾನವಾಗಿಯಾದರೂ ಅವರಲ್ಲಿ ಸಾಮಾಜಿಕ, ರಾಜಕೀಯ ಪ್ರಜ್ಞೆ ಮೂಡುತ್ತಿದ್ದು, ಶಿಕ್ಷಣದ ಬಗ್ಗೆ ಅರಿವು ಅವರಲ್ಲಿ ಉದಯಿಸಿದೆ ಎಂದು ಪತ್ತೆ ಹಚ್ಚುವದಕ್ಕಾಗಿ ಪ್ರಸ್ತುತ ಅಧ್ಯಯನದ ಅವಶ್ಯಕತೆ ಇದೆ.

ಗುಲಬರ್ಗಾ ಜಿಲ್ಲೆಯು ಹಲವಾರು ಶರಣರಿಗೆ ಸಂತರಿಗೆ, ವೀರ ಶೂರರಿಗೆ ಜನ್ಮ ನೀಡಿದೆ. ಈ ಜಿಲ್ಲೆಯಲ್ಲಿ ಶರಣರ ಬಗ್ಗೆ ಹಾಗೂ ಧಾರ್ಮಿಕ ಸಂತರ ಬಗ್ಗೆ ಹಲವಾರು ಸಂಶೋಧಕರು, ಸಂಶೋಧನ ಕಾರ್ಯವನ್ನು ಕೈಗೊಂಡು ಇವರನ್ನು ಹೊರಪ್ರಪಂಚಕ್ಕೆ ಪರಿಚಯಿಸಿದ್ದಾರೆ. ಆದರೆ ಜಿಲ್ಲೆಯಲ್ಲಿ ತಾಯ್ನಾಡಿಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡ ಬುಡಕಟ್ಟು ವೀರರ ಬಗ್ಗೆ ಹಾಗೂ ಇವರ ಸಾಹಸ, ಸಾಧನೆ ಮತ್ತು ಕ್ರಾಂತಿಕಾರಕ ವಿಚಾರ ಹಾಗು ರಾಜಕೀಯ ಬದುಕಿನ ಬಗ್ಗೆ, ಯಾವುದೆ ರೀತಿಯ ಲಿಖಿತ ಕೃತಿಗಳು ಅಥವಾ ಸಂಶೋಧನ ಕಾರ್ಯ ಇದುವರೆಗೂ ನಡೆಯಲಿಲ್ಲ. ಹೀಗಾಗಿ ಈ ಜಿಲ್ಲೆಯ ಬುಡಕಟ್ಟು ರಾಜಕೀಯ ಚರಿತ್ರೆ ಬೆಳಕು ಕಾಣಲಿಲ್ಲ. ಆದ್ದರಿಂದ ಜಿಲ್ಲೆಯ ಬುಡಕಟ್ಟು ರಾಜಕೀಯ ನಾಯಕರ ಬದುಕನ್ನು ಮತ್ತು ಇವರ ರಾಜಕೀಯ ಪಾತ್ರವನ್ನು ಸಂಶೋಧಿಸಿ ಹೊರಪ್ರಪಂಚಕ್ಕೆ ಹಾಗು ಮುಂದೆ ಬರುವ ಸಂಶೋಧಕರಿಗೆ ಅರ್ಪಿಸುವುದು ಮಹತ್ವದ್ದಾಗಿದೆ .

೧೯೯೩ರ ಪಂಚಾಯತಿ ಚುನಾವಣೆಯಲ್ಲಿ ಜಿಲ್ಲೆಯ ಹತ್ತು ತಾಲೂಕಗಳ ವ್ಯಾಪ್ತಿಯಲ್ಲಿ ಗ್ರಾ.ಪಂ., ತಾ.ಪಂ. ಮತ್ತು ಜಿ.ಪಂ. ಗಳಿಗೆ ಆಯ್ಕೆಯಾದ ಬುಡಕಟ್ಟು ನಾಯಕರ ರಾಜಕೀಯ ಕುತೂಹಲವನ್ನು ಅರಿಯುವದರ ಜೊತೆಗೆ ಅವರ ಆರ್ಥಿಕ, ಸಾಮಾಜಿಕ ಮತ್ತು ಶೈಕ್ಷಣಿಕ ಅಂಶಗಳು ರಾಜಕೀಯ ಬದುಕಿಗೆ ಹೇಗೆ ಪ್ರೇರಕವಾಗಿ ಎಂಬುವುದನ್ನು ಅರಿತು; ಇತರ ಸಮುದಾಯಗಳ ರಾಜಕೀಯವಾಗಿ ತೌಲನಿಕ ಕರಿಸಲು ಪ್ರಸ್ತುತ ಅಧ್ಯಯನ ಬಹಳ ಉಪಯುಕ್ತವಾಗಿದೆ.

ಪ್ರಸ್ತುತ ಪಂಚಾಯತಿಯಲ್ಲಿ ಬುಡಕಟ್ಟುಗಳ ನಾಯಕರು ಅಧ್ಯಕ್ಷ ಮತ್ತು ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದು. ಇತರ ಸಮುದಾಯಗಳು ರಾಜಕೀಯ ಸಹಕಾರವನ್ನು ಹೇಗೆ ನೀಡುತ್ತಿವೆ ಎಂಬುದನ್ನು ಅರಿತು ಬುಡಕಟ್ಟು ರಾಜಕೀಯ ಪಾಲ್ಗೊಳ್ಳುವಿಕೆಯ ಪ್ರಸ್ತುತ

ಪ್ರಜಾಪ್ರಭುತ್ವದ ಯಶಸ್ಸಿಗೆ ಸಹಾಯಕವಾಗಿದೆಯೋ ಎಂಬುದನ್ನು ಅರಿಯಲು ಈ ಅಧ್ಯಯನ ಅತ್ಯಂತ ಮಹತ್ವದ್ದಾಗಿದೆ.

## ೧.೫. ಅಧ್ಯಯನದ ಉದ್ದೇಶಗಳು

ಕರ್ನಾಟಕದಲ್ಲಿ ಬುಡಕಟ್ಟು ರಾಜಕೀಯವನ್ನು ಕುರಿತು ನಡೆಸಿದ ಅಧ್ಯಯನಗಳು ವಿರಳ. ಗುಲಬರ್ಗಾ ಜಿಲ್ಲೆಯಲ್ಲಿ ಇದುವರೆಗೆ ಬುಡಕಟ್ಟು ರಾಜಕೀಯವನ್ನು ಕುರಿತು ಯಾವುದೇ ಅಧ್ಯಯನ ನಡೆದಿಲ್ಲ. ಪ್ರಸ್ತುತ ಅಧ್ಯಯನವು ಈ ಜಿಲ್ಲೆಯ ಬುಡಕಟ್ಟು ರಾಜಕೀಯ ಕುರಿತಂತೆ ಪ್ರಥಮ ಅಧ್ಯಯನವಾಗುವುದು. ಈ ಅಧ್ಯಯನವು ಕೆಳಕಂಡ ಉದ್ದೇಶಗಳನ್ನು ಹೊಂದಿದೆ.

೧. ಗುಲಬರ್ಗಾ ಜಿಲ್ಲೆಯ ಎಲ್ಲ ಬುಡಕಟ್ಟುಗಳ ಮೂಲ ಇತಿಹಾಸವನ್ನು ಅವಲೋಕಿಸುವದು.

೨. ಬುಡಕಟ್ಟು ಸಮುದಾಯಗಳ ಭೌಗೋಳಿಕ ಕ್ಷೇತ್ರವನ್ನು ಪರಿವೀಕ್ಷಿಸುವುದು.

೩. ಬುಡಕಟ್ಟುಗಳ ಸಮಾಜಿಕ, ಆರ್ಥಿಕ, ಶೈಕ್ಷಣಿಕ,ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಅಂಶಗಳನ್ನು ವಿಶ್ಲೇಷಿಸುವುದು.

೪. ಜಿಲ್ಲೆಯ ವಿವಿಧ ಬುಡಕಟ್ಟು ಸಮುದಾಯಗಳ ರಾಜಕೀಯ ಸ್ಥಾನಮಾನವನ್ನು ಗುರುತಿಸು ವುದು.

೫. ಬುಡಕಟ್ಟು ಸಮುದಾಯಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಬದಲಾವಣೆಗೆ ಕಾರಣಗಳನ್ನು ಶೋಧಿಸುವದು.

೬. ಜಿಲ್ಲೆಯ ಬುಡಕಟ್ಟು ಸಮುದಾಯಗಳಿಗೆ ದೊರೆತ ಸಂವಿಧಾನಾತ್ಮಕ ಸೌಲಭ್ಯಗಳಿಂದಾದ ಪರಿಣಾಮಗಳನ್ನು ಅವಲೋಕಿಸುವುದು.

೭. ಜಿಲ್ಲೆಯ ಪ್ರಸ್ತುತ ರಾಜಕೀಯ ಸಂದರ್ಭದಲ್ಲಿ ಬುಡಕಟ್ಟುಗಳ ರಾಜಕೀಯ ಚಲನ ಶೀಲತೆಯನ್ನು ಗುರುತಿಸುವುದು.

೮. ದೇಶದ ಸ್ವಾತಂತ್ರ್ಯ ಚಳವಳಿ ಮತ್ತು ಹೈದ್ರಾಬಾದ ಕರ್ನಾಟಕದ ವಿಮೋಚನೆ ವೇಳೆಯಲ್ಲಿ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ನಾಯಕರು ತೋರಿದ ಶೌರ್ಯ ಸಾಹಸಗಳನ್ನು ಹಾಗೂ ದೇಶಪ್ರೇಮವನ್ನು ಪರಾಮರ್ಶಿಸುವುದು.

೯. ಸರಕಾರ ನೀಡಿದ ರಾಜಕೀಯ ಮೀಸಲಾತಿಯ ಸೌಲಭ್ಯಗಳನ್ನು, ಯಾವ ಯಾವ ಬುಡಕಟ್ಟುಗಳು ಎಷ್ಟರ ಮಟ್ಟಿಗೆ ಸದ್ವಿನಿಯೋಗ ಪಡಿಸಿಕೊಂಡಿವೆ ಎಂಬುದನ್ನು ಸಂಗ್ರಹಿಸುವುದರೊಂದಿಗೆ ವಿಶ್ಲೇಶಿಸುವುದು.

## ೧.೬. ಅಧ್ಯಯನದ ವಿಧಾನಗಳು

ಕನ್ನಡ ನಾಡಿನ ಉನ್ನತ ಚರಿತ್ರೆಗೆ ಕೈಗೂಡಿಸಿದ ಹಲವಾರು ಕರಗಳಲ್ಲಿ ಗುಲಬರ್ಗಾ ಜಿಲ್ಲೆಯ ಕರಗಳದು ಹಿರಿದಾದ ಸೇವೆ ಎಂಬು ಮಾತಿಗೆ ಎರಡಿಲ್ಲ. ಸಾಹಿತ್ಯ, ಸಂಗೀತ, ಶಿಲ್ಪಕಲೆ ವಾಸ್ತುಶಿಲ್ಪ ಹೀಗೆ ಇಲ್ಲಿಯ ಸಾಂಸ್ಕೃತಿಕ ಬದುಕಿಗೆ ಸ್ಪಂದಿಸಿದ ಅಂದಿನ ಜನತೆಯ ಕುರುಹುಗಳಾಗಿ ಗತ ವೈಭವದ ವೈಜಯಂತಿಯನ್ನು ಬಾನೆತ್ತರಕ್ಕೆ ಬಿತ್ತರಿಸುತ್ತ ನಿಂತಿರುವ ಜಿಲ್ಲೆಯ ಹಲವಾರು ಕೋಟೆ-ಕೊತ್ತಲುಗಳು, ಗುಡಿ-ಗೋಪುರಗಳು, ಗುಂಬಜ-ದುರ್ಗಗಳು, ಆಳಿದ-ಅರಸರು, ಬಾಳಿದ ಶರಣರು, ಕವಿಗಳು, ಕಲಾವಿದರು, ರಸಿಕ ವಿದ್ವನ್ಮಣಿಗಳು ಜನಿಸಿ ತಮ್ಮದೇ ಆದ ಶ್ರೇಷ್ಠ ಸಂಸ್ಕೃತಿಯನ್ನು ಬೆಳಿಸಿ ಉಳಿಸಿಕೊಂಡು ಬಂದಿದ್ದಾರೆ. ಸಾವಿರಾರು ವರ್ಷಗಳಿಂದ ಈ ಜಿಲ್ಲೆಯು ಕೋಮು ಸೌಹಾರ್ದಕ್ಕೆ ಉತ್ತಮ ಮಾದರಿಯಾಗಿದೆ. ಜಿಲ್ಲೆಯ ಹತ್ತು ತಾಲೂಕಿನ ವ್ಯಾಪ್ತಿಯಲ್ಲಿ ಬರುವ ೨೦ ವಿವಿಧ ಆದಿವಾಸಿ ಸಮುದಾಯಗಳ, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಿತಿ ಗತಿಯನ್ನು ಅರಿಯಲು ಹಲವಾರು ಸಂಶೋಧನ ವಿಧಾನಗಳನ್ನು ಈ ಅಧ್ಯಯನದಲ್ಲಿ ಅಳವಡಿಸಿಕೊಳ್ಳಲಾಗಿದೆ.

### ೧.೬.೧. ಸಂಶೋಧನೆಯ ವಿಧಾನಗಳು

೧. ಐತಿಹಾಸಿಕ ವಿಧಾನ

೨. ತೌಲನಿಕ ವಿಧಾನ

೩. ಅಂಕಿ-ಸಂಖ್ಯಾಯ ವಿಧಾನ

೪. ವ್ಯಕ್ತಿ ಅಧ್ಯಯನ ವಿಧಾನ

೫. ಅವಲೋಕನ ವಿಧಾನ

೬. ಪ್ರಶ್ನಾವಳಿ ವಿಧಾನ

೭. ಸಂದರ್ಶನ ವಿಧಾನ

**೧.೬.೧.೧ ಐತಿಹಾಸಿಕ ವಿಧಾನ**

"Historical Method is the Pillar of research" ಎಂಬುವ ಹಾಗೆ ನಮ್ಮ ಸಂಶೋಧನೆಗೆ ಅತ್ಯಂತ ಅಗತ್ಯವಾದ ಅನುಷಂಗಿಕ ಮಾಹಿತಿಯನ್ನು (Secondary Source) ಸಂಗ್ರಹಿಸಲು ಈ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ.

ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನಕ್ಕೆ ಅಗತ್ಯವಾದ ಆಧಾರ ಗ್ರಂಥಗಳು, ಮಾಸ ಪತ್ರಿಕೆಗಳು, ವರದಿಗಳು, ಸರಕಾರಿ ಪ್ರಕಟಣೆಗಳು, ಹಸ್ತಪ್ರತಿಗಳು, ಮತ್ತು ಜಿಲ್ಲೆಯ ಅಂಕಿ-ಸಂಖ್ಯೆಗಳು, ಇತ್ಯಾದಿ ಮಾಹಿತಿಗಳನ್ನು ಬಳಸಿಕೊಳ್ಳುವದರ ಜೊತೆಗೆ ಬುಡಕಟ್ಟು ಸಮುದಾಯದ ಐತಿಹಾಸಿಕ ಹಿನ್ನಲೆಯನ್ನು ಕುರಿತು ಮಾಹಿತಿ ಸಂಗ್ರಹಿಸಲಾಗಿದೆ.

ಜಿಲ್ಲೆಯಲ್ಲಿ ವಾಸಿಸುವ ಹಲವಾರು ಬುಡಕಟ್ಟುಗಳ ಕುರಿತು ಅರಿಯಲು ಉಪ ಸಂಸ್ಕೃತಿ ಮಾಲೆಗಳನ್ನು ಹಾಗೂ ಭಾರತ ಮತ್ತು ಕರ್ನಾಟಕ ಸರಕಾರಗಳು ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗಾಗಿ ಹಾಕಿಕೊಂಡಿ ಹಲವಾರು ಕಲ್ಯಾಣ ಕಾರ್ಯಕ್ರಮಗಳ ಯೋಜನೆಯ ಮಾಹಿತಿ ಹಾಗೂ ರಾಜಕೀಯದಲ್ಲಿ ಬುಡಕಟ್ಟುಗಳಿಗೆ ನೀಡಿದ ಮೀಸಲಾತಿಯನ್ನು ಅರಿಯಲು ಪ್ರಸ್ತುತ ಅಧ್ಯಯನದಲ್ಲಿ ಈ ವಿಧಾನವನ್ನು ಬಳಸಿಕೊಳ್ಳಲಾಗಿದೆ.

**೧.೬.೧.೨. ತೌಲನಿಕ ವಿಧಾನ**

ಪ್ರಸ್ತುತ ಸಂಶೋಧನೆಯಲ್ಲಿ ಈ ವಿಧಾನಕ್ಕೆ ಪ್ರಮುಖ ಸ್ಥಾನ ನೀಡಲಾಗಿದೆ. ಏಕೆಂದರೆ ಇಲ್ಲಿ ಸಂಶೋಧಿಸುವ ವಿಷಯವು ಬಹಳ ವ್ಯಾಪಕವಾಗಿದೆ. ಗುಲಬರ್ಗಾ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಹಲವಾರು ಆದಿವಾಸಿ ಸಮುದಾಯಗಳ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಸ್ಥಿತಿ-ಗತಿಯನ್ನು ತೌಲನಿಕವಾಗಿ ಅಧ್ಯಯನ ಮಾಡುವದರ ಜೊತೆಗೆ ಯಾವ ಯಾವ ಬುಡಕಟ್ಟು

ಗಳಿಗೆ ಹೆಚ್ಚಿನ ರಾಜಕೀಯ ಆಸಕ್ತಿ, ಅನುಭವ ಹಾಗೂ ರಾಜಕೀಯದಲ್ಲಿ ಭಾಗವಹಿಸುವ ಮನೋಭಾವನೆಯನ್ನು ಹೊಂದಿವೆ ಎಂಬುವದನ್ನು ನಿರ್ದಿಷ್ಟವಾಗಿ ತಿಳಿದುಕೊಳ್ಳಲು ಈ ವಿಧಾನ ಬಳಸಲಾಗಿದೆ.

ರಾಜಕೀಯ ಪ್ರಜ್ಞೆಯು ಸ್ತ್ರೀ-ಪುರುಷರಿಗೆ ಹಾಗೂ ವಿದ್ಯಾವಂತ ಹಾಗೂ ಅವಿದ್ಯಾವಂತರಿಗೆ, ಆರ್ಥಿಕವಾಗಿ ಶ್ರೀಮಂತರಿಗೆ ಮತ್ತು ಬಡವರಿಗೆ ಇರುವ ರಾಜಕೀಯ ಪ್ರಜ್ಞೆಯ ಅಂತರವನ್ನು ಅರಿಯಲು ಈ ವಿಧಾನ ಅನುಕೂಲವಾಗಿದೆ.

### ೧.೬.೧.೩. ಸಂಖ್ಯಾಶಾಸ್ತ್ರೀಯ ವಿಧಾನ

ಸಮಾಜ ವಿಜ್ಞಾನಗಳಲ್ಲಿ ನಿರ್ದಿಷ್ಠ ಫಲಿತಾಂಶ ಪಡೆಯಲು ಅನುಕೂಲಕರವಾದ ವಿಧಾನವೇ ಸಂಖ್ಯಾಶಾಸ್ತ್ರೀಯ ವಿಧಾನ. ಈ ವಿಧಾನದಿಂದ ನಾವು ಸಂಶೋಧನೆಯಲ್ಲಿ ಅಪೇಕ್ಷಿತ ಗುರಿಯನ್ನು ಮುಟ್ಟಲು ಸುಲಭವಾಗುತ್ತದೆ.

ಕಾಲಕಾಲಕ್ಕೆ ಬುಡಕಟ್ಟು ಅಂಕಿ ಸಂಖ್ಯೆಗಳಲ್ಲಾಗುವ ಏರಿಳಿತಗಳನ್ನು ಕುರಿತು ಅಧ್ಯಯನ ಮಾಡಲು ಈ ವಿಧಾನವನ್ನು ಅನುಸರಿಸಲಾಗಿದೆ. ಪ್ರಸ್ತುತ ಸಮೀಕ್ಷೆಯಲ್ಲಿಯ ೨೮೩ ಗ್ರಾ.ಪಂ. ಸದಸ್ಯರು ಹಾಗೂ ೦೯ ಜನ ತಾ.ಪಂ. ಸದಸ್ಯರನ್ನು ಹಾಗೂ ೦೩ ಜನ ಜಿ.ಪಂ. ಸದಸ್ಯರ ಅಂಕಿ ಅಂಶಗಳನ್ನು ಅರಿಯಲು ಈ ವಿಧಾನ ತುಂಬಾ ಉಪಯುಕ್ತವಾಗಿದೆ.

### ೧.೬.೧.೪. ವ್ಯಕ್ತಿ ಅಧ್ಯಯನ ವಿಧಾನ

"A case study Method is the heart of research" ಎನ್ನುವಂತೆ ಪ್ರಸ್ತುತ ಸಂಶೋಧನೆಯು ವ್ಯಕ್ತಿ ಅಧ್ಯಯನ ವಿಧಾನವನ್ನು ಅವಲಂಬಿಸಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಹಲವಾರು ರಾಷ್ಟ್ರ ಪ್ರೇಮಿಗಳು ತಾಯ್ನಾಡಿನ ಸ್ವಾತಂತ್ರ್ಯಕ್ಕಾಗಿ ತಮ್ಮನ್ನು ತಾವೇ ಅರ್ಪಿಸಿಕೊಂಡ ಕ್ರಾಂತಿಕಾರಿ ಪುರುಷರಲ್ಲಿ ಜಿಲ್ಲೆಯ ಬುಡಕಟ್ಟು ನಾಯಕರ ಪಾತ್ರ ಮಹತ್ವದ್ದು ಎಂಬುವದಕ್ಕೆ ಜಿಲ್ಲೆಯ ಸುರಪುರ ಸಂಸ್ಥಾನದ ದೊರೆಗಳ ವಂಶದಲ್ಲಿ ಜನಿಸಿದ ಬ್ಯಾರಿಷ್ಟರ ರಾಜಾ ವೆಂಕಟಪ್ಪನಾಯಕರು ಒಬ್ಬರು. ಇವರು ಮಹಾನ್ ಮುತ್ಸದ್ಧಿ, ರಾಷ್ಟ್ರ ಪ್ರೇಮಿ, ಸಂಗೀತಗಾರ

ಮತ್ತು ಶ್ರೇಷ್ಟ ಸಮಾಜ ಸುಧಾರಕರಾಗಿದ್ದಾರೆ. ಇವರ ಹಾಗೂ ಇವರಂತಹ ಹಲವಾರು ವ್ಯಕ್ತಿಗಳ ಕುರಿತು ಹಲವಾರು ರೀತಿಯ ಮಾಹಿತಿಯನ್ನು ಸಂಗ್ರಹಿಸಿ ವಿವರಿಸಲಾಗಿದೆ.

### ೧.೬.೧.೫. ಅವಲೋಕನ ವಿಧಾನ

ಈ ಸಂಶೋಧನೆಯು ಕೇವಲ ವ್ಯಕ್ತಿಅಧ್ಯಯನ ಮತ್ತು ಆಧಾರ ಗ್ರಂಥಗಳನ್ನು ಅವಲಂಬಿಸಿರದೆ, ಇನ್ನಿತರ ಹಲವಾರು ಅಂಶಗಳನ್ನು ಅವಲಂಬಿಸಿದೆ. ನಮ್ಮ ಸಂಶೋಧನೆಯ ಪ್ರಮುಖ ಗುರಿ ಬುಡಕಟ್ಟು ಸಮುದಾಯಗಳ ರಾಜಕೀಯ ಪ್ರಜ್ಞೆ ಮತ್ತು ಪಾತ್ರವನ್ನು ಕುರಿತು ಹುಡುಕುವದು. ಅದಕ್ಕಾಗಿ ಜಿಲ್ಲೆಯ ಹತ್ತು ತಾಲೂಕಿನಲ್ಲಿ ೨೮೩ ಬುಡಕಟ್ಟು ಗ್ರಾ.ಪಂ. ಸದಸ್ಯರ ಹಾಗೂ ೦೯. ತಾ.ಪಂ. ಸದಸ್ಯರ ೦೩ ಜನ ಜಿ.ಪಂ. ಸದಸ್ಯರನ್ನು ಭೇಟಿಯಾಗಿ ಅವರು ವಾಸಿಸುವ ಮನೆ, ಪ್ರದೇಶ ಮತ್ತು ಹಿನ್ನೆಲೆಯನ್ನು ಅವಲೋಕಿಸಿ ಬುಡಕಟ್ಟು ಸಮುದಾಯಗಳ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ಥಿತಿ ಗತಿಯನ್ನು ಅರಿಯಲು ಈ ವಿಧಾನವನ್ನು ಪ್ರಸ್ತುತ ಅಧ್ಯಯನದಲ್ಲಿ ಅಳವಡಿಸಲಾಗಿದೆ.

### ೧.೬.೧.೬. ಪ್ರಶ್ನಾವಳಿ ವಿಧಾನ

"Questionair method is soul of reasearch" ನಮ್ಮ ಸಂಶೋಧನೆಯ ಮೂಲ ಆಧಾರವೇ ಪ್ರಶ್ನಾವಳಿ ವಿಧಾನ. ಈ ವಿಧಾನವು ನಿರ್ದಿಷ್ಠ ಮಾಹಿತಿ ಸಂಗ್ರಹಿಸಲು ಪ್ರಸ್ತುತ ಅಧ್ಯಯನದಲ್ಲಿ ಅನುಸರಿಸಲಾಗಿದೆ. ಬುಡಕಟ್ಟು ಸಮುದಾಯಗಳ ರಾಜಕೀಯ ಪ್ರಜ್ಞೆ, ಅವರ ಆಸಕ್ತಿ, ಕುತೂಹಲ ಮತ್ತು ಆಡಳಿತಾತ್ಮಕ ಮನೋಭಾವನೆಯನ್ನು ಅರಿಯಲು ೩೨ ಪ್ರಶ್ನೆಗಳನ್ನು ಒಳಗೊಂಡ ಪ್ರಶ್ನಾವಳಿಯನ್ನು ಸಂದರ್ಭಕ್ಕೆ ತಕ್ಕಂತೆ ಮತ್ತು ವ್ಯಕ್ತಿಗೆ ಹಾಗೂ ಸ್ಥಾನಕ್ಕೆ ಅನುಗುಣವಾಗಿ ಸಂದರ್ಶನದಲ್ಲಿ ಪ್ರಶ್ನಿಸಲಾಗಿದೆ. ಸತ್ಯಾಂಶವನ್ನು ಹುಡುಕಲು ಹಲವಾರು ಉಪ-ಪ್ರಶ್ನೆಗಳನ್ನು ಕೇಳಲಾಗಿ ೨೮೩ಜನ ಬುಡಕಟ್ಟು ಗ್ರಾ.ಪಂ. ಸದಸ್ಯರಲ್ಲಿ ಶೇಕಡಾ ೫೨ ರಷ್ಟು ಸದಸ್ಯರು ರಾಜಕೀಯ ಪ್ರಜ್ಞೆ ಮತ್ತು ಆಸಕ್ತಿ ಹೊಂದಿರವದು ಕಂಡುಬಂದಿದೆ.

ಈ ಪ್ರಶ್ನಾವಳಿ ವಿಧಾನವನ್ನು ಸಂಶೋಧನೆಯಲ್ಲಿ ಅಳವಡಿಸಿಕೊಳ್ಳುವದರಿಂದ ಬುಡಕಟ್ಟು ಸದಸ್ಯರ ಮತ್ತು ವಕ್ತೃಗಳಿಂದ ನೇರ ಮಾಹಿತಿಯನ್ನು ಪಡೆದುಕೊಳ್ಳಲು ಅನುಕೂಲುಗುವುದು.

ಪ್ರಶ್ನಾವಳಿ ವಿಧಾನವು ಸಂಶೋಧನೆಯ ಮೂಲ ಆಧಾರಾಂಶ ಆಗಿರುವದರಿಂದ ಅಧ್ಯಯನದ ಉದ್ದೇಶಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ.

### ೧.೬.೧.೭. ಸಂದರ್ಶನ ವಿಧಾನ

"Interview method is serene of research" ಈ ಸಂಶೋಧನೆಯು ಕೇವಲ ಬುಡಕಟ್ಟು ಸಮುದಾಯಗಳನ್ನು ಅವಲಂಬಿಸಿರದೆ, ಸ್ವಾತಂತ್ರ್ಯಪೂರ್ವ ಮತ್ತು ನಂತರದ ಬುಡಕಟ್ಟು ಹಾಗೂ ಇತರೆ ರಾಜಕೀಯ ನಾಯಕರುಗಳನ್ನು ಅವಲಂಬಿಸಿದೆ. ೧೯೯೩ರ ಪಂಚಾಯಿತಿ ಚುನಾವಣೆಯಲ್ಲಿ ಜಿಲ್ಲೆಯಲ್ಲಿ ಆಯ್ಕೆಯಾದ ಸುಮಾರು ೩೦೦ ಬುಡಕಟ್ಟು ಸದಸ್ಯರನ್ನು ಹಾಗೂ ಹಲವಾರು ಇತರ ಸಮುದಾಯಗಳ ರಾಜಕೀಯ ನಾಯಕರನ್ನು ಸಂದರ್ಶಿಸಿ, ಬುಡಕಟ್ಟು ರಾಜಕೀಯ ಕುರಿತು ಮಾಹಿತಿ ಪಡೆಯಲಾಗಿದೆ. ಸುಮಾರು ೩೦೦ ಬುಡಕಟ್ಟು ಸದಸ್ಯರನ್ನು ಭೇಟಿಮಾಡಿ ಅವರ ಜೀವನ ವಿಧಾನ ಹಾಗೂ ಅವರ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಶೈಕ್ಷಣಿಕ ಸ್ಥಿತಿಗತಿಯನ್ನು ಕುರಿತು ಮಾಹಿತಿ ಸಂಗ್ರಹಿಸಲು ಈ ವಿಧಾನವನ್ನು ಅನುಸರಿಸಲಾಗಿದೆ.

ಈ ಎಲ್ಲಾ ವಿಧಾನಗಳು ಸಂಶೋಧನೆಯಲ್ಲಿ ಅತ್ಯಂತ ಮಹತ್ವ ಪಡೆದಿವೆ. ಏಕೆಂದರೆ ದೇಹದ ರಚನೆಗೆ ಹಲವಾರು ಅಂಗಗಳು ಹೇಗೆ ಪ್ರಮುಖ ಪಾತ್ರ ವಹಿಸುತ್ತವೆಯೋ, ಅದೇ ರೀತಿ ಸಂಶೋಧನೆಯ ಯಶಸ್ವಿಯಲ್ಲಿ ಹಾಗೂ ನಿರ್ದಿಷ್ಟ ಉದ್ದೇಶಗಳನ್ನು ತಲುಪಲು ಪ್ರಸ್ತುತ ಸಂಶೋಧನ ವಿಧಾನಗಳು ಪ್ರಮುಖ ಪಾತ್ರ ನಿರ್ವಹಿಸುತ್ತವೆ. ಈ ಸಂಶೋಧನೆಗೆ ಅಗತ್ಯವಾದ ಐತಿಹಾಸಿಕ ವಿಧಾನದ ಮೂಲಕ ಉಪಯುಕ್ತವಾದ ಅನುಷಂಗಿಕ ಮಾಹಿತಿಯನ್ನು ಪಡೆದು ಕೊಂಡು ಸಂಶೋಧನೆಯ ಭದ್ರವಾದ ಬುನಾದಿಯನ್ನು ನಿರ್ಮಿಸಲು ಈ ಎಲ್ಲಾ ವಿಧಾನಗಳನ್ನು ಅಧ್ಯಯನದಲ್ಲಿ ಹಂತ ಹಂತವಾಗಿ ಅಳವಡಿಸಲಾಗಿದೆ.

## ೧.೭. ಕ್ಷೇತ್ರ ಅನುಭವ

ಪ್ರಾರಂಭದ ಕ್ಷೇತ್ರ ಕಾರ್ಯದಲ್ಲಿ ಅನೇಕ ಅಡಚಣೆಗಳು ಸಂಶೋಧಕನಿಗೆ ಎದುರಾದವು. ಆರ್ಥಿಕ ಮತ್ತು ರಾಜಕೀಯವನ್ನು ಕುರಿತು ಮಾಹಿತಿ ಸಂಗ್ರಹಿಸಲು (ಪ್ರಶ್ನೆಗಳನ್ನು ಎರಡು

ಭಾಗ ಮಾಡಲಾಗಿದ್ದು) ೩೨ ಪ್ರಶ್ನೆಗಳ ಒಂದು ಪ್ರಶ್ನಾವಳಿ ಸಿದ್ಧಗೊಳಿಸಲಾಯಿತು. ಪ್ರಶ್ನಾವಳಿಯು ಹಲವಾರು ರೀತಿಯ ರಾಜಕೀಯ ಅಂಶಗಳನ್ನು ಒಳಗೊಂಡಿದೆ. ಸದಸ್ಯರು, (ವಕ್ತೃ)ಗಳು ಆರಂಭದಲ್ಲಿ ರಾಜಕೀಯ ಪ್ರೇರಣೆ, ಆಡಳಿತಾತ್ಮಕ ಅನುಭವ ಇತ್ಯಾದಿ ಕುರಿತು ಪ್ರಶ್ನೆಗಳಿಗೆ ಮಾಹಿತಿ ಒದಗಿಸಲು ಹೆದರುತ್ತಿದ್ದರು. ಕೆಲವರು ಮಾಹಿತಿ ಸಂಗ್ರಹಣೆಗೆ ವಿರೋಧಿಸಿರುವದೂ ಉಂಟು. ಸದಸ್ಯರಿಗೆ ಅಪರಿಚಿತ ವ್ಯಕ್ತಿಗಳು ಕೇಳುವ ಅನೇಕ ಪ್ರಶ್ನೆಗಳಿಗೆ ಉತ್ತರಿಸುವುದರಿಂದ ಸಿಗುವ ಲಾಭವೇನೆಂದು ಪ್ರಶ್ನಿಸುತ್ತಿದ್ದರು. ಪ್ರಸ್ತುತ ಮಾಹಿತಿ ಸಂಗ್ರಹಣದ ಉದ್ದೇಶಗಳ ಬಗ್ಗೆ ತಿಳುವಳಿಕೆ ನೀಡಿದಾಗ ಮಾಹಿತಿಗಳನ್ನು ಆದರದಿಂದ ಒದಗಿಸುತ್ತಿದ್ದರು. ಜಿಲ್ಲೆಯ ೩೦೦ ವಾಸಸ್ಥಾನಗಳ ಬುಡಕಟ್ಟು ಸಮೀಕ್ಷೆ ಮಾಡಲಾಗಿದೆ. ಹಲವಾರು ಬುಡಕಟ್ಟುಗಳ ಆಚಾರ ವಿಚಾರ, ಸಂಪ್ರದಾಯ ರೂಢಿ-ಪದ್ದತಿಗಳನ್ನು ಅಧ್ಯಯನ ಮಾಡುವುದರ ಜೊತೆಗೆ ಬುಡಕಟ್ಟುಗಳ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲಾಯಿತು, ೧೯೯೩ರ ಪಂಚಾಯತ್ ಚುನಾವಣೆಯಲ್ಲಿ ಆಯ್ಕೆಗೊಂಡ ಜಿಲ್ಲೆಯ ಬುಡಕಟ್ಟು ಸಮುದಾಯಗಳ ೨೮೩ಗ್ರಾ.ಪಂ., ೧೯ ತಾ.ಪಂ., ೦೩ ಜಿ.ಪಂ. ಸದಸ್ಯರನ್ನು ಭೆಟ್ಟಿಮಾಡಿ, ಆತ್ಮೀಯತೆಯಿಂದ ಅವರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂತಸ್ತನ್ನು ಕುರಿತು ಅಧ್ಯಯನಕ್ಕೆ ಬೇಕಾದ ವಿಷಯಗಳನ್ನು ಕ್ಷೇತ್ರಕಾರ್ಯದಲ್ಲಿ ಸಮೀಕ್ಷೆ ಮಾಡಿ, ಸಂದರ್ಶನದ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಬುಡಕಟ್ಟು ಸದಸ್ಯರು ನೀಡಿರುವ ಮಾಹಿತಿಗಳಲ್ಲಿ ಇವರಲ್ಲಿರುವ ರಾಜಕೀಯ ಅನುಭವ, ಹಾಗೂ ಕಾನೂನುಗಳ ಬಗ್ಗೆ ಇರುವ ಅರಿವುಗಳಿಂದ ಹೆಚ್ಚು ಕಡಿಮೆ ಆಗುವ ಸಾಧ್ಯತೆಗಳು ಇವೆ.

ಸಂಶೋಧನೆಯ ಪ್ರಾರಂಭದ ಆರು ತಿಂಗಳು ಸಾಹಿತ್ಯದ ಪರಿವೀಕ್ಷಣೆಗೆ ತಗುಲಿದರೆ ನಂತರದ ಆರು ತಿಂಗಳು ಪರೀಕ್ಷಾರ್ಥವಾಗಿ ಪ್ರಶ್ನಾವಳಿಯ ತಯಾರಿಕೆಗೆ ಹಾಗೂ ಪ್ರಯೋಗಕ್ಕೆ ಹಿಡಿದಿದೆ. ಎರಡನೆಯ ವರ್ಷವನ್ನು ಕ್ಷೇತ್ರ ಕಾರ್ಯದಲ್ಲಿ ತೊಡಗಿಸಲಾಯಿತು. ಆನಂತರ ಸಂಗ್ರಹ ಮಾಡಿದ ಮಾಹಿತಿಗಳನ್ನು ವರ್ಗೀಕರಣ ಮಾಡಿ ಆನೇಕ ಪಟ್ಟಿಗಳನ್ನು ತಯಾರಿಸಲಾಗಿದೆ.

## ೧.೮. ಅಧ್ಯಯನದ ಸಂಕ್ಷಿಪ್ತ ಸಾರಾಂಶ

ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ ಎಂಬ ಶೀರ್ಷಿಕೆಯ ಪ್ರೌಢ ಪ್ರಬಂಧದ ಸಮಗ್ರ ಅಧ್ಯಯನವನ್ನು ಅನೇಕ ಆಧಾರಗ್ರಂಥಗಳ ಹಾಗೂ ಸಂಶೋಧನಾ

ವಿಧಾನಗಳ ಸಹಾಯದಿಂದ ಕೈಗೊಂಡು ೬ ಅಧ್ಯಾಯಗಳಲ್ಲಿ ವಿಂಗಡಿಸಿ ರಚಿಸಲಾಗಿದೆ. ಅವುಗಳ ಸಾರಾಂಶವನ್ನು ಅಧ್ಯಾಯವಾರು ಇಲ್ಲಿ ಪ್ರಸ್ತಾಪಿಸಲಾಗಿದೆ.

### ೧.೮.೧ ಪ್ರವೇಶ

ಪ್ರಥಮ ಅಧ್ಯಾಯವು "ಪ್ರವೇಶ " ಎಂಬ ಪೀಠಿಕಾ ಭಾಗದಿಂದ ಪ್ರಾರಂಭಿಸಲಾಗಿದೆ. ಈ ಅಧ್ಯಾಯದಲ್ಲಿ ಬುಡಕಟ್ಟು ರಾಜಕೀಯ ಅಧ್ಯಯನದ ಸ್ವರೂಪ ಹಾಗೂ ಪ್ರಸ್ತುತ ಸಂಶೋಧನೆಯ ವಿವಿಧ ಊಹೆಗಳು ಅದರಲ್ಲಿ ೧. ಮೀಸಲಾತಿಯ ರಾಜಕೀಯ ಅವಕಾಶವನ್ನು ಕಲ್ಪಿಸುವದು. ೨. ಬಹುಸಂಖ್ಯಾತ ಜಾತಿಯ ಮತದಾರರ ಆಸಕ್ತಿಯು ಬುಡಕಟ್ಟು ರಾಜಕೀಯವನ್ನು ನಿರ್ಧರಿಸುತ್ತದೆ. ೩. ಮೀಸಲಾತಿ ಕ್ಷೇತ್ರದಿಂದ ಆಯ್ಕೆಗೊಂಡ ಬುಡಕಟ್ಟು ಸದಸ್ಯರು ಸಾಮಾನ್ಯ ಸದಸ್ಯರಿಗಿಂತ ಅಸಮರ್ಥರೇನು ಇರುವುದಿಲ್ಲ. ಎಂಬ ಮುಂತಾದ ಅಂಶಗಳನ್ನು ಈ ಅಧ್ಯಾಯ ಒಳಗೊಂಡಿದೆ. ಪ್ರಸ್ತುತ ಸಂಶೋಧನೆಯ ಉದ್ದೇಶಗಳು, ಅಳವಡಿಸಿ ಕೊಂಡ ವಿಧಾನಗಳು ಮತ್ತು ವ್ಯಾಪ್ತಿ ಇತ್ಯಾದಿಗಳ ಮೇಲೆ ಬೆಳಕು ಚೆಲ್ಲಲಾಗಿದೆ.

### ೧.೮.೨ ಬುಡಕಟ್ಟು ರಾಜಕೀಯ ಹಿನ್ನೆಲೆ

ದ್ವಿತೀಯ ಅಧ್ಯಾಯವು "ಬುಡಕಟ್ಟು ರಾಜಕೀಯ ಹಿನ್ನೆಲೆ" ಎಂಬ ಶೀರ್ಷಿಕೆ ಹೊಂದಿರುವುದು ಈ ಅಧ್ಯಾಯದಲ್ಲಿ ಭಾರತದಲ್ಲಿ ಬುಡಕಟ್ಟುಗಳ ಉಗಮ, ಕರ್ನಾಟಕದಲ್ಲಿ ಬುಡಕಟ್ಟುಗಳು, ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಹಿನ್ನೆಲೆ, ಬುಡಕಟ್ಟು ರಾಜಕೀಯ, ಐತಿಹಾಸಿಕ ಹಿನ್ನೆಲೆ, ಕಟ್ಟೆ ಮನೆಯ ಜಾತಿ ಪಂಚಾಯಿತಿ ಇತ್ಯಾದಿಗಳ ಬಗ್ಗೆ ವಿವರಣೆ ನೀಡುವುದು.

### ೧.೮.೩ ಸ್ವತಂತ್ರ ಪೂರ್ವದ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ

ಮೂರನೆಯ ಅಧ್ಯಾಯವು "ಸ್ವತಂತ್ರ ಪೂರ್ವದ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ" ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಸುರಪುರ ಸಂಸ್ಥಾನದ ವಿಶೇಷ ಅಧ್ಯಯನ, ಬುಡಕಟ್ಟು ಮತ್ತು ಸ್ವಾತಂತ್ರ್ಯ ಚಳುವಳಿ, ಬುಡಕಟ್ಟು ಮತ್ತು ರಜಾಕಾರ ದಾಳಿ, ಪ್ರಸ್ತುತ ಬುಡಕಟ್ಟು ರಾಜಕೀಯ, ಜಿಲ್ಲೆಯ ಬುಡಕಟ್ಟು ಗ್ರಾಮ ಪಂಚಾಯತ ಸದಸ್ಯರ, ಬುಡಕಟ್ಟು ಸಂಸ್ಕೃತಿ, ಜನಸಂಖ್ಯೆ, ವೃತ್ತಿ, ಸಾಮಾಜಿಕ, ಆರ್ಥಿಕ. ಶೈಕ್ಷಣಿಕ ಸ್ಥಾನಮಾನ ಇತ್ಯಾದಿಗಳನ್ನು

ಜಿಲ್ಲೆಯ ಹಾಗೂ ದೇಶದ ಇತರ ಕಡೆಗಳಲ್ಲಿರುವ ಬುಡಕಟ್ಟುಗಳೊಂದಿಗೆ ತೌಲನಿಕವಾಗಿ ನಿರೂಪಿಸಲಾಗಿದೆ.

### ೧.೮.೪ ಸ್ಥಳೀಯ ಸಂಸ್ಥೆಗಳು ಮತ್ತು ಬುಡಕಟ್ಟು ರಾಜಕೀಯ

ನಾಲ್ಕನೆಯ ಅಧ್ಯಾಯವು "ಸ್ಥಳೀಯ ಸಂಸ್ಥೆಗಳು ಮತ್ತು ಬುಡಕಟ್ಟು ರಾಜಕೀಯ" ಈ ವಿಷಯದ ವಿವರಣೆಯನ್ನು ನೀಡುತ್ತದೆ. ೨೮೩ ಜನ ಗ್ರಾಮ ಪಂಚಾಯತ್ ಸದಸ್ಯರು, ೦೯ ತಾಲೂಕ ಪಂಚಾಯತ ಸದಸ್ಯರು, ೩ ಜನ ಜಿಲ್ಲಾ ಪಂಚಾಯತ ಸದಸ್ಯರು, ಮೀಸಲಾತಿಯ ಸೌಲಭ್ಯ, ಸಾಮಾನ್ಯ ಕ್ಷೇತ್ರಕ್ಕೆ ಸ್ಪರ್ಧಿಸದಿರಲು ಕಾರಣಗಳು. ಸದಸ್ಯರ ಸಮುದಾಯಿಕ ಮತ್ತು ಸಾರ್ವಜನಿಕ ಕಾರ್ಯಗಳು ಇತ್ಯಾದಿಗಳನ್ನು ಪ್ರಸ್ತಾಪಿಸುವುದು.

### ೧.೮.೫ ಬುಡಕಟ್ಟು ಮತ್ತು ಬುಡಕಟ್ಟೇತರ ರಾಜಕೀಯ

ಐದನೆಯ ಅಧ್ಯಾಯವು "ಬುಡಕಟ್ಟು ಮತ್ತು ಬುಡಕಟ್ಟೇತರ ರಾಜಕೀಯ"ಕ್ಕೆ ಸಂಬಂಧಿಸಿದೆ. ಈ ಅಧ್ಯಾಯದಲ್ಲಿ ಬುಡಕಟ್ಟು ಸದಸ್ಯರ ರಾಜಕೀಯ ಪ್ರಜ್ಞೆ, ಅನುಭವ, ಆಸಕ್ತಿ ಮತ್ತು ಪಾತ್ರ ಹೇಗೆ ಸ್ಥಳದಿಂದ ಸ್ಥಳಕ್ಕೆ, ವ್ಯಕ್ತಿಯಿಂದ ವ್ಯಕ್ತಿಗೆ, ಕಾಲದಿಂದ ಕಾಲಕ್ಕೆ ಮತ್ತು ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುತ್ತದೆ ಎಂಬುದರ ಮೇಲೆ ಬೆಳಕು ಚೆಲ್ಲುವುದು

### ೬ ಸಮಾರೋಪ

ಕೊನೆಯ ಅಧ್ಯಾಯವು ಮಹಾಪ್ರಬಂಧದ "ಸಮಾರೋಪ" ಎಂಬ ಶೀರ್ಷಿಕೆಯಿಂದ ಕೂಡಿದೆ, ಇದರಲ್ಲಿ ಎಲ್ಲಾ ಅಧ್ಯಾಯಗಳ ಸಾರಾಂಶ ಹಾಗೂ ಅವುಗಳಲ್ಲಿಯ ಸಂಶೋಧಿತ ವಿಷಯಗಳನ್ನು ಕೋಷ್ಟಕಗಳ ಮುಖಾಂತರ ವಿವರಿಸಲಾದ ವಿಷಯಗಳನ್ನು ಒಳಗೊಂಡಿರುವುದು.

ಪ್ರಸ್ತುತ ಅಧ್ಯಯನವು ಸಂಶೋಧನೆಯ ಪೀಠಿಕಾ ಭಾಗದಿಂದ ಪ್ರಾರಂಭವಾಗಿ ಗುರಿ ಮತ್ತು ಉದ್ದೇಶಗಳು, ಮಹತ್ವ, ಮತ್ತು ಸಂಶೋಧನೆಯಲ್ಲಿ ಅಳವಡಿಸಿಕೊಂಡ ವಿವಿಧ ವಿಧಾನಗಳು ಮತ್ತು ವ್ಯಾಪ್ತಿ. ೧೯೯೩ರಲ್ಲಿ ಗುಲಬರ್ಗಾ ಜಿಲ್ಲೆಯ ವಿವಿಧ ಪಂಚಾಯತಿಗಳಿಗೆ ಚುನಾಯಿತರಾಗಿ ಸೇವೆಯಲ್ಲಿ ನಿರತರಾದ ಬುಡಕಟ್ಟು ಸದಸ್ಯರ ಆರ್ಥಿಕ, ಸಾಮಾಜಿಕ ಮತ್ತು

ರಾಜಕೀಯ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಸ್ಥಿತಿಗತಿಯ ಮಾಹಿತಿಯನ್ನು ಈ ಅಧ್ಯಾಯ ಒಳಗೊಂಡಿರುವುದು.

**ಉಪಸಂಹಾರ**

**"Some people born for rule & some people born for ruled, but some people born both rule & ruled."** ಎಂಬ ಸಿದ್ಧಾಂತದಂತೆ ಬುಡಕಟ್ಟು ಸಮುದಾಯಗಳು ಗಿರಿ ಕಂದರಗಳಲ್ಲಿದ್ದರೂ ತಮ್ಮ ರಕ್ಷಣೆಗೋಸ್ಕರ ತಮ್ಮದೇ ಆದ ಕುಲ ಪಂಚಾಯತಿಯನ್ನು ಹೊಂದಿದ್ದರು ಇದುವೇ ಪ್ರಸ್ತುತ ರಾಜಕೀಯ ವ್ಯವಸ್ಥೆಗೆ ಪ್ರೇರಣೆಯಾಯಿತು. ಆದರೆ ಕಾಲಗಳು ಉರುಳಿದಂತೆ ಬುಡಕಟ್ಟು ಮಾನವನ ಜೀವನದಲ್ಲಿ ಸಾಕಷ್ಟು ಬದಲಾವಣೆಗಳಾದವು. ಈ ಬದಲಾವನೆಯು ಕೇವಲ ಸಾಮಾಜಿಕ, ಆರ್ಥಿಕ ಜೀವನದ ಜೊತೆಗೆ ಅದರ ರಾಜಕೀಯ ಜೀವನದ ಮೇಲೆ ಆಯಿತು. **"Economy determines politics"** ಎಂಬಂತೆ ಆರ್ಥಿಕವಾಗಿ ಬಲಿಷ್ಟವಾದ ವರ್ಗ ರಾಜಕೀಯವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿತ್ತು. ಆದರೆ ಇಂದು ಪ್ರಜಾಪ್ರಭುತ್ವಯುಗ, ಪ್ರತಿಯೊಬ್ಬ ವ್ಯಕ್ತಿಯ ರಾಜಕೀಯದಲ್ಲಿ ಭಾಗವಹಿಸುವದು ಆತ್ಯವಶ್ಯಕವಾಗಿದ್ದು ಅದರಲ್ಲಿ ವಿಶೇಷವಾಗಿ ಬುಡಕಟ್ಟುನವರಿಗೆ ರಾಜಕೀಯ ಮೀಸಲಾತಿಯನ್ನು ಕಲ್ಪಿಸಿರುವದು ರಾಜಕೀಯದಲ್ಲಿ ಒಂದು ಮೈಲುಗಲ್ಲು ಎಂದು ಭಾವಿಸಬೇಕು . ಏಕೆಂದರೆ ರಾಜಕೀಯ, ಅಧಿಕಾರ, ಸರಕಾರ, ಆಡಳಿತ ಇವುಗಳ ಪರಿಕಲ್ಪನೆ ಇಲ್ಲದ ಬುಡಕಟ್ಟು ಮಾನವ ಇಂದು ಅವುಗಳ ಅರ್ಥವನ್ನು ತಿಳಿದು ರಾಜಕೀಯದಲ್ಲಿ ಸಕ್ರೀಯವಾಗಿ ತನ್ನನ್ನು ತಾನು ತೊಡಗಿಸಿಕೊಸಿಕೊಳ್ಳುತ್ತಿರುವನು.

ಹಲವಾರು ಶೋಷಣೆಗಳಿಗೆ ಒಳಗಾದ ಬುಡಕಟ್ಟುಗಳು ಮಾನವ ಇಂದು ಅಧಿಕಾರವನ್ನು ನಡೆಸುತ್ತಿರುವದು ಪ್ರಸ್ತುತ ರಾಜಕೀಯದಲ್ಲಾದ ಬದಲಾವಣೆ ಎಂದು ಹೇಳಬಹುದು. ಇತಿಹಾಸ ಪ್ರಾರಂಭದಿಂದ ಇಲ್ಲಿವರೆಗೆ ಬುಡಕಟ್ಟು ಮಾನವನ ಸ್ಥಿತಿಗತಿಯನ್ನು ಅಧ್ಯಯನ ಮಾಡಿದಾಗ ಹಲವಾರು ಏರುಪೇರುಗಳು ಕಂಡುಬರುತ್ತಿದ್ದು ಆಧುನಿಕ ರಾಜಕೀಯಕ್ಕೆ ಬುಡಕಟ್ಟು ರಾಜಕೀಯ ಮೂಲವಾಗಿದೆ. ಎಂಬುದನ್ನು ನಾವು ಮರೆಯುವಂತಿಲ್ಲ.

ಪ್ರಸ್ತುತ ಅಧ್ಯಯನವು ಮಾನವಶಾಸ್ತ್ರ, ಸಮಾಜಶಾಸ್ತ್ರ, ರಾಜ್ಯಶಾಸ್ತ್ರ ಹಾಗೂ ಬುಡಕಟ್ಟು ಅಧ್ಯಯನಗಳ ಅಂತರ ಶಿಸ್ತೀಯ ಮಾದರಿಯ ಅಧ್ಯಯನವಾಗಿದೆ.

ಗುಲಬರ್ಗಾ ಜಿಲ್ಲೆಯಲ್ಲಿಯ ಬುಡಕಟ್ಟುಗಳಲ್ಲಿ ಬಹುಪಾಲು ರಾಜಕೀಯ ಮೀಸಲಾತಿ ಸೌಲಭ್ಯವನ್ನು ಪಡೆದುದರಲ್ಲಿ ಬೇಡ ಸಮುದಾಯ ಮುಂಚೂಣಿಯಲ್ಲಿದೆ. ಇತರ ಸಮುದಾಯಗಳು ಸಹ ಗಣನೀಯ ಪ್ರಮಾಣದಲ್ಲಿದ್ದರೂ ಜಾತಿ ಪ್ರಮಾಣ ಪತ್ರ ನೀಡುವಲ್ಲಿಯ ಸಮಸ್ಯೆಗಳಿಂದಾಗಿ ರಾಜಕೀಯ ಮೀಸಲಾತಿಯನ್ನು ಬಳಸಲಾಗದಿರುವುದನ್ನು ಪತ್ತೆಯಾಗಿದೆ.

# ಬುಡಕಟ್ಟು ರಾಜಕೀಯ ಹಿನ್ನೆಲೆ

## ೨.೧. ಬುಡಕಟ್ಟು ಪದದ ಅರ್ಥ

ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಗಳ ಸಾಹಿತ್ಯದಲ್ಲಿ ಬಳಕೆಯಲ್ಲಿರುವ ಆದಿವಾಸಿಗಳು ಅಥವಾ ಬುಡಕಟ್ಟು ಸಮುದಾಯ ಎಂಬ ಶಬ್ದವು ಅಕ್ಷರ ಪೂರ್ವ ಸಂಸ್ಕೃತಿಯೊಂದನ್ನು ಪ್ರತಿನಿಧಿಸುವದು. ಭೂ ಪ್ರದೇಶವೊಂದರ ಅಥವಾ ಗುಡ್ಡ-ಗಾಡುಗಳಲ್ಲಿ ಹಾಗೂ ಕಾಡು-ಮೇಡುಗಳಲ್ಲಿ ಬಹಳ ಅನಾದಿ ಕಾಲದಿಂದಲೂ ವಾಸಮಾಡಿಕೊಂಡು ಬಂದಿರುವ ಹಾಗೂ ಅನಾಗರಿಕ ಸಮುದಾಯವನ್ನು ಆದಿವಾಸಿ ಸಮುದಾಯ ಎನ್ನುವುದುಂಟು. ಜಗತ್ತಿನ ಬಹುತೇಕ ದೇಶಗಳಲ್ಲಿ ಇವರು ಮೂಲನಿವಾಸಿಗಳು ಎಂದು ಕರೆಯಲ್ಪಡುತ್ತಿರುವುದನ್ನು ಕಾಣುತ್ತೇವೆ.

'ಟ್ರೈಬ್' ಎಂಬ ಇಂಗ್ಲೀಷ್ ಶಬ್ದವು ಲ್ಯಾಟಿನ್ ಭಾಷೆಯ 'ಟ್ರೈಬಸ್' ಎಂಬ ಮೂಲ ಪದದಿಂದ ಉತ್ಪತ್ತಿ ಹೊಂದಿರುವುದು. ಟ್ರೈಬಸ್ ಎಂಬುವದಕ್ಕೆ ಪ್ರಾಚೀನ ರೋಮ್ ಜನತೆಯ

ರಾಜಕೀಯ ಭಾಗ ಅಥವಾ ಆಡಳಿತ ಪ್ರಾಂತ್ಯ ಅಥವಾ ಮಂಡಲ ಎಂಬ ಅರ್ಥವಿದೆ. ಕಾಲಾಂತರದಲ್ಲಿ ಟ್ರೈಬ್ ಎಂಬ ಪದವನ್ನು ಪಶ್ಚಿಮ ಜಗತ್ತಿನಲ್ಲಿ ಸಮುದಾಯವಾಗಿ ರೂಪ ತಳೆಯುವ ಕುಟುಂಬಗಳ ಸಂಕಲನ ಎಂದು ಅರ್ಥೈಸಲಾಗುತ್ತದೆ. ಅದರೆ ಮಾನವ ಶಾಸ್ತ್ರಜ್ಞರು ಟ್ರೈಬ್ ಎಂಬ ಪದಕ್ಕೆ ತಮ್ಮದೇ ಆದ ವ್ಯಾಖ್ಯೆಗಳನ್ನು ನೀಡಿದ್ದಾರೆ.

ಪರಿಶಿಷ್ಠ ಪಂಗಡಗಳು ಅಥವಾ ಬುಡಕಟ್ಟುಗಳು ಎಂಬುವುದು ಆಡಳಿತಾತ್ಮಕ ಅನುಕೂಲತೆಗಾಗಿ ಸೃಷ್ಠಿಸಿದ ಪರಿಕಲ್ಪನೆಯಾಗಿದೆ. ಶೆಡ್ಯೂಲ್ ಟ್ರೈಬ್ ಎಂಬ ಪದವನ್ನು ಭಾರತ ಸರಕಾರವು ಕೂಡ ಒಪ್ಪಿಕೊಂಡು ಬಳಸತೊಡಗಿದೆ. "ಆದಿವಾಸಿ" ಎಂಬುವುದು ಭಾರತೀಯ ಮೂಲದ ಶಬ್ದವಾಗಿದ್ದು ಇದಕ್ಕೆ ಮೂಲನಿವಾಸಿಗಳು ಎಂಬ ಅರ್ಥವಿದೆ.

೧. ರಿಸ್ಲೆ, ಲೇಸಿ ಮತ್ತು ಎಲ್ವೀನ್, ಮುಂತಾದವರು ಮೂಲನಿವಾಸಿಗಳನ್ನು "ಎಬೋರಿಜಿನಲ್ಸ್" ಎಂದು ಕರೆದಿದ್ದಾರೆ.

೨. ಸರ್ ಬೈನ್ಸ್ ಎಂಬ ಅಧಿಕಾರಿಯು "ಹಿಲ್‌ಟ್ರೈಬ್ಸ್" ಎಂದು ಕರೆದಿದ್ದಾರೆ.

೩. ಡಾ. ಹಟ್ಟನ್ ಎಂಬುವವರು "ಪ್ರಿಮಿಟಿವ್ ಟ್ರೈಬ್ಸ್" ಎಂದು ಕರೆದಿದ್ದಾರೆ.

೪. ಡಾ.ಘುರ್ಯರವರು ಈ ಸಮುದಾಯವನ್ನು "ಹಿಂದುಳಿದ ಹಿಂದುಗಳು" ಎಂದು ಕರೆದಿದ್ದಾರೆ.

೫. ಅಂತರರಾಷ್ಟ್ರೀಯ ಕಾರ್ಮಿಕರ ಸಂಘವು ಈ ಸಮುದಾಯವನ್ನು "ಇಂಡೀಜಿನಸ್ ಪೀಪಲ್" ದೇಶೀಯ ಜನವರ್ಗ ಎಂದು ಕರೆದಿದೆ.

ಈ ಎಲ್ಲಾ ಹೆಸರುಗಳ ಜೊತೆಗೆ ಇವರನ್ನು ವನ್ಯಜಾತಿಗಳು, ವನವಾಸಿಗಳು, ಅರಣ್ಯವಾಸಿಗಳು ಅಥವಾ ಕಾಡುಜನಾಂಗ ಎಂದು ಕರೆದರೆ, ಗಾಂಧೀಜಿಯವರು ಈ ಸಮುದಾಯವನ್ನು ಗಿರಿಜನರು ಎಂದು ಕರೆದಿದ್ದಾರೆ. ಸಂವಿಧಾನದಲ್ಲಿ ೩೪೨ನೇ ಕಾಲಂ ಪ್ರಕಾರ ಆದಿವಾಸಿಗಳನ್ನು ಪರಿಶಿಷ್ಟ ಪಂಗಡಗಳು ಎಂದು ಅರ್ಥೈಸಲಾಗಿದೆ.

## ೨.೨. ಬುಡಕಟ್ಟು ವ್ಯಾಖ್ಯೆಗಳು

೧. ಜಿ. ಎಲ್. ಗಿಲಿನ್ ಮತ್ತು ಜೆ. ಪಿ. ಗಿಲಿನ್ "ಒಂದು ಸ್ಥಳದಲ್ಲಿವಾಸಿಸುತ್ತಾ, ಒಂದೇ ಭಾಷೆಯನ್ನು ಮಾತನಾಡುವ ಮತ್ತು ಒಂದೇ ಸಂಸ್ಕೃತಿಯನ್ನು ಹೊಂದಿರುವ ಸ್ಥಳೀಯ ಸಮುದಾಯಗಳ ಸಮೂಹಕ್ಕೆ ಆದಿವಾಸಿ ಸಮಾಜ ಎನ್ನಬಹುದು."[1]

೨. ಡಬ್ಲ್ಯು.ಜಿ.ಪೆರ್ರಿ:"ಒಂದು ಸ್ಥಳದಲ್ಲಿ ನೆಲೆಸಿಕೊಂಡು ಒಂದೇ ಭಾಷೆಯನ್ನಾಡುವ ಜನಸಮೂಹವನ್ನು ಆದಿವಾಸಿ ಸಮೂಹ ಎಂದು ಕರೆದಿದ್ದಾರೆ".[2]

೩. ಎಸ್. ಸಿ. ಡುಬೆ : ಆದಿವಾಸಿ ಸಮೂಹವು ವಿಶಾಲ ವ್ಯಾಪ್ತಿಯ ಸಾಂಸ್ಕೃತಿಕ ಲಕ್ಷಣಗಳನ್ನು ಸಾಮಾನ್ಯವಾಗಿ ಹಂಚಿಕೊಂಡಿರುವ, ವಾಸ್ತವಿಕವಾಗಿ ಅಥವಾ ಪ್ರತೀತಿಯಿರುವ ವಂಶಾವಳಿಯನ್ನು ಹೊಂದಿದ ಮತ್ತು ಸಾಮೂಹಿಕ ಸ್ವರೂಪವನ್ನು ಹೊಂದಿರುವ ಮಾನವ ಬುಡಕಟ್ಟಾಗಿದೆ".

೪. ಭಾರತದ ಇಂಪೀರಿಯಲ್ ಗೆಜೆಟಿಯರ್ - ಪ್ರಕಾರ "ಒಂದೇ ಹೆಸರನ್ನು ಹೊಂದಿರುವ, ಒಂದೇ ಭಾಷೆಯನ್ನು ಮಾತಾಡುವ, ಒಂದೇ ಸ್ಥಳದಲ್ಲಿ ವಾಸಮಾಡುವ ಅಥವಾ ವಾಸಿಸಲು ಉದ್ಯುಕ್ತವಾಗಿರುವ ಪೂರ್ವದಲ್ಲಿ ಮತ್ತು ಒಳ ಪಂಗಡ ವಿವಾಹ ಪದ್ಧತಿಗೆ ಬದ್ಧವಾಗಿರ ಬಹುದಾದರೂ ಈಗ ಅಗಿಲ್ಲದೆ ಕುಟುಂಬದ ಸಮೂಹವನ್ನು ಅದಿವಾಸಿ ಸಮಾಜ ಎನ್ನಬಹುದು".[3]

**ನಮ್ಮ ಅಭಿಪ್ರಾಯದ ಪ್ರಕಾರ :** ಒಂದು ನಿರ್ದಿಷ್ಟ ಭೂ ಪ್ರದೇಶದಲ್ಲಿವಾಸಿಸುತ್ತಿದ್ದು, ಒಂದೇ ರೀತಿಯ ರೂಢಿ ಸಂಪ್ರದಾಯಗಳನ್ನು ಅನುಸರಿಸುತ್ತಿದ್ದು ಮತ್ತು ಒಂದೇ ಭಾಷೆ ಹಾಗೂ ದೈಹಿಕ ಹೋಲಿಕೆಗಳನ್ನು ಹೊಂದಿರುವ ಜನ ಸಮೂಹವನ್ನು ಆದಿವಾಸಿ ಅಥವಾ ಬುಡಕಟ್ಟು ಸಮುದಾಯ ಎಂದು ಹೇಳಬಹುದು.

## ೨. ೩. ಭಾರತದಲ್ಲಿ ಬುಡಕಟ್ಟು ಸಮುದಾಯ

ಮಾನವನು ಐತಿಹಾಸಿಕ ಮಹಾನ್ ನಡಿಗೆಯಲ್ಲಿ ದಾಪುಗಾಲಿರಿಸುತ್ತ ಇದೀಗ ನಾಗರಿಕತೆಯ ಅತ್ಯುಚ್ಛ ಮಟ್ಟಕ್ಕೆ ಬಂದು ತಲುಪಿದ್ದಾನೆ. ಹಾಗೆಂದ ಮಾತ್ರಕ್ಕೆ ಇಡೀ ಜಗತ್ತಿನ ಎಲ್ಲೆಡೆ ಯಲ್ಲಿಯೂ ಕಾಣಬರುವ ಮಾನವ ಸಮುದಾಯಗಳು ನಾಗರಿಕತೆಯನ್ನು ತಲುಪಿವೆ ಎನ್ನು ವಂತಿಲ್ಲ. ನಾಗರಿಕತೆಯಿಂದ ಹಿಡಿದು ಮಂಗಳಗ್ರಹದತ್ತ ಉಡ್ಡಾಣ ನಡೆಸಲು ಸನ್ನಾಹ ನಡೆಸುತ್ತಿದ್ದ ನಾಗರಿಕತೆಯ ಅತ್ಯುಚ್ಚ ಶಿಖರದಲ್ಲಿರುವ ಅಮೇರಿಕಾದ ಜನ ಸಮೂಹದವರೆಗೆ ಜೀವನ ನಡಿಗೆಯ ಅನನ್ಯ ಹಂತಗಳಲ್ಲಿರುವ ಜನ ಸಮೂಹಗಳು ಎಲ್ಲಾಕಡೆಗೆ ಪಸರಿಸಿವೆ.

ನಾಗರಿಕತೆಯಿಂದ ಬಹುದೂರ ವಿರುವ ಸಮುದಾಯಗಳ ಸಂಖ್ಯೆಯೂ ಕಡಿಮೆಯೆನಿಲ್ಲ. ಮೂಲ ನಿವಾಸಿಗಳೆಂದು, ಆದಿವಾಸಿಗಳೆಂದು, ಬುಡಕಟ್ಟು ಸಮುದಾಯವೆಂದು, ದೇಶಿಯ ಜನವರ್ಗವೆಂದು, ಆದಿ ಪ್ರಜೆಗಳೆಂದು ಕರೆಯಲ್ಪಡುವ ಸಮುದಾಯಗಳಿಲ್ಲದೆ ದೇಶವೇ ಇಲ್ಲ ಎಂದು ಹೇಳಬಹುದು.

ಭಾರತದಲ್ಲಿ ಸಹಿತ ಇಂತಹ ಆದಿವಾಸಿ ಅಥವಾ ಬುಡಕಟ್ಟು ಸಮುದಾಯಗಳೆಂದು ಪರಿಗಣಿತವಾಗಿರುವ ಆದಿವಾಸಿಗಳಿಗೆ ಕೊರತೆಯೇ ಇಲ್ಲ. ಈ ಸಮುದಾಯ ಭಾರತದಲ್ಲಿ ಒಟ್ಟು ಜನಸಂಖ್ಯೆಯ ೭.೫ ರಷ್ಟಿದೆ. ಇವರು ಸಾಮಾನ್ಯ ಪ್ರಜೆಗಳಂತೆ ಸಂವಿಧಾನಾತ್ಮಕ ಹಕ್ಕುಗಳನ್ನು ಪಡೆದುಕೊಂಡಿದ್ದಾರೆ. ಈ ಸಮುದಾಯ ಭಾರತದ ಬೆಟ್ಟ-ಗುಡ್ಡಗಳಲ್ಲಿ ಮತ್ತು ಕಾಡು ಮೇಡುಗಳಲ್ಲಿ ವಾಸಿಸುತ್ತಿದ್ದು ಜೀವನ ವಿಧಾನ ನಾನಾ ತೆರನಾಗಿದೆ.

ಭಾರತದಲ್ಲಿ ಆದಿವಾಸಿಗಳ ಜೀವನ ಕ್ರಮ, ಸಾಮಾಜಿಕ, ಸಾಂಸ್ಕೃತಿಕ, ಅರ್ಥಿಕ, ಕೌಟುಂಬಿಕ, ಧಾರ್ಮಿಕ, ರಾಜಕೀಯ-ಮತ್ತಿತರ ಅಂಶಗಳನ್ನು ತಿಳಿದು ಕೊಳ್ಳುವದರ ಜೊತೆಗೆ ಅವರಿಗೆ ಕಾಡುವ ಸಮಸ್ಯೆಗೆ ಇದುವರೆಗೆ ಕಲ್ಪಿಸಲಾದ ಪರಿಹಾರಗಳು ಅತ್ಯಲ್ಪವಾಗಿದ್ದು, ಇನ್ನು ಈ ಸಮುದಾಯ ಅನಾಗರಿಕತೆಯಿಂದ ನಾಗರಿಕತೆಯೆಡೆಗೆ ಸಾಗಲು ಸಾಮೂಹಿಕವಾಗಿ ಶ್ರಮಿಸುವದು ಅವಶ್ಯವಿದೆ.

೧೯೯೧ರ ಜನಗಣತಿಯ ಪ್ರಕಾರ ಆದಿವಾಸಿ ಸಮುದಾಯವು ಜನಸಂಖ್ಯೆಯ ೮.೮ ರಷ್ಟಾಗುವದು. ಸಂವಿಧಾನವು ೪೧೪ರ ವಿಧಿಯಲ್ಲಿ ಪರಿಶಿಷ್ಟ ಬುಡಕಟ್ಟುಗಳಿಗೆ ಮಾನ್ಯತೆಯನ್ನು ಕೊಟ್ಟಿದೆ. ದೇಶದ ೩೨೯ ತಾಲೂಕುಗಳಲ್ಲಿ ಆದಿವಾಸಿಗಳೇ ಹೆಚ್ಚಿರುವರು ಈ ಸಮುದಾಯ ವಿಭಿನ್ನ ಪ್ರಾಂತ್ಯಗಳಲ್ಲಿ ಹಂಚಿ ಹೋಗಿದ್ದು ಅವುಗಳ ಸಂಸ್ಕೃತಿ ಮತ್ತು ಜೀವನ ಶೈಲಿಯಲ್ಲಿ ಬಹಳಷ್ಟು ಅಂತರವನ್ನು ಕಾಣಬಹುದು. ಆದಿವಾಸಿಗಳು ವಾಸಿಸುವ ಭೂಪ್ರದೇಶಗಳ ಆಧಾರದ ಮೇಲೆ ಭಾರತದ ಆದಿವಾಸಿಗಳನ್ನು ಈ ರೀತಿ ವರ್ಗೀಕರಿಸಲಾಗಿದೆ.

ನಕ್ಷೆ ೨.೧

## ೧೯೮೧ರ ಜನಗಣತಿ ಪ್ರಕಾರ ಭಾರತದಲ್ಲಿ ಬುಡಕಟ್ಟು ಹಂಚಿಕೆ




ಆಧಾರ - ಭಾರತದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳು ಬಿ.ಪಿ. ಚೌರಾಸಿಯ ಪಟ್ಟಿ ೨. ಪುಟ ೧೦,

ಪ್ರಕಟನೆ - ಚುಗಾ ಪಬ್ಲಿಕೇಷನ್ ಅಲಹಾಬಾದ ೧೯೯೦.

## ೨.೩.೧. ಉತ್ತರದ ಹಾಗೂ ಈಶಾನ್ಯ ವಲಯದ ಆದಿವಾಸಿಗಳು

ಈ ಸಮುದಾಯವು ಉತ್ತರದ ಕಾಶ್ಮೀರ, ಪಂಜಾಬ, ಹಿಮಾಚಲ ಪ್ರದೇಶ, ಉತ್ತರ ಪ್ರದೇಶ, ಹಾಗೂ ಆಸ್ಸಾಂ ಇತ್ಯಾದಿ ಪ್ರದೇಶಗಳಲ್ಲಿ ನೆಲೆಸಿವೆ. ಅವುಗಳಲ್ಲಿ ಅಕಾ, ಡೆಪ್ಲಾ, ಮಿರಿ, ನಾಗಾ, ಗುರುಂಗ, ಲೆಪ್ಚಾ, ಲಿಂಬು, ಮಿಶ್ಮೀ, ರಾಭಾ, ಚಾಕಮಾ,ಗಾರೋ, ಖಾಸಿ, ಸಿಂಗಪೊ, ಕಚೌರಿ, ಅಬೋರ್ ನಿರಿ ಇತ್ಯಾದಿ ಈ ಸಮುದಾಯಗಳು ಸಾಮಾನ್ಯವಾಗಿ ಮಂಗೋಲಿಯಾ ಬುಡಕಟ್ಟಿಗೆ ಸೇರಿದವರಾಗಿದ್ದಾರೆ.

## ೨.೩.೨. ಮಧ್ಯವಲಯದ ಆದಿವಾಸಿಗಳು

ಈ ವಲಯವು, ಬಂಗಾಳ, ಬಿಹಾರ, ಉತ್ತರ ಪ್ರದೇಶದ ದಕ್ಷಿಣ ಭಾಗ, ಮಧ್ಯ ಭಾರತ, ಒರಿಸ್ಸಾ ಇತ್ಯಾದಿ ಪ್ರದೇಶವನ್ನು ಆವರಿಸಿದೆ - ಇಲ್ಲಿಯ ಜನಾಂಗ, ಸಂತಾಲ, ಮುಂಡಾ, ಗೊಂಡ, ಸವರಾ, ಭಿಲ್ಲ,ಬೈಗಾ, ಜಿರೋರ, ಗಡಬ, ಬೊಂಡೊ, ಜುವಾಂಗ, ಕಂಧ, ಹೋ, ಬೊಯಿಯಾ, ಖಾರಿಯ, ಇತ್ಯಾದಿ ಸಮೂಹಗಳಲ್ಲಿ ಅತ್ಯಂತ ಹೆಚ್ಚಿನ ಸಂಖೆಯಲ್ಲಿರುವ ಸಮೂಹವೆಂದರೆ ಗೊಂಡ. ಈ ಸಮೂಹ ವಾಸಿಸುವ ಪ್ರದೇಶವನ್ನು ಗೊಂಡವನ ಎಂದು ಕರೆಯಲಾಗಿದೆ.

## ೨.೩.೩. ದಕ್ಷಿಣವಲಯದ ಆದಿವಾಸಿಗಳು

ಕರ್ನಾಟಕ, ಕೇರಳ, ತಮಿಳುನಾಡು, ಮತ್ತು ಆಂಧ್ರಪ್ರದೇಶಗಳನ್ನು ಒಳಗೊಂಡಿರುವುದು ಈ ಪ್ರದೇಶದಲ್ಲಿ ತೋಡಾ, ಕೆನರಾ, ಕಾಡು ಕುರುಬ, ವಿರಾಲಿ, ಸೋಲಿಗರು, ಯರವ್, ಕೋಯಾ, ಬಡಗಾ, ಇರುಳಾ, ಚಂಚೂ ಇತ್ಯಾದಿ ಬುಡಕಟ್ಟುಗಳು ನೆಲೆಸಿವೆ.

ಮೇಲಿನ ಮೂರು ವಲಯಗಳಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳು ಈಗಲೂ ತಮ್ಮ ಸಂಸ್ಕೃತಿ ಮತ್ತು ಆಚಾರ-ವಿಚಾರಗಳನ್ನು ರೂಢಿ-ಸಂಪ್ರದಾಯಗಳನ್ನು ಉಳಿಸಿಕೊಂಡು ಬಂದಿವೆ. ಈ ಸಮುದಾಯದಲ್ಲಿ ಇನ್ನು ಕೆಲವು ಪಂಗಡಗಳು ಬೇಟೆಯಾಡುವ ಹಂತದಲ್ಲಿದ್ದರೆ ಮತ್ತು ಕೆಲವು ಆಹಾರ ಸಂಗ್ರಹಣೆ ಮತ್ತು ಬೇಸಾಯವನ್ನವಲಂಬಿಸಿ ಸ್ಥಿರ ಜೀವನವನ್ನು ನಡೆಸುತ್ತಿವೆ.

## ಕೋಷ್ಟಕ ೨.೧

## ಭಾರತದ ಬುಡಕಟ್ಟು ಸಮುದಾಯದ ಜನಸಂಖ್ಯಾ ಏರಿಳಿತಗಳು

| ಜನಗಣತಿಯ ವರ್ಷ | ಬುಡಕಟ್ಟು ಜನಸಂಖ್ಯೆ |
|---|---|
| ೧೯೨೧ | ೧೬. ದಶ ಲಕ್ಷ |
| ೧೯೩೧ | ೨೨.೪ ದಶ ಲಕ್ಷ |
| ೧೯೪೧ | ೨೪.೭ ದಶ ಲಕ್ಷ |
| ೧೯೫೧ | ೧೯.೧೧ ದಶ ಲಕ್ಷ |
| ೧೯೬೧ | ೨೯.೮೮ ದಶ ಲಕ್ಷ |
| ೧೯೭೧ | ೪.೧೨ ದಶ ಲಕ್ಷ |
| ೧೯೮೧ | ೭.೭೬ ದಶ ಲಕ್ಷ |
| ೧೯೯೧ | ೮.೮ ದಶ ಲಕ್ಷ |

ಆಧಾರ - ಭಾರತೀಯ ಸಮಾಜ - ಚ.ನ. ಶಂಕರರಾವ - ಪುಟ. ೩೯೭. ಕೋಷ್ಟಕ-೨.೧ ಜೈ ಭಾರತ ಪ್ರಕಾಶನ ಮಂಗಳೂರು. ೧೯೫

**ಕೋಷ್ಟಕ ೨.೨**

**ಭಾರತದ ಬುಡಕಟ್ಟು ಜನಸಂಖ್ಯೆ (೧೮೮೧-೧೯೯೧)**

| ಕ್ರ. ಸಂ. | ಜನಗಣತಿಯ ವರ್ಷ | ಬುಡಕಟ್ಟು ಜನಸಂಖ್ಯೆ | ಭಾರತದ ಜನಸಂಖ್ಯೆಯಲ್ಲಿ ಬುಡಕಟ್ಟಿನ ಶೇಕಡವಾರು ಜನಸಂಖ್ಯೆ | ಏರಿಳಿತ | ಷರಾ |
|---|---|---|---|---|---|
| ೧. | ೧೮೮೧ | ೬೪,೨೬,೫೧೧ | ೨.೫೮ | ----- | ೧೮೮೧ ರಿಂದ ೧೯೯೧ರವರೆಗಿನ ಆದಿವಾಸಿಗಳ ಒಟ್ಟು ಬೆಳವಣಿಗೆ ೯೫% |
| ೨. | ೧೮೯೧ | ೯೧,೧೨,೦೧೮ | ೩.೨೦ | + ೪೧.೭೯ | |
| ೩. | ೧೯೦೧ | ೮೫,೮೪,೧೪೮ | ೨.೮೮ | - ೫.೭೯ | |
| ೪. | ೧೯೧೧ | ೧,೦೨,೯೫,೧೬೫ | ೩.೧೧ | + ೧೯.೯೩ | |
| ೫. | ೧೯೨೧ | ೯೭,೭೫,೦೦೦ | ೨.೯೧ | - ೫.೦೫ | |
| ೬. | ೧೯೩೧ | ೮೨,೮೦,೦೦೦ | ೨.೨೬ | - ೧೫.೨೯ | |
| ೭. | ೧೯೪೧ | ೨,೪೭,೧೨,೦೦೦ | ೨.೨೬ | + ೧೯೮.೪೫ | |
| ೮. | ೧೯೫೧ | ೨,೨೫,೧೧,೮೫೪ | ೬.೨೫ | + ೮.೯೦ | |
| ೯. | ೧೯೬೧ | ೨,೯೮,೭೯,೨೪೯ | ೬.೮೭ | + ೩೨.೭೩ | |
| ೧೦. | ೧೯೭೧ | ೩,೬೪,೦೮,೫೧೪ | ೬.೮೨ | + ೨೧.೮೫ | |
| ೧೧. | ೧೯೮೧ | ೫,೧೬,೨೮,೬೩೮ | ೭.೭೬ | + ೪೧.೮೦ | |
| ೧೨. | ೧೯೯೧ | ೬,೭೭,೫೮,೩೮೦ | ೮.೦೩ | + ೩೧.೨೪ | |

ಆಧಾರ : ಬೀದರ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯದ ಒಂದು ಸಮಾಜ ಶಾಸ್ತ್ರೀಯ ಅಧ್ಯಯನ - ಕೆ.ಎಮ್. ಮೈತ್ರಿ. ೧೯೯೪

## ೨.೪. ಕರ್ನಾಟಕದಲ್ಲಿ ಬುಡಕಟ್ಟು ಸಮುದಾಯ

ಕರ್ನಾಟಕವು ಶ್ರೀಮಂತ ಸಂಸ್ಕೃತಿಗಳ ನಾಡಾಗಿದ್ದು ಇಲ್ಲಿ ವಿವಿಧ ಸಮುದಾಯಗಳಿಗೆ ಆಶ್ರಯ ನೀಡಿದೆ. ವಿಶೇಷವಾಗಿ ಕರ್ನಾಟಕದ ದಕ್ಷಿಣ ಭಾಗ ಮತ್ತು ಮಲೆನಾಡಿನಲ್ಲಿ ಹಲವಾರು ಗಿರಿ ಕಂದರಗಳು, ಕಣಿವೆಗಳು ಬೆಟ್ಟ-ಗುಡ್ಡಗಳು ಹಾಗೂ ಎತ್ತರವಾಗಿ ಬೆಳೆದು ನಿಂತ ಅರಣ್ಯ ಪ್ರದೇಶ ಇರುವುದರಿಂದ ಇಲ್ಲಿಯ ಬುಡಕಟ್ಟು ಸಮುದಾಯಕ್ಕೆ ಸ್ವರ್ಗವಾಗಿದೆ. ಏಕೆಂದರೆ ಅವರಿಗೆ ಅವಶ್ಯವಾದ ಆಹಾರ-ನೀರು ಮತ್ತು ಬೇಟೆಯಾಡಲು ದಟ್ಟವಾದ ಕಾಡು ಮತ್ತು ಅರಣ್ಯ ಇರುವುದರಿಂದ ವಿವಿಧ

ಆದಿವಾಸಿಗಳಿಗೆ ಅನುಕೂಲಕರವಾದ ವಾತಾವರಣ ಮತ್ತು ನೆಮ್ಮದಿಯ ಜೀವನ ಸಾಗಿಸಲು ಯಾವುದೇ ರೀತಿಯ ತೊಂದರೆ ಅಡ್ಡಿ-ಅಡಚಣೆ ಇರುವದಿಲ್ಲ.

೧೯೮೧ರಲ್ಲಿ ಕರ್ನಾಟಕದಲ್ಲಿ ವಾಸವಾಗಿರುವ ಒಟ್ಟು ಬುಡಕಟ್ಟು ಜನಸಂಖ್ಯೆ ೧೮,೨೫,೨೦೩ ಇದ್ದು ಒಟ್ಟು ಜನಸಂಖ್ಯೆಯ ಶೇಕ ೪.೯೧ ಇತ್ತು. ಕರ್ನಾಟಕದಲ್ಲಿ ಹಲವಾರು ಬುಡಕಟ್ಟುಗಳು ವಾಸಿಸುತ್ತವೆ. ಅವುಗಳಲ್ಲಿ ಅಡಿಯನ್, ಬಾದ್ದಾ,ಯರವ, ಚಂಚು, ಸೋಲಿಗರು ಮ್ಯಾಸ ಬೇಡರು, ಕಾಡು ಕುರುಬ ಮತ್ತು ಜೇನು ಕುರುಬ, ಇರುಳಿಗ ಮತ್ತು ಗೊಂಡರು, ಸಿದ್ದಿ. ೧೯೯೧ರ ಜನಗಣತಿಯ ಪ್ರಕಾರ ಕರ್ನಾಟಕದಲ್ಲಿ ೪೯ ಬುಡಕಟ್ಟು ಸಮುದಾಯಗಳಿವೆ. ಅಡಿಯನ್, ಬಾರ್ಡ್ಡಾ, ಬಾವಚ, ಬಾಮ್ಚ, ಭಿಲ್, ಭಿಲಗ್‌ರಾಸಿಯ, ಧೋಳಿಭಿಲ್, ಡುಂಗ್ರಿ ಭಿಲ್, ಡುಂಗ್ರಿ ಗರಾಸಿಯ, ಮೇಲಾಸಿಭಿಲ್, ಇರುಳಿಗ, ಜೇನು ಕುರುಬ, ಕಾಡುಕುರುಬ, ಕೋಳಿಘೋರ್, ಕೊರಗ, ಮೇದ, ನಾಯ್ಕಡ, ನಾಯಕ ಸೋಲಿಗರು, ಯರವ ಇತ್ಯಾದಿ.

ಈ ಬುಡಕಟ್ಟುಗಳಲ್ಲಿ ಕೆಲವು ಒಂದುಕಡೆ ನೆಲೆ ನಿಂತು ನಾಗರಿಕ ಜೀವನ ಸಾಗಿಸುತ್ತಿದ್ದರೆ ಮತ್ತೆ ಕೆಲವು ನಾಗರಿಕತೆಯ ಸುಳಿವೇ ಕಾಣದೆ ಕಾಡಿನಲ್ಲಿ ವಾಸಿಸುತ್ತಿವೆ. ಇವರ ಕಲ್ಯಾಣಕ್ಕಾಗಿ ಕರ್ನಾಟಕ ಮತ್ತು ಕೇಂದ್ರ ಸರ್ಕಾರ ಹಲವಾರು ಯೋಜನೆಗಳನ್ನು ಹಾಕಿಕೊಂಡು ಇವರ ಅಭಿವೃದ್ಧಿಗಾಗಿ ಶ್ರಮಿಸುತ್ತಿವೆ.

## ಭಾರತದ ಜನಗಣತಿ 2001 –
## ಕರ್ನಾಟಕ ರಾಜ್ಯಕ್ಕೆ ಅನ್ವಯಿಸುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಪಟ್ಟಿ

## CENSUS OF INDIA 2001- LIST OF SCHEDULED CASTES AND SCHEDULED TRIBES APPLICABLE TO KARNATAKA STATE

**Reference :**

1. The Scheduled Castes & Scheduled Tribes [Modification ] Order, 1956
2. The Scheduled Castes & Scheduled Tribes [Amendment ] Act, 1976 (No. 108 of 1976 dated 18th September, 1976)
3. The Constitution [Scheduled Castes] Order [Amendments] Act, 1990 (No. 15 of 1990 dated 3rd June, 1990)
4. The Constitution [Scheduled Tribes] Order [Second Amend ments] Act, 1991 (No. 39 of 1991 dated 17th September, 1991)

# ಪರಿಶಿಷ್ಟ ಪಂಗಡಗಳು

೦೧. ಅಡಿಯನ್
೦೨. ಬಾರ್ಡ್ಡಾ
೦೩. ಬಾವಚ, ಬಾಮ್ಚ
೦೪. ಭಿಲ್, ಭಿಲ್‌ಗರಾಸಿಯ
ಧೋಳಿಭಿಲ್, ಡುಂಗ್ರಿಭಿಲ್
ಡುಂಗ್ರಿ ಗರಸಿಯ,
ಮೇವಾಸಿಭಿಲ್
ರಾವಲ್‌ಭಿಲ್,
ತಾಡ್ವಿಭಿಲ್, ಭಾಗಾಲಿಯ,
ಭಿಲಾಲ, ಪಾವರಾ,
ವಾಸವ, ವಾಸವೆ
೦೫ ಚೆಂಚು, ಚೆಂಚವಾರ್
೦೬ ಚೋಧರಾ
೦೭ ಡುಬ್ಲ, ತಲವಿಯ,
ಹಲ್ಪತಿ
೦೮ ಗಮಿಟ್, ಗಾಮ್ಟ,
ಗವಿಟ್, ಮಾವ್ಚಿ,
ಪಡ್ವಿ, ವಾಳ್ವಿ
೦೯ ಗೊಂಡ್, ನಾಯ್ಕಪೋಡ್,
ರಾಜಗೊಂಡ
೧೦ ಗೌಡಲು
೧೧ ಹಕ್ಕಿಪಿಕ್ಕಿ
೧೩ ಇರುಳರ್
೧೪ ಇರುಳಿಗ
೧೫ ಜೇನು ಕುರುಬ
೧೬ ಕಾಡು ಕುರುಬ
೧೭ ಕಮ್ಮಾರ (ದಕ್ಷಿಣ ಕನ್ನಡ
ಜಿಲ್ಲೆಯಲ್ಲಿ ಮತ್ತು ಮೈಸೂರು
ಜಿಲೆಯ ಕೊಳೇಗಾಲ
೧೮ ಕಣಿಯನ್, ಕಣ್ಯನ್
ಮೈಸೂರು ಜಿಲ್ಲೆಯ
ಕೊಳ್ಳೆಗಾಲ
ತಾಲ್ಲೂಕಿನಲ್ಲಿ
೧೯ ಕಥೋಡಿ, ಕಟ್‌ಕಾರಿ
ಧೋರ್ ಕಥೋಡಿ,
ಧೋರ್ ಕಟ್‌ಕಾರಿ,

೨೧ ಕೊಕ್ನ, ಕೊಕ್ನಿ, ಕುಕ್ನ
೨೨ ಕೋಳಿ ಢೋರ,
ಟೋಕರೆ ಕೋಳಿ
ಕೊಲ್ಚಾ, ಕೊಲ್ಗ
೨೩ ಕೊಂಡಕಾಪುಸ್
೨೪ ಕೊರಗ
೨೫ ಕೋಟ
೨೬ ಕೋಯ, ಭೀನೆ ಕೋಯ,
ರಾಜ್ ಕೋಯ
೨೭ ಕುಡಿಯ, ಮೆಲಕುಡಿ
೨೮ ಕುರುಬ (ಕೊಡಗು
ಜಿಲ್ಲೆಯಲ್ಲಿ)
೨೯ ಕುರುಮನ್ಸ್
೩೦ ಮಹಾ ಮಲಸರ್
೩೧ ಮಲ್ಕೆ ಕುಡಿ
೩೨ ಮಲಸರ್
೩೩ ಮಲಯೆ ಕಂಡಿ
೩೪ ಮಲೇರು
೩೫ ಮರಾಠ (ಕೊಡಗು
ಜಿಲ್ಲೆಯಲ್ಲಿ)
೩೬ ಮರಾಟಿ (ದಕ್ಷಿಣ ಕನ್ನಡ
ಜಿಲ್ಲೆಯಲ್ಲಿ)
೩೭ ಮೇದ
೩೮ ನಾಯಕ್ಡ, ನಾಯಕ,
ಚೋಳಿವಾಲಾ ನಾಯಕ,
ಕಪಾಡಿಯ ನಾಯಕ,
ಮೋಟನಾಯಕ,
ನಾನಾ ನಾಯಕ, ನಾಯ್ಕ್,
ನಾಯಕ್, ಬೇಡ, ಬೇಡರ್
ಮತ್ತು ವಾಲ್ಮೀಕಿ
೩೯ ಪಳ್ಳಿಯನ್
೪೦ ಪಣಿಯನ್
೪೧ ಪಾರ್ಧಿ, ಅಡ್ವಿಚಿಂಚೇರ್,
ಫಾನ್ಸೆ ಪಾರ್ಧಿ
೪೨ ಪಟೇಲಿಯ
೪೩ ರಠಾವ

| | | | |
|---|---|---|---|
| | ಸೋನ್ ಕಥೋಡಿ, | ೪೪ | ಶೋಲಗ |
| | ಸೋನ್ ಕಟ್‌ಕಾರಿ | ೪೫ | ಸೋಲಿಗರು |
| ೨೦ | ಕಾಟ್ಟುನಾಯಕನ್ | ೪೬ | ತೋಡ |
| | | ೪೭ | ವಾರ್ಲಿ |
| | | ೪೮ | ವಿಟೋಲಿಯ, ಕೊಟ್ವಾಲಿಯ ಬರೋಡಿಯ |
| | | ೪೯ | ಯೆರವ |

áá "ಬೆಳಗಾಂ, ಬಿಜಾಪುರ, ಬಾಗಲಕೋಟೆ, ಧಾರವಾಡ, ಹಾವೇರಿ, ಗದಗ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ" ಎಂದು ಓದಿಕೊಳ್ಳಬೇಕು

ááá "ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಮತ್ತು ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನಲ್ಲಿ" ಎಂದು ಓದಿಕೊಳ್ಳಬೇಕು

áááá "ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನಲ್ಲಿ" ಎಂದು ಓದಿಕೊಳ್ಳಬೇಕು

ááááá "ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ" ಎಂದು ಓದಿಕೊಳ್ಳಬೇಕು

**DIRECTORATE OF CENSUS OPERATIONS, KARNATAKA**
ಜನಗಣತಿ ನಿರ್ದೇಶನಾಲಯ, ಕರ್ನಾಟಕ

## ಕೋಷ್ಟಕ ೨.೩

## ೧೯೮೧ರ ಜನಗಣತಿಯ ಪ್ರಕಾರ ಕರ್ನಾಟಕ ರಾಜ್ಯದ ಬುಡಕಟ್ಟುವಾರು ಜನಸಂಖ್ಯೆ

| ಕ್ರ. ಸಂ. | ಪರಿಶಿಷ್ಟ ಪಂಗಡಗಳ ಹೆಸರು | ಜನಸಂಖ್ಯೆ | ಕ್ರ. ಸಂ. | ಪರಿಶಿಷ್ಟ ಪಂಗಡಗಳ ಹೆಸರು | ಜನಸಂಖ್ಯೆ |
|---|---|---|---|---|---|
| ೦೧. | ಅಡಿಯನ್ | ೩೬೮ | ೨೪ | ಕೊರಗ | ೧೫೧೪೬ |
| ೦೨. | ಬಾರ್ಡಾ | ೭೨೯ | ೨೫ | ಕೋಟ | ೭೫ ೨೬ |
| ೦೩. | ಬಾವಚ, ಬಾಮ್ಚ | ೭೯ | ೨೬ | ಕೋಯ, ಭೀನೆ ಕೋಯ, | ೨೭೮೦೬ |
| ೦೪. | ಭಿಲ್, ಭಿಲ್‌ಗರಾಸಿಯ | ೧೮೬೬ | | ರಾಜ್ ಕೋಯ | |
| | ಧೋಳಿಭಿಲ್, ಡುಂಗ್ರಿಭಿಲ್ | | ೨೭ | ಕುಡಿಯ, ಮೆಲಕಡಿ | ೧೭೭೩ |
| | ಡುಂಗ್ರಿ ಗರಸಿಯ, | | ೨೮ | ಕುರುಬ (ಕೊಡಗು | ೪೫೯೫ |
| | ಮೇವಾಸಿಭಿಲ್ | | | ಜಿಲ್ಲೆಯಲ್ಲಿ) | |
| | ರಾವಲ್‌ಭಿಲ್, | | ೨೯ | ಕುರುಮನ್ಸ್ | ೧೩೧ |
| | ತಾಡ್ವಿಭಿಲ್, ಭಾಗಾಲಿಯ, | | ೩೦ | ಮಹಾ ಮಲಸರ್ | ೧೪ |
| | ಭಿಲಾಲ, ಪಾವರಾ, | | ೩೧ | ಮಲೈ ಕುಡಿ | ೬೯೬೭ |
| | ವಾಸವ, ವಾಸವೆ | | ೩೨ | ಮಲಸರ್ | ೬೨ |
| ೦೫ | ಚೆಂಚು, ಚೆಂಚವಾರ್ | ೨೭೬ | ೩೩ | ಮಲಯೆ ಕಂಡಿ | ೧೨೯ |
| ೦೬ | ಚೋಧರಾ | ೧೪೦ | ೩೪ | ಮಲೇರು | ೯೬೬ |
| ೦೭ | ಡುಬ್ಲ, ತಲವಿಯ, | ೦೨ | ೩೫ | ಮರಾಠ (ಕೊಡಗು | ೧೮೪೨ |
| | ಹಲ್ಪತಿ | | | ಜಿಲ್ಲೆಯಲ್ಲಿ) | |
| ೦೮ | ಗಮಿಟ್, ಗಾಮ್ಟ, | ೩೪ | ೩೬ | ಮರಾಟಿ (ದಕ್ಷಿಣ ಕನ್ನಡ | ೬೫೮೨೧ |
| | ಗವಿಟ್, ಮಾವ್ಚಿ, | | | ಜಿಲ್ಲೆಯಲ್ಲಿ) | |
| | ಪಡ್ವಿ, ವಾಳ್ವಿ | | ೩೭ | ಮೇದ | ೧೮೬೮೪ |
| ೦೯ | ಗೊಂಡ್, ನಾಯ್ಕಪೋಡ್, | | ೩೮ | ನಾಯಕ್ಡ, ನಾಯಕ, | ೧೨೬೩೫೫೦ |
| | ರಾಜಗೊಂಡ | ೬೦೭೩೦ | | ಚೋಳಿವಾಲಾ ನಾಯಕ, | |
| ೧೦ | ಗೌಡಲು | ೬೨೨೩ | | ಕಪಾಡಿಯ ನಾಯಕ, | |
| ೧೧ | ಹಕ್ಕಿಪಿಕ್ಕಿ | ೩೩೮೩ | | ಮೋಟನಾಯಕ, | |
| ೧೩ | ಇರುಳರ್ | ೩೧೩ | | ನಾನಾ ನಾಯಕ, ನಾಯ್ಕ್, | |
| ೧೪ | ಇರುಳಿಗ | ೫೫೩೪ | | ನಾಯಕ್, ಬೇಡ, ಬೇಡರ್ | |
| ೧೫ | ಜೇನು ಕುರುಬ | ೩೪೭೪೬ | | ಮತ್ತು ವಾಲ್ಮೀಕಿ | |
| ೧೬ | ಕಾಡು ಕುರುಬ | ೨೦೯೨೭೭ | ೩೯ | ಪಳ್ಳಿಯನ್ | ೭೪೦ |
| ೧೭ | ಕಮ್ಮಾರ (ದಕ್ಷಿಣ ಕನ್ನಡ | ೮೪೪ | ೪೦ | ಪಣಿಯನ್ | ೪೮೨ |
| | ಜಿಲ್ಲೆಯಲ್ಲಿ ಮತ್ತು ಮೈಸೂರು | | ೪೧ | ಪಾರ್ಧಿ, ಅಡ್ವಿಚಿಂಚೇರ್, | ೨೪೨೪ |
| | ಜಿಲ್ಲೆಯ ಕೊಳೇಗಾಲ ತಾಲೂಕಿನಲ್ಲಿ | | | ಫಾನ್ಸೆ ಪಾರ್ಧಿ | |
| ೧೮ | ಕಣಿಯನ್, ಕಣ್ಯನ್ | ೫೨೮ | ೪೨ | ಪಟೇಲಿಯ | ೫೨ |
| | ಮೈಸೂರು ಜಿಲ್ಲೆಯ | | ೪೩ | ರಠಾವ | ೧೦ |
| | ಕೊಳ್ಳೇಗಾಲ | | ೪೪ | ಶೋಲಗ | ೧೯೪೩ |
| | ತಾಲ್ಲೂಕಿನಲ್ಲಿ | | ೪೫ | ಸೋಲಿಗರು | ೧೬೩೮೯ |
| ೧೯ | ಕಥೋಡಿ, ಕಟ್‌ಕಾರಿ | ೯೪೨ | ೪೬ | ತೋಡ | ೧೩೦ |
| | ಧೋರ್‌ಕಥೋಡಿ, | | ೪೭ | ವಾರ್ಲಿ | ೭ |

| | | | | | |
|---|---|---|---|---|---|
| | ಧೋರ್ ಕಟ್‌ಕಾರಿ, ಸೋನ್ ಕಥೋಡಿ, ಸೋನ್ ಕಟ್‌ಕಾರಿ | | ೪೮ | ವಿಟೋಲಿಯ, ಕೊಟ್ವಾಲಿಯ ಬರೋಡಿಯ | ೧೩ |
| ೨೦ | ಕಾಟ್ಟುನಾಯಕನ್ | ೧೦೭ | ೪೯ | ಯೆರವ | ೧೯೨೬೧ |
| ೨೧ | ಕೊಕ್ನ, ಕೊಕ್ನಿ, ಕುಕ್ನ | ೪೧ | | ಒಟ್ಟು ಬುಡಕಟ್ಟು ಜನಸಂಖ್ಯೆ | ೧೮,೨೫,೨೦೩ |
| ೨೨ | ಕೋಳಿ ಧೋರ, ಟೋಕರೆ ಕೋಳಿ ಕೊಲ್ಚಾ, ಕೊಲ್ಗ | ೩೯೧೩೫ | | | |
| ೦೨೩ | ಕೊಂಡಕಾಪುಸ್ | ೯೮ | | | |

ಕೃಪೆ : ಬೀದರ್ ಜಿಲ್ಲೆಯ ಗೊಂಡ ಆದಿವಾಸಿ ಸಮುದಾಯ ಒಂದು ಸಮಾಜ ಶಾಸ್ತ್ರಿಯ ಅಧ್ಯಯನ - ಕೆ. ಎಂ. ಮೈತ್ರಿ - ಕೋಷ್ಟಕ ೩.೫ ಪುಟ - ೧೭೫ (೧೯೯೪)

# ೨.೫ ಗುಲಬರ್ಗಾ ಜಿಲ್ಲೆ ಬುಡಕಟ್ಟುಗಳು

## ೨.೫.೧. ಗುಲಬರ್ಗಾ ಹೆಸರಿನ ಮೂಲ

ಗುಲಬರ್ಗಾವನ್ನು ಕಲಬುರ್ಗಿ ಮತ್ತು ಗುಲಬರ್ಗಾ ಎಂಬ ಪರ್ಯಾಯ ಹೆಸರುಗಳಿಂದ ಕರೆಯಲಾಗುತ್ತದೆ. ಐತಿಹಾಸಿಕವಾಗಿ ಸುಮಾರು ಕ್ರಿ. ಶ. ೧೨, ೧೩ನೇ ಶತಮಾನದ ಚಿನ್ನಮಳ್ಳಿ Í¤æzæ³ ©«ø ù ·©í ¸ ·æÎÄ©©- **ಕಲಂಬರಿಗಿ** [4] ಎಂದು ಉಲ್ಲೇಖಿತ ಗೊಂಡಿರುವದು ಕಂಡು ಬರುತ್ತದೆ. ಬೀದರ ಜಿಲ್ಲೆಯ ಶಾಸನ ಒಂದರಲ್ಲೂ ಇದೇ ಹೆಸರು ದಾಖಲಾಗಿರುವದರಿಂದ ಇವುಗಳನ್ನು ಗಮನಿಸಿದರೆ, ಈ ಎರಡು ಹೆಸರುಗಳು ಗುಲಬರ್ಗಾದ, ಕಲಬುರ್ಗಿ ಹೆಸರಿನ ಪ್ರಾಚೀನ ರೂಪಗಳಾಗಿ ಕಂಡುಬರುತ್ತವೆ. ಕ್ರಿ. ಶ.೧೪೭೭ರ ಬೇಲೂರು ಹಾಗೂ, ಕ್ರಿ. ಶ. ೧೫೩೭ರ ಶಿರವಾಳದ ಶಿಲಾಶಾಸನಗಳಲ್ಲಿ ಗುಲಬರ್ಗಾಕ್ಕೆ ಕ್ರಮವಾಗಿ ಕಲುಬರಿಗಿ , ಕಲಬುರಿಗೆ [5] ಎಂದು ದಾಖಲಾಗಿದೆ. ವಿಜಯನಗರ ರಾಜಧಾನಿಗೆ ಬಂದಿದ್ದ ಪರ್ಷಿಯನ ರಾಯಭಾರಿ ರಜಾಕನು ಗುಲಬರ್ಗಾವನ್ನು ಕಲಬುರ್ಗ್ ಎಂದೇ ಕರೆದಿದ್ದಾನೆ.

ಗುಲಬರ್ಗಾ ಎಂಬ ನಾಮುಪದದ ನಿಷ್ಪತ್ತಿಗೆ ಸಂಭಂದಿಸಿದಂತೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯ ವಿರುವುದು ಕಂಡುಬರುತ್ತದೆ. ಕಲಬುರ್ಗಿ ಪದದ ಫಾರಸಿಕರಣವಾದದ್ದು, ಫಾರಸಿಯಲ್ಲಿ "**ಗುಲ್**" ಎಂದರೆ ಹೂವು, "**ಬರ್ಗ**" ಎಂದರೆ **ಎಲೆ** ಎಂಬ ಅರ್ಥವಿದೆ [6]. ಕಲಬುರ್ಗಿ ಎಂಬ ಅಚ್ಚ ಕನ್ನಡದ ರೂಪವೇ ಮುಹಮ್ಮದೀಯರಿಗೆ ಮೊದಮೊದಲು ಕಲಬುರ್ಗಿ ಎಂದೆನಿಸಿ, ಮುಂದೆ ಅದೇ ಗುಲಬರ್ಗಾ ಎಂದಾದಂತೆ ತೋರುತ್ತದೆ. ಒಟ್ಟಿನಲ್ಲಿ ಕಲಬುರಿಗೆ ಎಂಬ ಹೆಸರು ಕ್ರಿ.ಶ. ಹದಿನಾರನೇ ಶತಮಾನದವರೆಗೂ ರೂಢಿಯಲ್ಲಿತ್ತು. ಮುಸ್ಲಿಂರ

ಆಡಳಿತದ ಪ್ರಭಾವದಿಂದಾಗಿ ನಂತರದಲ್ಲಿ ಗುಲಬರ್ಗಾ ಎಂಬ ಹೊಸ ರೂಪವನ್ನು ಪಡೆದಿದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಜನಪದಲ್ಲಿ ಕಲಬುರ್ಗಿ ಎಂಬ ಹೆಸರು ಈಗಲೂ ಹೆಚ್ಚು ಪ್ರಚಲಿತದಲ್ಲಿದೆ.

### ೨.೫.೨. ಗುಲಬರ್ಗಾ ಜಿಲ್ಲೆಯ ಅಕ್ಷಾಂಶ ಮತ್ತು ರೇಖಾಂಶ

ಗುಲಬರ್ಗಾ ಜಿಲ್ಲೆಯು ಕರ್ನಾಟಕದ ಉತ್ತರಭಾಗದಲ್ಲಿದ್ದು ೧೯೫೬ರಲ್ಲಿ ರಾಜ್ಯ ಪುನರ್ವಿಂಗಡನೆಯಾದಾಗ ಹೈದಾರಾಬಾದ್ ಕರ್ನಾಟಕ ಪ್ರದೇಶದಿಂದ ಅಂದಿನ ಮೈಸೂರು ರಾಜ್ಯಕ್ಕೆ ಸೇರಿದ ಮೂರು ಜಿಲ್ಲೆಗಳಲ್ಲಿ ಒಂದಾಗಿದೆ. (ಉಳಿದೆರಡು ಜಿಲ್ಲೆಗಳು ಬೀದರ್ ಮತ್ತು ರಾಯಚೂರು) ಜಿಲ್ಲೆಯು ವಿಶಾಲ ಸಮತಟ್ಟಾದ ಪ್ರದೇಶವು "೭೬°.೦೪° ಮತ್ತು ೭೭°.೪೨°"[7] ಪೂರ್ವ ರೇಖಾಂಶ ಹಾಗೂ ೧೬°.೧೨° ಮತ್ತು ೧೭°.೪೬° ಉತ್ತರ ಅಕ್ಷಾಂಶ ಇವುಗಳ ನಡುವೆ ಹರಡಿಕೊಂಡಿದೆ. ಜಿಲ್ಲೆಯು ವಾಯುವ್ಯ ಭಾಗದಲ್ಲಿ ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಮತ್ತು ಉಸ್ಮಾನಾಬಾದ್ ಜಿಲ್ಲೆಗಳ ಎಲ್ಲೆಯನ್ನು ಮತ್ತು ಪೂರ್ವ ಭಾಗದಲ್ಲಿ ಆಂಧ್ರಪ್ರದೇಶದ ಮೇದಕ್ ಮತ್ತು ಮಹಬೂಬ್‌ನಗರ ಜಿಲ್ಲೆಗಳ ಗಡಿಯನ್ನು ಪಡೆದಿದೆ. ಇನ್ನುಳಿದ ಗಡಿ ಪ್ರದೇಶವು ಉತ್ತರದಲ್ಲಿ ಬೀದರ್ ಜಿಲ್ಲೆಯಿಂದ, ದಕ್ಷಿಣದಲ್ಲಿ ರಾಯಚೂರು ಜಿಲ್ಲೆಯವರೆಗೆ ಮತ್ತು ಪಶ್ಚಿಮದಲ್ಲಿ ವಿಜಾಪುರು ಜಿಲ್ಲೆಯಿಂದ ಸುತ್ತುವರಿಯಲ್ಪಟ್ಟಿದೆ. ಈ ದಕ್ಷಿಣ ಭಾಗದಲ್ಲಿ ಕೃಷ್ಣಾ ನದಿಯು ಗುಲಬರ್ಗಾ ಮತ್ತು ರಾಯಚೂರು ಜಿಲ್ಲೆಗಳ ಎಲ್ಲೆಯಾಗಿ ಪ್ರವೇಶಿಸುತ್ತದೆ. ಪಶ್ಚಿಮ ಭಾಗದಲ್ಲಿ ಭೀಮಾನದಿಯು ಸ್ವಲ್ಪ ದೂರ ಗುಲಬರ್ಗಾ ಹಾಗೂ ವಿಜಾಪುರ ಜಿಲ್ಲೆಗಳ ನೈಸರ್ಗಿಕ ಎಲ್ಲೆಯಾಗಿ ಹರಿಯುತ್ತದೆ. ಕೃಷ್ಣ ಹಾಗೂ ಭೀಮನದಿಯ ಮಧ್ಯ ಫಲವತ್ತಾದ ಭೂ ಪ್ರದೇಶ ಹಾಗೂ ಗುಡ್ಡಗಾಡಿನಿಂದ ಆವೃತ್ತವಾಗಿರುವುದರಿಂದ ಬುಡಕಟ್ಟು ಸಮುದಾಯ ಗಳಿಗೆ ಸುಲಭವಾರಿ ಆಕರ್ಷಣೆಯವಾಗಿದೆ.

### ೨.೫.೩. ಗುಲಬರ್ಗಾ ಜಿಲ್ಲೆಯ ವಿಸ್ತೀರ್ಣ ಮತ್ತು ಜನಸಂಖ್ಯೆ

ಗುಲಬರ್ಗಾ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು ೧೯೯೧ರ ಜನಗಣತಿ ಪ್ರಕಾರ ೧೬.೨೨೪. ಚ.ಕಿ.ಮಿ. ಇದ್ದು ರಾಜ್ಯದ ಶೇ. ೮.೪೬% ರಷ್ಟು ಪ್ರದೇಶವನ್ನು ಒಳಗೊಂಡಿದೆ. ವಿಸ್ತೀರ್ಣದಲ್ಲಿ ಇದು ರಾಜ್ಯದ ಎರಡನೇ ದೊಡ್ಡ ಜಿಲ್ಲೆಯಾಗಿದೆ. ಈ ಜಿಲ್ಲೆಯ ಜನಸಂಖ್ಯೆ

೧೫.೮೨ ಲಕ್ಷ ಇದ್ದು ಇದರಲ್ಲಿ ೧೩.೧೬ ಲಕ್ಷ ಪುರುಷರು ೧೨.೬೬ ಲಕ್ಷ ಮಹಿಳೆಯರು ಇದ್ದಾರೆ. ಒಟ್ಟು ಜನಸಂಖ್ಯೆಯಲ್ಲಿ ೧೯.೭೨ ಲಕ್ಷ ಜನರು ಗ್ರಾಮವಾಸಿಗಳಾಗಿದ್ದು ಉಳಿದ ೬.೧೦ ಲಕ್ಷ ಜನರು ನಗರ ವಾಸಿಗಳಾಗಿದ್ದಾರೆ. ಪ್ರತಿ ಚ.ಕಿ.ಮಿ. ಪ್ರದೇಶದಲ್ಲಿ ೧೫೫ ಜನರು ವಾಸಿಸುತಿದ್ದಾರೆ. ಪ್ರತಿ ಸಾವಿರ ಗಂಡಸರಿಗೆ ೯೬೨ ಹೆಂಗಸರಿದ್ದಾರೆ. ೧೯೮೧-೯೧ರಲ್ಲಿ ದೇಶದಲ್ಲಿ ಜಿಲ್ಲೆಯು ಜನಸಂಖ್ಯೆ ಶೇ ೨೪.೦೮ ರಷ್ಟು ಹೆಚ್ಚಾಗಿದ್ದು, ಇದು ರಾಜ್ಯದ ಜನಸಂಖ್ಯೆ ಬೆಳವಣಿಗೆ ಪ್ರಮಾಣ (ಶೇ. ೨೧.೧೧) ಕ್ಕಿಂತ ಹೆಚ್ಚಾಗಿರುತ್ತದೆ. ಜಿಲ್ಲಾವಾರು ಜನಸಂಖ್ಯೆಯು ಪ್ರತಿ ಜಿಲ್ಲೆಯು ೭ ಸ್ಥಾನವನ್ನು ಪಡೆದಿದೆ. ಜಿಲ್ಲೆಯಲ್ಲಿ ಒಟ್ಟು ೬.೧೧ಲಕ್ಷ ಜನ ಪರಿಶಿಷ್ಟ ಜಾತಿಯವರು ಇದ್ದು ಇದು ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇ ೨೩.೬೬ ಆಗಿಯುತ್ತದೆ. ಮತ್ತು ೧.೦೭ ಲಕ್ಷ ಪರಿಶಿಷ್ಟ ವರ್ಗದವರು ಇದ್ದು, ಇದು ಜಿಲ್ಲೆಯ ಒಟ್ಟು ಜನಸಂಖ್ಯೆಯ ೪.೬೯ ಇದೆ. ಜಿಲ್ಲೆಯನ್ನು ಆಡಳಿತದ ದೃಷ್ಠಿಯಿಂದ ಗುಲಬರ್ಗಾ, ಸೇಡಂ ಮತ್ತು ಯಾದಗಿರಿ ಎಂದು ಮೂರು ಕಂದಾಯ ಉಪ ವಿಭಾಗಗಳನ್ನಾಗಿ ವಿಭಾಗಿಸಲಾಗಿದೆ. (ಕೋಷ್ಟಕ ೨.೪ ನೋಡಿ)

### ೨.೫.೪. ನಿಜಾಂ ಸಂಸ್ಥಾನದ ಕಾಲದಲ್ಲಿ ಗುಲಬರ್ಗಾ ಜಿಲ್ಲೆಯ ಭೌಗೋಳಿಕತೆ

ನಿಜಾಮ ಸಂಸ್ಥಾನದ ಮುಖ್ಯ ಮಂತ್ರಿಯಾಗಿದ್ದ ಸಾಲರ್ ಜಂಗ ಕೈಗೊಂಡ ಆಡಳಿತ ಸುಧಾರಣೆಗಳಲ್ಲಿ ಜಿಲ್ಲಾ ಬಂದಿ ಮುಖ್ಯವಾದುದಾಗಿತ್ತು. ಅದರಂತೆ ಸಂಸ್ಥಾನದಲ್ಲಿ ಹಲವಾರು ಜಿಲ್ಲೆಗಳು ಅಸ್ತಿತ್ವಕ್ಕೆ ಬಂದವು. ಆ ಸಂದರ್ಭದಲ್ಲಿ ಗುಲಬರ್ಗಾ ಸುರುಪುರು ಜಿಲ್ಲೆಯು ಒಂದು ಭಾಗವಾಯಿತು. ಸುರುಪುರ ಜಿಲ್ಲೆಯು ಪ್ರಾರಂಭದಲ್ಲಿ ಐದು ತಾಲೂಕುಗಳನ್ನು ಒಳಗೊಂಡಿತ್ತು. ಒಂದು ದಶಕದ ನಂತರ ಹಲವಾರು ಪರಗಣಗಳ ವಿಲೀನತೆಯಿಂದ ತಾಲೂಕಗಳ ಸಂಖ್ಯೆ ಒಂಭತ್ತಕ್ಕೇರಿತು. ಸುರುಪುರ, ಗುಲಬರ್ಗಾ, ಅಂದೋಲಾ, ದೇಂಗಾವ್, ಚಿಂಚೋಳಿ, ಸೇಡಂ, ಕೊಡಂಗಲ್, ಗುರುಮಿಠಕಲ್ ಮತ್ತು ಮಹಾಗಾಂವ ಇವೆ ಆಗಿನ ಒಂಬತ್ತು ತಾಲೂಕಗಳು.

ಆಡಳಿತದ ಅನುಕೂಲವಾಗಿ ೧೮೭೩ ರಲ್ಲಿ ಸುರುಪುರ ಜಿಲ್ಲೆಯನ್ನು ಸುರುಪುರ ಮತ್ತು ಗುಲಬರ್ಗಾ ಜಿಲ್ಲೆಗಳೆಂದು ವಿಭಾಗಿಸಲಾಯಿತು. ಗುಲಬರ್ಗಾ ಜಿಲ್ಲಾವ್ಯಾಪ್ತಿಗೆ ಗುಲಬರ್ಗಾ,




ಚಿಂಚೋಳಿ, ಸೇಡಂ,ಕೊಡಂಗಲ್, ಗುರಮಿಠಕಲ್ ಮತ್ತು ಮಹಾಗಾಂವ್ ತಾಲೂಕಗಳು ಸೇರಿದ್ದವು. ಸುರುಪುರ ಜಿಲ್ಲೆಯಿಂದ ೧೮೮೩ ರಲ್ಲಿ ಆಂದೋಲ ತಾಲೂಕನ್ನು ಗುಲಬರ್ಗಾ ಜಿಲ್ಲೆಗೆ ವರ್ಗಾಯಿಸಲಾಯಿತು. ೧೮೯೨ ರಲ್ಲಿ ಕಾನೂನು ಚ.ಇ. ಮುಭಾರಕ (ಪವಿತ್ರಕಾಯ್ದೆ) ರೂಢಿಯಲ್ಲಿ ಬಂದಿತ್ತು. ಇದು ಆಡಳಿತ ವರ್ಗದವರ ಕೈಪಿಡಿಯಿತ್ತು. ಮರಾಠವಾಡ ಸುಭೆಯಲ್ಲಿದ್ದ ಗುಲಬರ್ಗಾ ವಿಭಾಗದಲ್ಲಿ ಗುಲಬರ್ಗಾ, ರಾಯಚೂರು, ಲಿಂಗಸೂಗೂರು ಮತ್ತು ಉಸ್ಮಾನಬಾದ ಎಂಬ ನಾಲ್ಕು ಜಿಲ್ಲೆಗಳು ಇದ್ದವು. ೧೯೦೧ ರ ಜನಗಣತಿ ವರದಿಯಂತೆ ಗುಲಬರ್ಗಾ ಜಿಲ್ಲೆಯನ್ನು ಲಿಂಗಸೂಗುರು, ಉಸ್ಮಾನಾಬಾದ ಮತ್ತು ರಾಯಚೂರ ಜಿಲ್ಲೆಗಳು ಈ ವಿಭಾಗಕ್ಕೆ ಸೇರಿಸಲಾಗಿತ್ತು ೧೯೦೧ ರಲ್ಲಿ ಗುಲಬರ್ಗಾ ಜಿಲ್ಲೆಯ ತಾಲೂಕಗಳ ವಿವರವನ್ನು ಈ ರೀತಿ ಇದೆ.

ಕೋಷ್ಟಕ ೨.೫

## ನಿಜಾಂನ ಕಾಲದ ಗುಲಬರ್ಗಾ ಜಿಲ್ಲೆಯ ಭೌಗೋಳಿಕ ನೆಲೆ

| ಕ್ರ.ಸಂ. | ತಾಲೂಕ | ವಿಸ್ತೀರ್ಣ(ಚ. ಮೈ.) | ಪಟ್ಟಣಗಳು | ಗ್ರಾಮಗಳು |
|---|---|---|---|---|
| ೧. | ಗುಲಬರ್ಗಾ | ೫೨೪ | ೧ | ೧೦೮ |
| ೨. | ಮಾಹಾಗಾಂವ್ | ೩೦೭ | - | ೮೧ |
| ೩. | ಚಿಂಚೋಳಿ | ೨೭೭ | - | ೬೯ |
| ೪. | ಕೊಡಂಗಲ್ | ೧೪೧ | ೧ | ೬೦ |
| ೫. | ಸೇಡಂ | ೨೬೭ | ೧ | ೭೨ |
| ೬. | ಗುರುಮಿಟಕಲ್ | ೩೦೪ | - | ೮೬ |
| ೭. | ಆಂದೋಲಾ | ೬೦೮ | - | ೧೭೭ |
| ೮. | ಜಹಗೀರುಗಳು ಇತ್ಯಾದಿ | ೧,೬೬೪ | ೪ | ೫೦೯ |
| | ಒಟ್ಟು | ೪,೦೯೨ | ೭ | ೧,೧೦೨ |

## ೧೯೫೬ ರಾಜ್ಯ ಪುನರ್ ವಿಂಗಡಿಣೆ ಪೂರ್ವ ಮತ್ತು ನಂತರದ ಗುಲಬರ್ಗಾ ಜಿಲ್ಲೆಯ (ಭೌಗೋಳಿಕತೆಯ ಪಕ್ಷಿನೋಟ)

೧೯೫೬ರಲ್ಲಿ ರಾಜ್ಯ ಪುನರ್ ನಿರ್ಮಾಣ ಸಮಯದಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ೧೨ ತಾಲೂಕಗಳು ಮತ್ತು ಮೂರು ಆಡಳಿತ ಉಪ ವಿಭಾಗಗಳಿದ್ದವು. ತಾಲೂಕಗಳು - ಗುಲಬರ್ಗಾ, ಚಿಂಚೋಳಿ, ಸೇಡಂ, ಕೋಡಂಗಲ್, ಶಹಾಪೂರ, ಸುರುಪುರ, ಆಂದೋಲಾ, ಆಳಂದ, ಚಿತ್ತಾಪುರ, ಅಫಜಲ್‌ಪುರು, ತಾಂಡೂರು ಮತ್ತು ಯಾದಗಿರಿ. ಉಪ ವಿಭಾಗಗಳು ಗುಲಬರ್ಗಾ, ತಾಂಡೂರು ಮತ್ತು ಯಾದಗಿರಿ, ಈ ೧೨ ತಾಲೂಕಗಳ ಪೈಕಿ ಕೊಡಂಗಲ್, ಮತ್ತು ತಾಂಡೂರು ತಾಲೂಕಗಳನ್ನು ಆಂಧ್ರಪ್ರದೇಶದಲ್ಲಿ ಉಳಿಸಿಕೊಂಡು ನವೆಂಬರ್, ೧೯೫೬ ರಂದು ಉಳಿದ ೧೦ ತಾಲೂಕಗಳನ್ನು ಒಳಗೊಂಡ ಗುಲಬರ್ಗಾ ಜಿಲ್ಲೆಯನ್ನು ವಿಶಾಲ ಮೈಸೂರು ರಾಜ್ಯಕ್ಕೆ ವರ್ಗಾಯಿಸಲಾಯಿತು(ನಕ್ಷೆ ೨.೨.ನೋಡಿ).

## ೨.೫.೫. ಗುಲಬರ್ಗಾ ಜಿಲ್ಲೆಯ ಪೌರಾಣಿಕ ಹಿನ್ನೆಲೆ

ಗುಲಬರ್ಗಾ ಜಿಲ್ಲೆಯಲ್ಲಿ ಪೌರಾಣಿಕ ಹಿನ್ನಲೆಯುಳ್ಳ ಅನೇಕ ಸ್ಥಳಗಳಿದ್ದು, ಅವುಗಳಲ್ಲಿ ಪವಿತ್ರ ಕ್ಷೇತ್ರಗಳೆಂದು ಜನಪ್ರಿಯವಾಗಿವೆ. ಜಿಲ್ಲೆಯ ಶಹಾಪೂರ, ಸುರಪೂರ ಹಾಗೂ ಜೇವರ್ಗಿ ತಾಲೂಕುಗಳ ಗಡಿಯಂತಿರುವ ಕೃಷ್ಣಾ ಭೀಮೆಯರ ನಡುವೆ ವ್ಯಾಪಿಸಿರುವ ಪ್ರದೇಶವು ಪೌರಾಣಿಕ ಹಿರಿಮೆಗೆ ಕನ್ನಡಿ ಹಿಡಿದಂತಿದೆ.

ಪೌರಾಣಿಕ ನಂಬಿಕೆಯ ಪ್ರಕಾರ ಪುರಾಣ ಪ್ರಸಿದ್ದನೂ, ಮಹಾಬಲ ಶಾಲಿಯೂ, ಪರಮ ಧಾರ್ಮಿಕನು ಆದ ಸಗರ ಚಕ್ರವರ್ತಿ ಸಗರನಾಡನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂದು ಪ್ರತೀತಿಯಿದೆ. ಪೌರಾಣಿಕ ಕಥೆಯ ಪ್ರಕಾರ ಇಕ್ಷ್ವಾಕು ವಂಶದ ಅಂಬರೀಷನೆಂಬ ರಾಜನು, ಪರಜ್ಞಾನಿಯೂ, ರಾಜರ್ಷಿಯೂ ಆಗಿದ್ದನು. ಅಂಬರೀಷನು **ಮನುಪುತ್ರನಭಗನ** ಮಗನಾದ ನಾಭಗನ ಮಗನು.ಅಂಬರೀಷನು ಬ್ರಹ್ಮನಶಾಪಕ್ಕೆ ಗುರಿಯಾದನು. ಇದೇ ವಂಶದ ಸತ್ಯವ್ರತನಿಗೆ ಹರಿಶ್ಚಂದ್ರನೆಂಬ ಪ್ರಖ್ಯಾತ ಮಗ ಹುಟ್ಟಿದನು. ಹರಿಶ್ಚಂದ್ರನಿಗೆ ರೋಹಿತನೆಂಬ ಮಗನು ಜನಿಸಿದನು. ರೋಹಿತನ ಮಗನೇ ಹರಿತ. ಈತನ ಮೊಮ್ಮಗನಾದ ಬಾಹುಕನು ಯುದ್ದಗಳಲ್ಲಿಪರಾಭವಗೊಂಡು ನಿರಾಶನಾಗಿ ತನ್ನ ಮಡದಿಯೊಡನೆ ಅರಣ್ಯವನ್ನು ಸೇರಿದನು. ಆ ಸಮಯದಲ್ಲಿ ಬಾಹುಕನು ವೃದ್ಯಾಪ್ಯದಿಂದ ಮರಣ ಹೊಂದಿದನು. ಆನಂತರ ಅವನ ಪತ್ನಿಯು ಓರ್ವ ಮಹರ್ಷಿಯ ಸಂಬಂಧದಿಂದ ಗರ್ಭವತಿಯಾದಳು ಆಕೆಯ ಸವತಿಯವರು ಆಕೆಗೆ ತಿಳಿಯದ ಹಾಗೆ ವಿಷ ಉಣಿಸಿ ಭ್ರೂಣವನ್ನು ನಾಶ ಮಾಡಲು ಪ್ರಯತ್ನಿಸಿದಾಗ್ಯೂ ಗರ್ಭದ ಮೇಲೆ ವಿಷವು ಯಾವ ಪ್ರಭಾವ ಬೀರದೆ 'ಗರ' (ವಿಷ)ವನ್ನು ಮೈತಳಿದು ಜನಿಸಿದ ಮಗುವೆ ಸಗರ[8] ನೆಂಬ ಹೆಸರನ್ನು ಗಳಿಸಿದನು. ಈತನೇ ಮುಂದೆ ಯಶಸ್ವಿ ಸಾಮ್ರಾಟನಾಗಿ 'ಸಗರ ಚಕ್ರವರ್ತಿ' ಎನಿಸಿಕೊಂಡು ಸಗರ ನಾಡನ್ನು ದಕ್ಷತೆಯಿಂದ ಆಳ್ವಿಕೆ ಮಾಡಿದನೆಂಬ ನಂಬಿಕೆ ಇದೆ.[9] ಹೀಗಾಗಿ ಗುಲಬರ್ಗಾ ಜಿಲ್ಲೆಯು ಹಲವಾರು ಪೌರಾಣಿಕ ಹಿನ್ನೆಲೆಯುಳ್ಳ ಪರಂಪರೆಯನ್ನು ಹೊಂದಿದ ಕರ್ನಾಟಕದ ಮಹತ್ವದ ಜಿಲ್ಲೆಗಳಲ್ಲಿ ಒಂದಾಗಿದೆ.

ಅಮರ ಸಿಂಹನ ನಾಮಲಿಂಗನು ಶಾಸನ ಅಥವಾ ಅಮರಕೋಶ ಮಂಗಳಾಷ್ಟಕ ಶ್ಲೋಕ, ಮತ್ಸ್ಯ, ಬ್ರಹ್ಮ ಮತ್ತು ವಾಮನ ಪುರಾಣಗಳಲ್ಲಿ ಹಾಗೂ ಮಹಾಭಾರತದಲ್ಲಿ ಭೀಮನದಿಯ

ಉಲ್ಲೇಖ ಬಂದಿದೆ. ಪುರಾಣಗಳಲ್ಲಿ ಪವಿತ್ರನದಿ ಉಲ್ಲೇಖ ಬಂದಿದೆ. ಪುರಾಣಗಳಲ್ಲಿ ಪವಿತ್ರ ನದಿಗಳ ಸಾಲಿನಲ್ಲಿ ಬಣ್ಣಿಸಿದ ಭೀಮ ನದಿಯನ್ನು ಮಹಾನದಿ ಎಂದು ಉಲ್ಲೇಖಿಸಲಾಗಿದೆ. ಭಾರತದ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದಾದ ಭೀಮಾ ಶಂಕರವು ಭೀಮಾ ನದಿಯ ಉಗಮ ಸ್ಥಾನವಾಗಿದೆ. ತ್ರಿಪುರಾಸುರನನ್ನು ಸೋಲಿಸಿ ದಣಿದ ಶಿವನು ವಿಶ್ರಾಂತಿಗಾಗಿ ಸಹ್ಯಾದ್ರಿಗೆ ಬಂದನಂತೆ, ಆಗ ಇಬ್ಬರು ಋಷಿಗಳನ್ನು ಹತ್ಯೆಗೈದಿದ್ದು, ಅಯೋಧ್ಯೆಯ ರಾಜ ಭೀಮಕನು ಪಾಪ ಪರಿಹಾರಕ್ಕಾಗಿ ತಪಸ್ಸಿಗೆಂದು ಇಲ್ಲಿಗೆ ಬಂದಿದ್ದನೆಂದು ಪ್ರತೀತಿ ಇದೆ. ಈತನ ತಪಸ್ಸಿಗೆ ಮೆಚ್ಚಿದ ಶಿವ ಪ್ರತ್ಯಕ್ಷನಾಗಿ ವರ ನೀಡುವ ಕೃಪೆ ಮಾಡಿದನಂತೆ. ಆಗ ಶಿವನ ಹಣ ಬೆವರುತ್ತಿರುವುದನ್ನು ಕಂಡ ಆ ಭೀಮಕನ ಆ ಹಣೆಯ ಬೆವರೇ ನದಿಯಾಗಿ ಪ್ರವಹಿಸಲಿ ಎಂದು ನುಡಿದನಂತೆ. ಈ ರೀತಿ ಭೀಮಕನ ಪ್ರಾರ್ಥನೆಯಿಂದ ಮೂಡಿ ಬಂದ ನದಿಯೇ ಮುಂದೆ ಭೀಮರತಿ ಅಥವಾ ಭೀಮಾ ನದಿಯೆಂದು ಜನಪ್ರಿಯವಾಯಿತೆಂದು ಐತಿಹ್ಯವಿದೆ.

ಸನ್ನತ್ತಿಯ ಒಂದು ಪುರಾತನ ಸ್ಥಳವಾಗಿರುವಂತೆ ಪೌರಾಣಿಕ ಹಿನ್ನಲೆಯನ್ನು ಹೊಂದಿದೆ.[10] ನಂಬಿಕೆಯ ಪ್ರಕಾರ ರಾಮ ಮತ್ತು ಸೀತೆಯರು ಇಲ್ಲಿ ಮುನಿನಾರಾಯಣ ಹಾಗೂ ಚಂದ್ರವದನ ಅಥವಾ ಚಂದ್ರಲಾಂಬರಾಗಿ ಅವತರಿಸಲು ಜನ್ಮತಾಳಿದರು. ಆಗ ಸೇತು ಎಂಬ ರಾಜನು ಸೀತೆಯನ್ನು ಕೆಣಕಿದಾಗ ಆತನು ಆಕೆಯ ಶಾಪಕ್ಕೆ ಗುರಿಯಾದನು. ಇಲ್ಲಿರುವ ಚಂದ್ರಲಾಂಬೆಯೇ ಪದ್ಮಾವತಿ [11] ಎಂಬ ನಂಬಿಕೆ ಇದೆ. ಇಂತಹ ಹಲವಾರು ಪೌರಾಣಿಕ ಹಿನ್ನಲೆಗಳು ಈ ಜಿಲ್ಲೆಯಲ್ಲಿ ದೊರೆಯುತ್ತವೆ. ಆದ್ದರಿಂದ ಜಿಲ್ಲೆಯು ಐತಿಹಾಸಿಕವಾಗಿ ಹಾಗೂ ಪೌರಾಣಿಕವಾಗಿ ಅಷ್ಟೇ ಮಹತ್ವ ಪಡೆದಿದೆ.

### ೨.೫.೬. ಗುಲಬರ್ಗಾ ಜಿಲ್ಲೆಯ ಪ್ರಾಗೈತಿಹಾಸ

#### ಪೂರ್ವ ಕಾಲದ ಇತಿಹಾಸ

ಗುಲಬರ್ಗಾ ಜಿಲ್ಲೆಯು ನೈಸರ್ಗಿಕವಾಗಿ ಸಂಪದ್ಭರಿತವಾಗಿದೆ. ಭೀಮಾ ನದಿಯು ವಾಯುವ್ಯ ದಿಕ್ಕಿನಲ್ಲಿ ಹರಿಯುತ್ತಿದ್ದು, ಇದರ ಉಪನದಿಗಳು ಜಿಲ್ಲೆಯನ್ನು ಆವರಿಸಿವೆ. ಈ ನದಿಯು ಉತ್ತರ ಭಾಗದಲ್ಲಿ ಫಲವತ್ತಾದ ಕರಿಮಣ್ಣಿದೆ. ದಕ್ಷಿಣ ಭಾಗದಲ್ಲಿ ವಿವಿಧ ಪ್ರಕಾರಗಳ

ಕಲ್ಲುಗಳಿಂದ ಕೂಡಿದ ಸಣ್ಣ-ಸಣ್ಣ ಬೆಟ್ಟಗಳ ಸಾಲುಗಳಿಂದ ತುಂಬಿ ಹೋಗಿವೆ. ಮತ್ತು ಅಲ್ಲಲ್ಲಿ ತಾಮ್ರ, ಕಬ್ಬಿಣ ಮೊದಲಾದ ಖನಿಜ ಸಂಪತ್ತು ಗಣನೀಯ ಪ್ರಮಾಣದಲ್ಲಿದೆ. ಆದ್ದರಿಂದಲೇ ಬಹಳ ಪ್ರಾಚೀನ ಕಾಲದಿಂದಲೇ ಈ ಪ್ರದೇಶವು ಜನರ ವಾಸ ಸ್ಥಾನವಾಗಿತ್ತು.

ಹತ್ತೊಂಬತ್ತನೇಯ ಶತಮಾನದ ಕೊನೆಯಲ್ಲಿ ರಾಬರ್ಟ ಬ್ರೂಸ್‌ಫೂಟ ಎಂಬ ಭೂ ವಿಜ್ಞಾನಿಯು ಸುರುಪುರು ತಾಲೂಕಿನ ಕೃಷ್ಣ ನದಿಯ ದಂಡೆಯ ಮೇಲೆ ಇರುವ ಎಡೆಹಳ್ಳಿಯಲ್ಲಿ ಆದಿ ಹಳೆಯ ಶಿಲಾಯುಗದ ಕಲ್ಲಿನ ಕೊಡಲಿಗಳನ್ನು ಪತ್ತೆ ಮಾಡಿದ್ದು ಇವುಗಳು ಭೀಮಾ ಸ್ಥಳದಗಷ್ಟು ಕಲ್ಲುಗಳ ಪ್ರಕಾರಗಳಲ್ಲೊಂದಾದ ಶೇರಿ ಕಲ್ಲು ಅಥವಾ ಶಹಾಬಾದ್ ಕಲ್ಲಿನವು ಆದರೆ ಪುರಾತತ್ವ ಶಾಸ್ತ್ರಜ್ಞರು ಆದಿ ಹಳೆಯ ಶಿಲಾಯುಗದ ಮಾನವರಿಗೆ ತನ್ನ ಉಪಕರಣಗಳನ್ನು ಮಾಡಿಕೊಳ್ಳಲು ಈ ಕಲ್ಲು ಅಷ್ಟು ಯೋಗ್ಯವಲ್ಲದ್ದರಿಂದ ಎಡೆಹಳ್ಳಿಯಲ್ಲಿ ದೊರೆತ ಉಪಕರಣಗಳ ಬಗೆಗೆ ಅಷ್ಟಾಗಿ ಗಮನಹರಿಸಿರಲಿಲ್ಲ. (ಎಸ್.ನಾಗರಾಜು ಅವರು ಮಧ್ಯ ಹಳೆಯ ಶಿಲಾಯುಗದ ಕಲ್ಲಿನ ಉಪಕರಣಗಳನ್ನು ಶೋಧಿಸಿದರು) ಉಡಚಣ, ಉಡಸಗಿಗಳಲ್ಲಿ ಕ್ರಮವಾಗಿ ಶಿಲಾ ತಾಮ್ರಯುಗದ ಹಂತದಲ್ಲಿಯ ನೂತನ ಶಿಲಾಯುಗದ ಜನ ವಾಸ್ತವ್ಯ ನೆಲೆಗಳನ್ನು ಗುರುತಿಸಿದ್ದರು. ಬೂದಿ ಹಾಳದಲ್ಲಿ ಎರಡು ಬೃಹತ್ ಬೂದಿ ಗುಡ್ಡಗಳು ಇರುವುದನ್ನು ೧೯೬೪ ರಲ್ಲಿ ಶೋಧಿಸಿ ವರದಿ ಮಾಡಿದ್ದರು.

೧೯೭೦ರ ದಶಕದ ಆದಿ ಭಾಗದಲ್ಲಿ ದಖನ್ ಸ್ನಾತಕೋತ್ತರ ಮತ್ತು ಸಂಶೋಧನಾ ಸಂಸ್ಥೆಯ "ಕೆ. ಪೆದ್ದಯ್ಯನವರು ೧೯೬೦ರ ದಶಕದಲ್ಲಿ ಬ್ರೂಸ್ ಫೂಟ್ ರವರ" ಶೋಧನೆಯನ್ನು ಗಂಭೀರವಾಗಿ ಗಮನಿಸಿ, ಮತ್ತೆ ಈ ಪ್ರದೇಶದಲ್ಲಿ ಪುರಾತತ್ವ ಅನ್ವೇಷಣೆ ಕೈಗೊಂಡರು. ಶೋರಾಪುರ, ಸಂಗಮ ಪ್ರದೇಶದ "ಪ್ರಾಗ್ ಇತಿಹಾಸ ಮತ್ತು ಪೂರ್ವ ಭಾವಿ ಇತಿಹಾಸ ಸಂಸ್ಕೃತಿಗಳು"[12] ಎಂಬ ವಿಷಯವನ್ನು ಅಧ್ಯಯನಕ್ಕೆ ಆರಿಸಿ ಕೊಂಡಿದ್ದರು. ಕರ್ನಲ್ ಮೆಂಡೋಸ್ ಟೈಲರ್ ಅವರು ೧೯ನೇ ಶತಮಾನದ ಮಧ್ಯಭಾಗದಲ್ಲಿ ಕಬ್ಬಿಣ ಯುಗದ ಬೃಹತ್ ಶಿಲಾ ಸಂಸ್ಕೃತಿಯ ಅವಶೇಷಗಳೆಂದು ಗುರುತಿಸಲಾದ ಕೆಲವು ಮಹತ್ವದ ಕಲ್ಲು ವೃತ್ತಗಳ ಮತ್ತು ಕಲ್ಮನೆಗಳಿರುವ ನಿವೇಶನಗಳನ್ನು ಜೇವರ್ಗಿ, ಆಂದೋಲ, ಚಿಕ್ಕನಹಳ್ಳಿ, ರಾಜನ ಕೋಳೂರ, ಹಗರಟಗಿಯಲ್ಲಿ ಹುಡುಕಿ ಅಧ್ಯಯನ ಮಾಡಿದರು ಹೀಗೆ ಕ್ಷೇತ್ರಕಾರ್ಯ ಮತ್ತು ಉತ್ಖನನಗಳಿಂದ

ಬೆಳಕಿಗೆ ಬಂದ ಎಲ್ಲ ಸಾಂಸ್ಕೃತಿಕ ಅವಶೇಷಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿ ವಿವರಣೆಯನ್ನು ಕೊಟ್ಟಿದ್ದಾರೆ.

ಗುಲಬರ್ಗಾ ಜಿಲ್ಲೆಯವರೇ ಆದ ಕಪಟರಾಳ ಕೃಷ್ಣರಾಯರು ತಮ್ಮ ಸಂಶೋಧನೆಗಳಿಗೆ ಹೆಸರುವಾಸಿಯಾಗಿದ್ದರು. ಇವರ ಸಂಶೋಧನೆಗಳಲ್ಲಿ ಕರ್ನಾಟಕ ಆದಿ ಕಾಲದ ಇತಿಹಾಸ, ಸಂಸ್ಕೃತಿ ಹಾಗೂ ವಿಶೇಷವಾಗಿ ಕಲೆಯ ದೃಷ್ಟಿಯಿಂದ ಸನ್ನತಿಯಲ್ಲಿಯ ಮಹತ್ವದ ಬೌದ್ಧನೆಲೆಯನ್ನು ಬೆಳಕಿಗೆ ತಂದರು. ಅಷ್ಟೇ ಅಲ್ಲ ಪೆದ್ದಯ್ಯನವರು ಕೊಡೇಕಲ್ಲ ಕಕ್ಕೇರಾಗಳಲ್ಲಿ ಬೂದಿ ಗುಡ್ಡಗಳ ಉತ್ಖನನ ಮಾಡಿದರು.

ಕೇಂದ್ರ ಸರಕಾರದ ಪುರಾತತ್ವ ಇಲಾಖೆಯು ದಕ್ಷಿಣ ಏಷ್ಯಾ ಅಧ್ಯಯನ ಸಂಸ್ಥೆ ಬ್ರಿಟಿಷ ಸಂಸ್ಥೆಯ ಸಹಯೋಗದೊಂದಿಗೆ ಸನ್ನತಿಯಲ್ಲಿ ಅದಕ್ಕೆ ಹೊಂದಿಕೊಂಡ ಕಣಗಿನಹಾಳದಲ್ಲಿರುವ ಒಂದು ಮಹಾಸ್ತೂಪವನ್ನು ಉತ್ಖನನ ಮಾಡಿತು. ಇದೇ ಸಂದರ್ಭದಲ್ಲಿ ಸನ್ನತಿಯಲ್ಲಿ ಮಹತ್ವದ ಕಾರ್ಯಚರಣೆ ನಡೆದು ಮೌರ್ಯ ಚಕ್ರವರ್ತಿ ಅಶೋಕನ "ಹಳದಾಪುರ್ ಬೃಹತ್ ಬಂಡೆ ಶಾಸನಗಳಲ್ಲಿಯ ೧೩ ಮತ್ತು ೧೪ನೇ ವಿಧಿಗಳು ಕಳಿಂಗದಲ್ಲಿನ ಪ್ರತ್ಯೇಕ ಶಾಸನಗಳ ಪ್ರತಿಗಳು ಆಗಿದ್ದವು". ಕಳಿಂಗದ ಪ್ರತ್ಯೇಕ ಶಾಸನಗಳು ಇದುವರೆಗೆ ಅಲ್ಲಿ ಮಾತ್ರ ಇದ್ದುದು ತಿಳಿದಿತ್ತು. ಹೀಗೆ ಈ ಶಾಸನಗಳ ಶೋಧನೆಯು ಆದಿ ಇತಿಹಾಸದ ಅಧ್ಯಯನಕ್ಕೆ ಅತ್ಯಂತ ಮಹತ್ವದ ಕೊಡುಗೆಗಳಾಗಿವೆ.

ಈಗ ಈ ಶೋಧನೆಗಳ ಹಿನ್ನಲೆಯಲ್ಲಿ ಆದಿ ಹಳೆಯ ಶಿಲಾಯುಗದಿಂದ ಹಿಡಿದು ಮೌರ್ಯ ಶಾತವಾಹನರ ಕಾಲಗಳ ವರೆಗಿನ ಸಾಂಸ್ಕೃತಿಕ ಬೆಳವಣಿಗೆಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಲು ಪ್ರಯತ್ನಿಸಲಾಗಿದೆ.

ಹುಣಸಗಿಯಲ್ಲಿ ಆದಿ-ಹಳೇಶಿಲಾಯುಗದ ಐದು ನೆಲೆಗಳು ಪತ್ತೆಯಗಿವೆ. ಇಂತಹ ನೆಲೆಗಳು ಕರ್ನಾಟಕ ಹಾಗೂ ದಕ್ಷಿಣ ಭಾರತಗಳಲ್ಲಿ ಹಲವಾರು ನೆಲೆಗಳು ಇವೆ. ಆದರೆ ಇವುಗಳಲ್ಲಿ ಬಹಳಷ್ಟು ನೆಲೆಗಳಲ್ಲಿ ಇರುವ ಆದಿ - ಹಳೇಶಿಲಾಯುಗದ ಉಪಕರಣಗಳು, ನದಿಗಳ ಪ್ರವಾಹಗಳಿಗೆ ಸಿಕ್ಕಿ ತಮ್ಮ ತಮ್ಮ ಮೂಲಸ್ಥಾನಗಳಿಂದ ಸ್ಥಾನಪಲ್ಲಟವಾಗಿ ಈಗ ಅವು ಬೇರೆ ಬೇರೆ ಕಡೆಗಳಲ್ಲಿ ಕಂಡು ಬಂದಿವೆ. ಆದುದರಿಂದ ಅವುಗಳ ಮೂಲ ನೆಲೆಗಳು ತಿಳಿಯದೇ

ಇರುವುದು ಈ ಸಂಸ್ಕೃತಿಯ ಅಧ್ಯಯನದಲ್ಲಿ ಒಂದು ದೊಡ್ಡ ತೊಡಕಾಗಿದೆ. ಆದರೆ ಹುಣಸಗಿಯಲ್ಲಿಯ ನೆಲೆಗಳು ಎಲ್ಲವು ಮೂಲ ನೆಲೆಗಳಾಗಿವೆ. ಮತ್ತು ಇಂತಹ ಉಪಕರಣಗಳನ್ನು ಸಿದ್ಧಮಾಡುವ ಕಾರ್ಯಗಾರಗಳಾಗಿವೆ. ಆದ್ದರಿಂದ ಇಡೀ ಭಾರತದಲ್ಲಿರುವ ಇಂತಹ ಕೆಲವೇ ನೆಲೆಗಳಲ್ಲಿ ಹುಣಸಗಿಯ ನೆಲೆಗಳು ಮಹತ್ವದಾಗಿವೆ.

ಕೃಷ್ಣಾ ಸೇತುವೆಯ ಬಳಿ, ಮಳಖೇಡ ಹಾಗೂ ಇತರ ನೆಲೆಗಳಲ್ಲಿ ಮಧ್ಯ ಹಳೆಯ ಶಿಲಾಯುಗದ ಜನರ ಕಲ್ಲಿನ ಉಪಕರಣಗಳು ಮಾತ್ರ ದೊರೆತಿವೆ. ಈ ಕಲ್ಲಿನ ಉಪಕರಣಗಳು ಈಗಿನ ಒಂದು ರೂಪಾಯಿ ನಾಣ್ಯದಷ್ಟು ಸಾಮಾನ್ಯವಾಗಿ ದೊಡ್ಡದಾಗಿವೆ. ಇವುಗಳನ್ನು ಉತ್ತಮ ಜಾತಿಯ ಕಲ್ಲುಗಳಿಂದ ಮಾಡಲಾಗಿದೆ ಎಂದು ಸಂಶೋಧನೆಯಿಂದ ಖಚಿತ ಪಟ್ಟಿದೆ.

ಹೀಗೆ ಈ ಎಲ್ಲಾ ಭೂವಿಜ್ಞಾನಿಗಳು ಶೋಧನೆಯನ್ನು ಮಾಡಿರುವ ಸಾಹಸವನ್ನು ನೋಡಿದರೆ ಪ್ರಾಚೀನ ಕಾಲದಿಂದಲೂ ಗುಲಬರ್ಗಾ ಜಿಲ್ಲೆಯು ಆದಿ ಮಾನವನಿಗೆ ವಾಸಿಸಲು ಅನುಕೂಲಕರವಾದ ವಾತಾವರಣವನ್ನು ಹೊಂದಿತ್ತು ಎಂಬುವುದು ತಿಳಿದುಬರುತ್ತದೆ. ಏಕೆಂದರೆ ಹಳೆಯ ಶಿಲಾಯುಗ ಮತ್ತು ಹೊಸ ಶಿಲಾಯುಗದ ಜೊತೆ -ಜೊತೆಗೆ ತಾಮ್ರಯುಗದ ಹಲವಾರು ಕುರುಹುಗಳು ಭೂವಿಜ್ಞಾನಿಗಳ ಶೋಧನೆಯಲ್ಲಿ ದೊರೆತಿವೆ. ಇದರಿಂದ ಆದಿ ಕಾಲದಿಂದಲೂ ಮಾನವನು ಈ ಜಿಲ್ಲೆಯಲ್ಲಿ ಸುಖವಾದ ಜೀವನವನ್ನು ಸಾಗಿಸುತ್ತಾ ಬಂದಿದ್ದಾನೆಂಬುದು ತಿಳಿದುಬರುತ್ತದೆ.

## ಗುಲಬರ್ಗಾ ಜಿಲ್ಲೆಯ ಇತಿಹಾಸ

ಗುಲಬರ್ಗಾ ಜಿಲ್ಲೆಯು ಪೌರಾಣಿಕ ಮಹತ್ವ ಹೊಂದಿರುವುದರ ಜೊತೆಗೆ ಐತಿಹಾಸಿಕವಾಗಿಯೂ ಅಷ್ಟೇ ಮಹತ್ವ ಪಡೆದಿದೆ. ಪ್ರಾಚೀನ ಅರಸು ಮನೆತನಗಳಾದ ಮೌರ್ಯ ಮತ್ತು ಶಾತವಾಹನರ ಆಡಳಿತಕ್ಕೆ ಗುಲಬರ್ಗಾ ಜಿಲ್ಲೆ ಒಳಪಟ್ಟಿತ್ತು ಎಂಬುದು ತಿಳಿದು ಬರುತ್ತದೆ. ಏಕೆಂದರೆ ಅಶೋಕನ ಅನೇಕ ಶಿಲಾಶಾಸನಗಳು ಕರ್ನಾಟಕದಲ್ಲಿ ದೊರೆತಿವೆ. ಅದೇ ರೀತಿ ಗುಲಬರ್ಗಾ ಜಿಲ್ಲೆಯ ಸನ್ನತಿಯಲ್ಲಿ ಮೌರ್ಯರ ಕಾಲದ ಶಿಲಾ ಶಾಸನವು ದೊರೆತಿದೆ. ಈ ಶಾಸನದಿಂದ ಸನ್ನತಿಯಲ್ಲಿ ಮೌರ್ಯ ಸಾಮ್ರಾಜ್ಯದ ಒಬ್ಬ ಉನ್ನತ ಆಡಳಿತಾಧಿಕಾರಿ ಇದ್ದಿರಬೇಕೆಂದು ಕಾಣುತ್ತದೆ. ಇದರಿಂದ ಗುಲಬರ್ಗಾ ಜಿಲ್ಲೆಯ ಸನ್ನತಿಯು ಅಶೋಕನ

ಆಡಳಿತದ ಒಂದು ಪ್ರಮುಖ ಭಾಗವಾಗಿತ್ತೆಂದು ತಿಳಿದು ಬರುತ್ತದೆ. ಇದರಿಂದ ಗಮನಿಸುವಂತಹ ಮಹತ್ವದ ಸಂಗತಿ ಎಂದರೆ ಗುಲಬರ್ಗಾ ಜಿಲ್ಲೆಯು ಒಂದು ಪ್ರಾಚೀನ ಕಾಲದಿಂದಲೂ ಐತಿಹಾಸಿಕ ಮಹತ್ವ ಪಡೆದ ಜಿಲ್ಲೆಯಾಗಿದೆ ಎಂಬುದು ವಿದಿತವಾಗುತ್ತದೆ.

ಸನ್ನತಿಯಲ್ಲಿ ದೊರೆತ ಕೆಲವು ಶಾನಗಳ ಪ್ರಕಾರ ಶಾತವಾಹನ ಅರಸರ ಕಾಲದ ಮೇಲೆ ಹೇಳಿದ ಅವಶೇಷಗಳು ಬಹಳ ದೊರೆಯುತ್ತವೆ. ಉತ್ಖನನದಲ್ಲಿಯು ಕೂಡಾ ಸುಮಾರು ಎರಡು ಮೀಟರಿನಷ್ಟು ಆಳದ ಶಾತವಾಹನರ ಕಾಲದ ಜನವಸತಿಯ ವಸ್ತು ಅವಶೇಷಗಳಿವೆ. ಮತ್ತು ಇಡೀ ನೆಲೆಯ ಸುತ್ತ ಆ ಕಾಲದ ಇಟ್ಟಿಗೆ ರಕ್ಷಣಾ ಗೋಡೆ ಇದೆ. ಪ್ರಾಯಶಃ ಮೂಲದಲ್ಲಿ ಇದು ಮೌರ್ಯರ ಕಾಲದಲ್ಲಿ ಪ್ರಾರಂಭವಾಗಿ ಶಾತವಾಹನರ ಕಾಲದಲ್ಲಿ ವಿಸ್ತಾರವಾಯಿತ್ತೆಂದು ಕಾಣುತ್ತದೆ. ಕೋಟೆಯ ಭಾಗದ ಉತ್ಖನನದಿಂದ ಇದನ್ನು ತಿಳಿಯಲು ಸಾಧ್ಯ ಮತ್ತು ಕೋಟೆಯೊಳಗಿನ ನೆಲೆಯಲ್ಲಿ ಆ ಕಾಲದ ನಗರವಿದ್ದ ಕುರುಹುಗಳಿವೆ. ಇದರಿಂದ ಗುಲಬರ್ಗಾ ಜಿಲ್ಲೆಯ ಇತಿಹಾಸ ಕ್ರಿ.ಪೂ. ಮೂರನೇ ಶತಮಾನದಲ್ಲಿ ಆಳ್ವಿಕೆ ಮಾಡಿದ ಶಾತವಾಹನರ ಕಾಲದ್ದಾಗಿರಬಹುದೆಂದು ಊಹಿಸಬಹುದು.

ಶಾತವಾಹನರ ಕಾಲದ ಶಾಸನಗಳಲ್ಲಿ ನಾಲ್ಕು ಶಾಸನಗಳು ನೇರವಾಗಿ ಶಾತವಾಹನ ಅರಸರಿಗೆ ಸಂಬಂಧಪಟ್ಟವು. ಈ ಅರಸು ಮನೆತನದಲ್ಲಿ ಪ್ರಸಿದ್ದರಾದ ಗೌತಮಿ ಪುತ್ರ ಶಾತಕರಣಿ ಮತ್ತು ವಸಿಷ್ಠ ಪುತ್ರ ಪುಲುಮಾವಿ ಇವರನ್ನು ಉಲ್ಲೇಖಿಸುತ್ತವೆ. ಬಹುಶ : ಈ ಪ್ರದೇಶವು ನೇರವಾಗಿ ಅವರ ಆಡಳಿತಕ್ಕೆ ಒಳಪಟ್ಟಿತ್ತೆಂದು ಕಾಣುತ್ತದೆ. ಈ ಸ್ಥಳವು ಅವರ ಕಾಲದಲ್ಲಿ ಒಂದು ಪ್ರಮುಖ ಪಟ್ಟಣವಾಗಿತ್ತು.

ಸುಮಾರು ಕ್ರಿ.ಶ.ನಾಲ್ಕನೇ ಶತಮಾನದ ಹೊತ್ತಿಗೆ ಉತ್ತರ ಕನ್ನಡ ಜಿಲ್ಲೆಯ ಬನವಾಸಿ ಪ್ರದೇಶದಲ್ಲಿ ಒಂದು ಸ್ವತಂತ್ರ ಕನ್ನಡ ರಾಜ್ಯವು ಉದಯವಾಯಿತು. ಇದರ ಸಂಸ್ಥಾಪಕ ಕದಂಬ ಮಯೂರವರ್ಮ. ಈ ಕದಂಬ ಅರಸು ಮನೆತನ ಉಚ್ಛ್ರಾಯ ಕಾಲದಲ್ಲಿ ಹಾಸನ, ತುಮಕೂರ ಜಿಲ್ಲೆಗಳ ಉತ್ತರ ಭಾಗ ಪಶ್ಚಿಮಕ್ಕೆ ಅರಬ್ಬಿ ಸಮುದ್ರದವರೆಗೂ ವಿಸ್ತರಿಸಿತ್ತು. ಕದಂಬ ವಂಶದ ಪ್ರಸಿದ್ಧ ಅರಸು ರವಿವರ್ಮನು ನರ್ಮದಾ ನದಿಯವರೆಗೂ ತನ್ನ ವಿಜಯ ಯಾತ್ರೆಯನ್ನು ನಡಿಸಿದನಂತೆ.[13] ಬೆಳಗಾವಿ ಜಿಲ್ಲೆಯ ಬೇಡಿಕೆ ಹಾಳದಲ್ಲಿ ಆದಿ ಕದಂಬ

ಶಾಸನವು ಸಿಕ್ಕಿದೆ. ಪ್ರಾಯಶ : ಇದು ಕೂಡ ಶಾಸನ ಎಂಬ ಅನುಮಾನ ಇದೆ. ಈ ಶಾಸನದ ಪ್ರಕಾರ ಶಾಂತಿವರ್ಮನೆಂಬ ಅರಸು ಬೇಡಿಕೆಹಾಳದ ಸುತ್ತಮುತ್ತಲಿನ ಪ್ರದೇಶದ ಭೂಮಿಯನ್ನು ದಾನ ಕೊಟ್ಟ ವಿಷಯವಿದೆ [14] ಹೀಗೆ ರವಿವರ್ಮನ ವಿಜಯ ಯಾತ್ರೆ ಹಾಗೂ ಬೇಡಿಕೆ ಹಾಳದ ತಾಮ್ರ ಪಟದ ವಿಷಯವನ್ನು ಗಮನಿಸಿದಾಗ ಇವರ ರಾಜ್ಯವು ಉತ್ತರದಲ್ಲಿ ಕೃಷ್ಣಾ ನದಿಯಿಂದ ಸ್ವಲ್ಪ ಉತ್ತರ ಭಾಗದ ವರೆಗೂ ವಿಸ್ತರಿಸಿದ ಸಾಧ್ಯತೆ ಇದೆ. ಆದುದರಿಂದ ಗುಲಬರ್ಗಾ ಪ್ರದೇಶವು ಮುಖ್ಯವಾಗಿ ಇದರ ದಕ್ಷಿಣ ಭಾಗವು ಕದಂಬ ರಾಜ್ಯದಲ್ಲಿ ಇದ್ದು ಅವರ ಆಡಳಿತಕ್ಕೆ ಒಳಪಟ್ಟಿ ತೆಂದು ತಿಳಿದುಬರುತ್ತದೆ.

**ಮಳಖೇಡದ ರಾಷ್ಟ್ರಕೂಟರು**

ಗುಲಬರ್ಗಾ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಹಲವಾರು ಅರಸು ಮನೆತನಗಳಲ್ಲಿ ಪ್ರಮುಖವಾದ ಮನೆತನ ರಾಷ್ಟ್ರಕೂಟರದು. ಇವರ ಮೂಲ ಪುರುಷ ದಂತಿದುರ್ಗನು ಕ್ರಿ.ಶ. ೭೫೭ರಲ್ಲಿ ಚಾಲುಕ್ಯ ಆಡಳಿತವನ್ನು ತೊಡೆದು ಹಾಕಿ ಮಳಖೇಡ ರಾಜಧಾನಿಯಾಗಿ ಮಾಡಿಕೊಂಡು ರಾಷ್ಟ್ರಕೂಟ ವಂಶವನ್ನು ಸ್ಥಾಪಿಸಿದನು. ಆದರೆ ಗುಲಬರ್ಗಾ ಜಿಲ್ಲೆಯಲ್ಲಿ ರಾಷ್ಟ್ರಕೂಟರ ಕಾಲದ ಶಾಸನಗಳು ಇದುವರೆಗೂ ಪತ್ತೆಯಗಿರುವುದು ಕೆಲವು ಮಾತ್ರ. ಜಿಲ್ಲೆಯಲ್ಲಿ ದೊರೆತ ಶಾಸನಗಳಾಗಲಿ ಬೇರೆ ಪ್ರದೇಶದಲ್ಲಿ ದೊರೆತ ಶಾಸನವಾಗಲಿ ಮಳಖೇಡ ಅಥವಾ ಮಾನ್ಯಖೇಟಗಳೆರಡೂ ಒಂದೇ ಎಂಬ ಭಿನ್ನಾಭಿಪ್ರಾಯವನ್ನು ಸಮರ್ಥಿಸುವುದಿಲ್ಲ.

ಗುಲಬರ್ಗಾ ಜಿಲ್ಲೆಯಲ್ಲಿ ರಾಷ್ಟ್ರಕೂಟರ ಮುಮ್ಮಡಿ ಕೃಷ್ಣನ ಮೂರು ಶಾಸನಗಳು ಮಾತ್ರ ಕಾಣಸಿಗುತ್ತವೆ.[15] ಶಹಾಪುರ ತಾಲೂಕಿನ ಶಿರವಾಳದಲ್ಲಿ ದೊರೆತ ೯೩೯ರ ಅಕಾಲ ವರ್ಷ ಮುಮ್ಮಡಿ ಕೃಷ್ಣನ ಶಾಸನದಲ್ಲಿ ಸಗರನಾಡಿನ ಉಲ್ಲೇಖವಿದೆ.[16] ಜೇವರ್ಗಿ ತಾಲೂಕಿನ ಆಂದೋಲದಲ್ಲಿರುವ ೯೫೮ರ ಶಾಸನದಲ್ಲಿ ಕನ್ನಡದೇವ ಅಕಾಲವರ್ಷನು ನವಖಂಡ ಪೃಥ್ವಿಯನ್ನು ಆಳುತ್ತಿದ್ದನೆಂಬ ಉಲ್ಲೇಖವಿದೆ. ಇವರಿಂದ ಮೂರನೆ ಶಾಸನವು ಚಿಂಚೋಳಿ ತಾಲೂಕಿನ ನಿಡಗುಂದದಲ್ಲಿ ದೊರೆತ್ತಿದ್ದು ಅದು ಅಸ್ಪಷ್ಟವಾಗಿದೆ. ರಾಷ್ಟ್ರಕೂಟರ ಆಡಳಿತದ ಬಗೆಗೆ ಬೇರೆ ಯಾವುದೇ ಶಾಸನಾಧಾರಗಳು ಈ ಜಿಲ್ಲೆಯಲ್ಲಿ ಲಭ್ಯವಾಗಿಲ್ಲ. ಇದರಿಂದ ಮಳಖೇಡ ರಾಷ್ಟ್ರಕೂಟರ ರಾಜಧಾನಿ ಯಾಗಿರುವುದರಲ್ಲಿ ಯಾವುದೇ ಅನುಮಾನವಿಲ್ಲ.

ರಾಷ್ಟ್ರ ಕೂಟರ ಪ್ರಸಿದ್ಧ ದೊರೆ ಅಮೋಘವರ್ಷ ತನ್ನ ಆಸ್ಥಾನದಲ್ಲಿ ವಿವಿಧ ಮತ ಪಂಥಗಳ ಪಂಡಿತರನ್ನು ಹಾಗೂ ಕವಿಗಳನ್ನೂ ಬರಮಾಡಿಕೊಂಡು ತನ್ನ ರಾಜ್ಯದ ಕೀರ್ತಿಯನ್ನು ಎಲ್ಲಾ ಕಡೆ ಹರಡಿದನು . ಈತನ ಆಸ್ಥಾನ ಕವಿ ಶ್ರೀ ವಿಜಯ ಕವಿರಾಜ ಮಾರ್ಗ ಎಂಬ ಲಾಕ್ಷಣಿಕ ಗ್ರಂಥವನ್ನು ಮೊಟ್ಟಮೊದಲು ಕನ್ನಡದಲ್ಲಿ ಬರೆದು ಪ್ರಸಿದ್ಧ ಪಡೆದಿದ್ದನು. ಅಮೋಘವರ್ಷನು ಮಾನ್ಯಖೇಟ ಪಟ್ಟಣವನ್ನು ಕಟ್ಟಿ ಅದು ಸಾಮ್ರಾಜ್ಯದ ರಾಜಧಾನಿಯ ಅರ್ಹತೆಯ ಪಡೆಯುವಂತೆ ಮಾಡಿದನು ಮಾನ್ಯಖೇಟವು (ಮಳಖೇಡ) ರಾಷ್ಟ್ರಕೂಟರ ರಾಜಧಾನಿಯೆಂದು ಪ್ರಥಮತಃ ದೃಡಪಡುವದು ಈ ಅರಸನ ಆಳ್ವಿಕೆಯ ದಾಖಲೆಗಳಿಂದಲೇ ಎಂದು ಹೇಳಬಹುದು.

ಅರಬ್ ಗ್ರಂಥಕರ್ತೃ ಸುಲೇಮಾನನು ಅಮೋಘವರ್ಷನನ್ನು ಪ್ರಪಂಚದ ದೊಡ್ಡ ಸಾಮ್ರಾಟರೊಂದಿಗೆ ಅಂದರೆ ಚೀನಾ, ಬಾಗ್ದಾದ್ ಮತ್ತು ಕಾನ್‌ಸ್ಟಾಂಟಿನೋಪಾಲ್ ರಾಜರುಗಳ ಸಹ ಪಂಕ್ತಿಯಲ್ಲಿ ಅಮೋಘವರ್ಷನನ್ನು ಹೋಲಿಸಿದ್ದಾನೆ. ಹೀಗೆ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಗುಲಬರ್ಗಾ ಜಿಲ್ಲೆಯ ಇತಿಹಾಸ ಅಷ್ಟದಿಕ್ಕುಗಳಲ್ಲಿ ಹರಡಿರುವದು ಕಂಡುಬರುತ್ತದೆ.

## ಕಲ್ಯಾಣದ ಚಾಲುಕ್ಯರು

ಉತ್ತರ ಕರ್ನಾಟಕದ ಪ್ರಸಿದ್ಧ ರಾಜ ಮನೆತನಗಳಲ್ಲಿ ಕಲ್ಯಾಣ ಚಾಲುಕ್ಯರ ಮನೆತನವು ಒಂದು. ಗುಲಬರ್ಗಾ ಜಿಲ್ಲೆಯಲ್ಲಿ ಕಲ್ಯಾಣ ಚಾಲುಕ್ಯರು ನೂರಾರು ಶಿಲಾ ಶಾಸನಗಳು ಲಭ್ಯವಿದ್ದು ಅವರ ಆಡಲಿತ ಪ್ರಭಾವವು ಜಿಲ್ಲೆಯಾದ್ಯಂತ ಕಂಡುಬರುವುದು. ಚಾಲುಕ್ಯರ ಶಾಖೆಯ ಇಮ್ಮಡಿ ತೈಲನಿಂದ ರಾಷ್ಟ್ರಕೂಟರ ಇಮ್ಮಡಿ ಕರ್ಕನು ಸುಮಾರು ೯೭೩ರಲ್ಲಿ ಪರಾಜಯಗೊಂಡ ನಂತರ ಒಂದು ಕಾಲದಲ್ಲಿ ಪ್ರಭಲರಾಗಿದ್ದ ರಾಷ್ಟ್ರಕೂಟರ ಸಾಮ್ರಾಜ್ಯವು ಕ್ಷೀಣಿಸಿತು. ಚಾಲುಕ್ಯರ ಪ್ರಾರಂಭ ಕಾಲದ ಶಾಸನಗಳು ಈ ಜಿಲ್ಲೆಯಲ್ಲಿ ಲಭ್ಯವಿಲ್ಲ. ಆದರೆ ಈ ಕಾಲದ ಕೆಲವು ಮುಖ್ಯ ಆಡಳಿತ ವಿಭಾಗಗಳೆಂದರೆ ಸಗರ-೫೦೦ ಪೂರ್ವ ಮತ್ತು ಪಶ್ಚಿಮಗಳಲ್ಲಿ ಅರಲು-೩೦೦ ಹಾಗೂ ಬಿಜಾಪುರ ಜಿಲ್ಲೆ ಉತ್ತರ ದಕ್ಷಿಣದಲ್ಲಿ ಕೃಷ್ಣ-ಭೀಮೆಯರ ಮೇರೆಯಲ್ಲಿ ಸಗರ ನಾಡು ವ್ಯಾಪಿಸಿತ್ತು. ಇದರಲ್ಲಿ ಕೆಂಭಾವಿ -೨೪, ನರೆಯಂಬೋಳೆ-೭೦ ಮುಂತಾದ ಆಡಳಿತ ಘಟಕಗಳಲ್ಲದೆ ಏವೂರು, ಮುದುನೂರು,

ಉಳಿರಾವೆ. ಕುಳಘೇರಿ, ಆಂದೇಲಿ, ಕೊಂಡಗುಳಿ, ಸಗರ-ಶಿರವಾಳ ಮುಂತಾದ ಪ್ರದೇಶಗಳು ಚಾಲುಕ್ಯರ ಪ್ರಸಿದ್ಧ ಆಡಳಿತದ ಕೇಂದ್ರಗಳಾಗಿದ್ದವು ಎಂಬುವದು ತಿಳಿದುಬರುತ್ತವೆ.

ಸಗರನಾಡಿನ ಐತಿಹಾಸಿಕ ಘಟನೆ ಕುರಿತು ಈ ಹಿಂದೆ ಫ್ಲೀಟ್ ಅವರು ಬರೆದಿರುವುದಲ್ಲದೆ ಇತರ ಐತಿಹಾಸಿಕ ಗ್ರಂಥಗಳಲ್ಲಿಯೂ ಪ್ರಕಟವಾಗಿದೆ. ಸುರಪುರ ತಾಲೂಕಿನ ದಕ್ಷಿಣಕ್ಕೆ ಕೃಷ್ಣನದಿ ಮೇರೆಯಾಗಿ ಹಗರಟಗಿ-೩೦೦ರ ನಾಡು ಚಾಲುಕ್ಯರಿಂದ ಯಾದವರ ಕಾಲದ ವರೆಗೆ ಅಸ್ತಿತ್ವದಲ್ಲಿತ್ತು. ಜೇವರ್ಗಿ ತಾಲೂಕಿನ ಆಂದೇಲಿಯಲ್ಲಿ ದೊರೆತಿರುವ ಶಾಸನವು ಅಹವಮಲ್ಲ ಮೊದಲನೆ ಸೋಮೇಶ್ವರನ ಕಾಲಕ್ಕೆ ಸೇರಿದ್ದಾಗಿದೆ. ಚೆನ್ನಮಾಧವ ದೇವಾಲಯ ಆತನು ನೀಡಿದ ದತ್ತಿಯನ್ನು ದಾಖಲಿಸುತ್ತದೆ.

ಚಿತ್ತಾಪುರ ತಾಲೂಕಿನ ನಾಗಾಯಿ ಶಾಸನವು ಸೋಮೇಶ್ವರನ ಕಾಲದಲ್ಲಿ ರಚನೆಗೊಂಡು ಇದು ಸ್ಥಳೀಯ ೬೦ ಕಂಬದ ದೇವಾಲಯದ ಮುಂಭಾಗದಲ್ಲಿ ಸ್ಥಾಪನೆ ಗೊಂಡಿದೆ. ಸುದೀರ್ಘವಾದ ಈ ಶಾಸನದಲ್ಲಿ ನಾಗಾಯಿಯ ಅಗ್ರಹಾರದ ಘಟಿಕಾ ಸ್ಥಾನಕ್ಕೆ ಮಧುಪ ಅರಸ ದಣ್ಣಾಯರನ್ನು ದತ್ತಿಬಿಟ್ಟ ಉಲ್ಲೇಖ ಒಳಗೊಂಡಿದೆ. ಸುರಪುರ ತಾಲೂಕಿನ ಮುದನೂರಿನಲ್ಲಿ ಆರನೇ ವಿಕ್ರಮಾದಿತ್ಯನ ಕಾಲದ ಐದು ಶಾಸನಗಳು ಕಂಡುಬರುತ್ತವೆ. ಈ ಎಲ್ಲಾ ಪುರಾವೆಗಳಿಂದ ತಿಳಿದುಬರುವುದೇನೆಂದರೆ ಚಾಲುಕ್ಯರ ಕಾಲದಿಂದಲೂ ಗುಲಬರ್ಗಾ ಜಿಲ್ಲೆಯು ಪ್ರಸಿದ್ಧವಾಗಿತ್ತು ಎಂಬುದಕ್ಕೆ ಸಾಕ್ಷಿಯಾಗಿದೆ.

ಸುರಪುರ ತಾಲೂಕಿನ ಮುದನೂರಿನಲ್ಲಿ ಕಂಡು ಬರುವ ಆರನೇ ವಿಕ್ರಮಾದಿತ್ಯನ ಕಾಲದ ಶಾಸನಗಳಲ್ಲಿ ಮುದನೂರು ಶ್ರೀರಾಮ ದತ್ತಿ ಅಗ್ರಹಾರವೆಂದು ಪ್ರಸಿದ್ಧವಾಗಿತ್ತು. ಸಿಂಧವಂಶದ ಜೋಗಮರಸ, ಗೋಮದೇವರಸ ಹಾಗೂ ಅಯ್ಯಣಾಮಾತ್ಯರು ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಮಹಾಮಂಡಲೇಶ್ವರರಾಗಿದ್ದರೆಂದು ಶಾಸನದಲ್ಲಿ ಉಲ್ಲೇಖಗೊಂಡಿದೆ. ಮೆಕೆನ್ಜಿ ಸಂಗ್ರಹ ದಲ್ಲಿರುವ ಶಾಸನವೊಂದರಲ್ಲಿ ಕಪ್ಪದೇವರಸನ ತಂದೆಯಾದ ಲಕ್ಷರಸನು ತ್ರಿಭುವನ ಮಲ್ಲನ ಮಹಾ ಮಂಡಳೇಶ್ವರನಾಗಿದ್ದ ವಿಚಾರ ತಿಳಿಯುತ್ತದೆ.

## ಕಲ್ಯಾಣದ ಕಲಚೂರಿಗಳು

ಕಲಚೂರಿಗಳ ಆಳ್ವಿಕೆಯ ಕಾಲ ಕರ್ನಾಟಕದ ಇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡುವಂತಹಕಾಲ. ಬಿಜ್ಜಳನ ಭಂಡಾರಿ ಬಸವಣ್ಣನವರ ನೇತೃತ್ವದಲ್ಲಿ ಆದ ವೀರಶೈವ ಜಾಗೃತಿ ಕಲ್ಯಾಣಕ್ಕೆ ದೂರ ದೂರದಿಂದ ಶಿವಶರಣರನ್ನು ಆಕರ್ಷಿಸಿ ಅಲ್ಲಿ ಅನುಭವ ಮಂಟಪದ ಸ್ಥಾಪನೆಗೂ ನಾಂದಿಯಾಯಿತು. ಈ ವಂಶದವರನ್ನು ಕಲಚೂರಿ ಎಂದು ಕರೆದರೂ ಕೂಡ ಕೇಟಚೂರಿ, ಕಲಟ್‌ಚೂರಿ, ಕಲಿಚೂರಿ ಎಂಬ ಪದಗಳೂ ಶಾಸನಗಳಲ್ಲಿ ಕಂಡುಬರುತ್ತವೆ. ಮೊದಲು ಕಲಚೂರಿಗಳು 'ಕಾಲಂಜರಾ'ದಿಂದ ಆಳುತ್ತಿದ್ದರು. ಗುಜರಾತ್, ಕೊಂಕಳ, ಮಾಳವ ಹಾಗೂ ಮಹಾರಾಷ್ಟ್ರಗಳಲ್ಲಿ ಕಲಚೂರಿಗಳ ಶಾಖಾ ಸಂಸ್ಥೆಗಳಿದ್ದವೆಂದು ತಿಳಿದು ಬರುತ್ತದೆ.

ಕಲಚೂರಿ ಎಂಬ ಪದ ಈ ವಂಶಕ್ಕೆ ಹೇಗೆ ಬಂತು ಎಂಬುದನ್ನು ಕುರಿತು ವಿಚಾರ ಮಾಡುವಾಗ ಶಿವಮೊಗ್ಗ ಜಿಲ್ಲೆಯ ಬಂದಳಿಕೆಯ ೧೧೭೪ರ ಶಾಸನದಲ್ಲಿ 'ಕಲಚೂರಿ' ಎಂಬ ಪದವು ಹೇಗೆ ಬಂತು ಎಂಬುದಕ್ಕೆ ಒಂದು ವಿವರಣೆ ಇದೆ. ಈ ಸಂತತಿಯ ಸ್ಥಾಪಕ ದ್ರೋಣಾಚಾರ್ಯರ ಮಗ ಅಶ್ವತ್ಥಾಮನ ಅನುಯಾಯಿ ಅಥವಾ ಶಿಷ್ಯ ಸೋಮನೆಂಬಾತನು ಈ ಸಂತತಿಯ ಸ್ಥಾಪಕನು ಎಂದು ತಿಳಿದು ಬರುತ್ತದೆ. ರಾಯಮುರಾರಿ ಸೋವಿದೇವನ ೧೧೭೦ರ ಶಾಸನದಲ್ಲಿ ಶಿವನಿಂದ ಈ ಸಂತತಿ ಉದ್ಭವಿಸಿತು ಎಂದು ವಿವರಿಸಲ್ಪಟ್ಟಿದೆ.

ಕರ್ನಾಟಕವನ್ನಾಳಿದ ಕಲಚೂರಿಗಳು ಕಾಲಂಜರಾ ಪುರವರಾದೇಶ್ವರರೆಂದು ತಮ್ಮನ್ನು ತಾವು ಕರೆದುಕೊಂಡಿದ್ದಾರೆ. ಈ ಬಿರುದಿನಿಂದ ಕಲಚೂರಿಗಳು ಮಧ್ಯಭಾರತದ ಮೂಲ ನಿವಾಸಿಗಳೆಂಬ ವಾದ ಪುಷ್ಟಿಕೊಡುತ್ತದೆ. ಕಲಚೂರಿಗಳು ಕಲ್ಯಾಣಿ ಚಾಲುಕ್ಯರ ಮಂಡಳಿಕರು, ಬೀಗರು ಇವರು ೧೧೬೨ರಲ್ಲಿ ರಾಜ್ಯವನ್ನು ತಮ್ಮ ಅಧಿಕಾರಕ್ಕೆ ತೆಗೆದು ಕೊಂಡು ಸ್ವತಂತ್ರ ಅರಸರಾಗಿ ರಾಜ್ಯಭಾರ ಮಾಡಿದರು. ಈ ವಂಶದ ಉಚ್ಚಿತ, ಬಿಜ್ಜಳ, ಕರ್ಣ, ಜೋಗಮ ಇವರೇ ಈ ವಂಶದ ಮಂಡಳಿಕರು.

ಗುಲಬರ್ಗಾ ಜಿಲ್ಲೆಯಲ್ಲಿ ಕಲಚೂರಿಗಳ ಕಾಲದ ಸುಮಾರು ೫೦ ಶಾಸನಗಳು ಇಲ್ಲಿವರೆಗೆ ಉಪಲಬ್ದವಾಗಿವೆ. ಅವುಗಳಲ್ಲಿ ಪ್ರಮುಖವಾದ ಶಾಸನಗಳ ಆಧಾರದಿಂದ ಗುಲಬರ್ಗಾ

ಜಿಲ್ಲೆಯ ಇತಿಹಾಸಕ್ಕೆ ಸಂಭದಿಸಿದ್ದು ಅನೇಕ ಮಹತ್ವದ ವಿಷಯಗಳನ್ನು ಅರಿತುಕೊಳ್ಳಬಹುದು. ಸೇಡಂ ತಾಲೂಕಿನ ಅಡಕಿ ಗ್ರಾಮದ ರಾಯಮುರಾರಿ ಸೋವಿದೇವನ ೧೧೬೫ರ ಶಾಸನವು ಮಹಾ ಪ್ರಧಾನ ದಂಡನಾಯಕ ಏಚರಸನು ಹಾಗೂ ಬಾಚಿದೇವರಪ್ಪನೂ ಅಡಕಿಯು ಚೆನ್ನ ಪಾರ್ಶ್ವನಾಥ ದೇವಾಲಯಕ್ಕೆ ನೀಡಿದ ಹಲವು ದತ್ತಿಗಳನ್ನು ಉಲ್ಲೇಖಿಸುತ್ತದೆ. ಕಳಚೂರಿ ಅರಸರ ಕಾಲದ ಜೈನ ಶಾಸನಗಳೇ ಈ ಜಿಲ್ಲೆಯಲ್ಲಿ ವಿರಳವಾಗಿರುವಾಗ ಈ ಶಾಸನವು ಬಹುಮುಖ್ಯವಾದುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

**ಗುಲಬರ್ಗಾ ಮತ್ತು ವಿಜಯನಗರ ಅರಸರು**

ವಿಜಯನಗರ ಸಾಮ್ರಾಜ್ಯವು ೧೩೩೬ರಲ್ಲಿ ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರಾಯರಿಂದ ತುಂಗಭದ್ರನದಿಯ ದಂಡೆಯಲ್ಲಿರುವ ಪಂಪಾಕ್ಷೇತ್ರವೆಂದು ಪ್ರಸಿದ್ಧವಾಗಿರುವ ಹಂಪಿಯಲ್ಲಿ ಸ್ಥಾಪಿಸಿದರು. ಈ ಸಾಮ್ರಾಜ್ಯ ಸ್ಥಾಪನೆಯ ಮುಖ್ಯಉದ್ದೇಶ ಮುಸ್ಲಿಂರ ದಾಳಿಯಿಂದ ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಸಂರಕ್ಷಿಸಿ ಪೋಷಿಸುವುದಾಗಿತ್ತು. ಈ ಸಾಮ್ರಾಜ್ಯ ಸ್ಥಾಪನೆಗೆ ವಿವಿಧ ಧರ್ಮಗುರುಗಳು ನೆರವಾಗಿದ್ದರು.

ಗುಲಬರ್ಗಾ ಪ್ರದೇಶಕ್ಕೆ ಸಂಬಂಧಪಟ್ಟಂತೆ ಈ ಮಹಾನ್ ಸಾಮ್ರಾಜ್ಯದ ಅರಸರೇ ಉಲ್ಲೇಖಿಸಿರುವ ಶಾಸನಗಳು ಕೃಷ್ಣದೇವರಾಯನ ಆಳ್ವಿಕೆಯ ಕಾಲದ ವರೆಗೆ ಲಭ್ಯವಿರುವುದಿಲ್ಲ. ಕೃಷ್ಣದೇವರಾಯನ ಕಾಲದವು ಎಂದು ಹೇಳುವ ತಾಮ್ರ ಶಾಸನವು ಶಹಾಪುರದ ವಿಶ್ವಕರ್ಮರ ಏಕದಂಡಿಗಿ ಮಠದಲ್ಲಿದೆ ಎಂದು ವರದಿಯಾಗಿದೆ[17]. ೧೫೨೩ರಲ್ಲಿ ಗುಲಬರ್ಗಾವನ್ನು ತನ್ನ ಸೈನ್ಯದೊಡನೆ ಕೃಷ್ಣದೇವರಾಯ ಪ್ರವೇಶಿಸಿದ ಮೇಲೆ ಮೂರನೇ ಮೊಹಮ್ಮದನ ಮೊಮ್ಮಕ್ಕಳಾದ ಮೂರನೇ ಅಲ್ಲಾ- ಉದ್-ದೀನ್ ವಲಿ ಉಲ್ಲಾ ಮತ್ತು ಕಲೀಮುಲ್ಲಾಗಳನ್ನು ಬಿಡುಗಡೆ ಮಾಡಿ ಆನಂತರ ಹಿರಿಯ ಮಗನಾದ ಮೂರನೇ ಅಲ್ಲಾವು-ದೀನನ್ನು ಗುಲಬರ್ಗಾದ ಸುಲ್ತಾನನ್ನಾಗಿ ನೇಮಿಸಿ ವಲಿಉಲ್ಲಾ ಮತ್ತು ಕಲಿಮುಲ್ಲಾರನ್ನು ತನ್ನೊಡನೆ ವಿಜಯನಗರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಸುರಕ್ಷಿತವಾಗಿಟ್ಟು ಆದರದಿಂದ ನೋಡಿಕೊಂಡನೆಂದು ತಿಳಿದು ಬರುತ್ತದೆ.

ಹೀಗೆ ಇದರಿಂದ ನಮಗೆ ತಿಳಿದು ಬರುವುದೇನೆಂದರೆ ವಿಜಯನಗರ ಸಾಮ್ರಾಜ್ಯದ ಸಾಮ್ರಾಟರು ಕೂಡ ಗುಲಬರ್ಗಾದೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆಂಬುದು ಗಮನಾಹ ಐತಿಹಾಸಿಕ ಅಂಶವಾಗಿ ಕಂಡುಬರುತ್ತದೆ. ವಿಜಯನಗರ ಅರಸರು ಗುಲಬರ್ಗಾದಲ್ಲಿ ಆಳಿಹೋದ ಅನೇಕ ಜನ ಅರಸರ ಮೇಲೆ ದಂಡೆತ್ತಿ ಬಂದು ಅವರನ್ನು ಸೋಲಿಸಿರುವುದುಂಟು. ಅಷ್ಟೇ ಅಲ್ಲದೆ ಅನೇಕ ಸಾರಿ ಸುಲ್ತಾನರಿಗೆ ಸಹಾಯಹಸ್ತನೀಡಿ ರಕ್ಷಿಸಿರುವ ಉದಾಹರಣೆಗಳುಂಟು. ಇದರಿಂದಾಗಿ ವಿಜಯನಗರ ಅರಸರು ಎಂದು ಕಠೋರವಾಗಿ ನಡೆದು ಕೊಂಡವರಲ್ಲ. ತಮ್ಮ ಆಧೀನಕ್ಕೆ ಒಳಪಟ್ಟ ಪ್ರದೇಶದ ಜನ ಸಾಮಾನ್ಯರ ಕುಂದುಕೊರತೆಗಳಿಗೆ ಸ್ಪಂದಿಸಿ ಜನಹಿತ ಕಾರ್ಯಗಳನ್ನು ಕೈಕೊಂಡು ಅಕ್ಕಪಕ್ಕದ ರಾಜರೊಂದಿಗೆ ಉತ್ತಮ ಸಂಬಂಧ ಹೊಂದಿರುವಂತೆ ಅಂದು ಗುಲಬರ್ಗಾದೊಂದಿಗೂ ಅಷ್ಟೇ ಅನ್ಯೋನ್ಯ ಸಂಬಂಧ ವಿಜಯನಗರ ಅರಸರು ಇಟ್ಟುಕೊಂಡು ಬಂದಿರುವದು ಕಂಡುಬರುತ್ತದೆ.

**ಬಹಮನಿ ಸಾಮ್ರಾಜ್ಯ ೧೩೪೭**

ಸುಮಾರು ಹನ್ನೆರಡನೇ ಶತಮಾನದ ಕೊನೆಯ ವೇಳೆಯಲ್ಲಿ ದೆಹಲಿ ಸುಲ್ತಾನರ ಸಾಮ್ರಾಜ್ಯವು ಸ್ಥಾಪಿತವಾದ ಮೇಲೆ ಸುಮಾರು ಮುಂದಿನ ನೂರು ವರ್ಷಗಳವರೆಗೂ ಈ ಸಾಮ್ರಾಜ್ಯವು ಕೇವಲ ಉತ್ತರ ಭಾರತದ ವ್ಯಾಪ್ತಿಗೆ ಒಳಪಟ್ಟಿತು. ಮುಂದೆ ಅನೇಕ ಜನ ದಂಡನಾಯಕರು ದಕ್ಷಿಣದ ದಂಡೆಯಾತ್ರೆಯನ್ನು ಕೈಗೊಂಡರು. ಅವರ ಮೂಲ ಉದ್ದೇಶ ರಾಜ್ಯ ಕೊಳ್ಳೆ ಹೊಡಿಯುವುದಾಗಿತ್ತೆ ವಿನಃ ಸಾಮ್ರಾಜ್ಯ ಸ್ಥಾಪಿಸುವುದಾಗಿರಲಿಲ್ಲ. ಅವರು ಎಂದೂ ರಾಜ್ಯವನ್ನು ಕಟ್ಟುವ ಆಕಾಂಕ್ಷೆಯಿಂದ ದಂಡೆಯಾತ್ರೆ ಮಾಡಿರಲಿಲ್ಲ.

ಮುಂದೆ ಬಂದ ಅನೇಕ ಜನ ಸುಲ್ತಾನರು ತಮ್ಮ ಉದ್ದೇಶ ದಕ್ಷಿಣದಲ್ಲಿ ರಾಜ್ಯ ಸ್ಥಾಪಿಸುವುದಕ್ಕೆ ಸೀಮಿತಗೊಳಿಸಲಿಲ್ಲ. ತದನಂತರ ಮುಹಮ್ಮದ-ಬಿನ್-ತುಘಲಕನ ವಿರುದ್ಧ ಸ್ಫೋಟಗೊಂಡ ವಿವಿಧ ಪ್ರಾಂತ್ಯಗಳ ಬಂಡಾಯದ ಪ್ರಮುಖ ಪರಿಣಾಮವೆಂದರೆ ಗುಲಬರ್ಗಾದಲ್ಲಿ ಬಹಮನಿ ಷಾಹಿಗಳ ಸ್ಥಾಪನೆಯೆಂದು ಹೇಳಬಹುದು. ಮುಹಮ್ಮದ ಬಿನ್ ತುಘಲಕನ ವಿರುದ್ಧ ಬಂಡಾಯವೆದ್ದ ಅನೇಕ ರಾಜರುಗಳಲ್ಲಿ ಮತ್ತು ಮುಖ್ಯವಾಗಿ ದೌಲತಾಬಾದ್‌ನ ಪತನಕ್ಕೆ ಕಾರಣರಾದ ದಕ್ಷಿಣಪಥದ ಅಮೀರರ ನಾಯಕನೇ ಅಫಗನ್ ರಾಜನಾದ ಇಸ್ಮಾಯಿಲ್

ಮುಖ್ ಅಥವಾ ನಾಸಿರ ಉದ್‌ದೀನ್ ಷಾ. ಇವನು ತನ್ನ ನಂತರ ಸಮರ್ಥ ಅಧಿಕಾರಿಯಾಗಿದ್ದ ಹಸನ್‌ಗಂಗು ಎಂಬುವವನಿಗೆ ನಾಯಕತ್ವವನ್ನು ಬಿಟ್ಟುಕೊಟ್ಟನು. ಈತನ ಅನುಯಾಯಿಗಳು ಈತನನ್ನೆ ರಾಜನನ್ನಾಗಿ ಮಾಡಿದರು. ನಂತರ ಇವನು ಗುಲಬರ್ಗಾವನ್ನೆ ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡನು. ಇದು ಇತಿಹಾಸದಲ್ಲಿ ಪ್ರಸಿದ್ದವಾದ ಬಹಮನಿ ಸಾಮ್ರಾಜ್ಯವೆಂದು ಪ್ರಸಿದ್ಧವಾಯಿತು.

ಬಹಮನ್ ಷಾನ ಕಾಲದಲ್ಲಿ ಗುಲಬರ್ಗಾ ನಗರವು ಅತ್ಯಂತ ಮಹತ್ವದ ನಗರವಾಗಿ ಮಹತ್ವ ಪಡೆಯಿತು. ಆದರೆ ಕೆಲವರು ಬಹಮನಿ ಸಾಮ್ರಾಜ್ಯದ ರಾಜಧಾನಿಯನ್ನು ಗುಲಬರ್ಗಾ ದಿಂದ ಬೀದರ್‌ಗೆ ವರ್ಗಾಯಿಸಲು ಅಡ್ಡಿಮಾಡಿದರು. ಮುಂದೆ ಬಹಮನಿ ರಾಜ್ಯ ಒಡೆದು ತನ್ನ ರಾಜಧಾನಿಯನ್ನು ಬೀದರಿಗೆ ವರ್ಗವಾಯಿತು. ಗುಲಬರ್ಗಾದಿಂದ ರಾಜಧಾನಿ ಒಡೆದು ಬೀದರಿಗೆ ವರ್ಗವಾದನಂತರ ಗುಲಬರ್ಗಾ ನಗರವು ತನ್ನ ಘನತೆ ಕಳೆದುಕೊಂಡಿತು. ಅಲ್ಲದೆ ಕೇವಲ ಪ್ರಾಂತೀಯ ಕೇಂದ್ರ ಸ್ಥಾನವಾಗಿ ಮುಂದುವರೆಯುವಂತಾಯಿತು. ವಿಜಾಪುರದ ಯೂಸುಫ್ ಆದೀಲ್‌ಷಾ ಗುಲಬರ್ಗಾವನ್ನು ತನ್ನ ಹತೋಟಿಗೆ ತೆಗೆದು ಕೊಂಡ ಮೇಲೆ ಈ ನಗರವು ಆತನ ಆಧೀನದಲ್ಲೇ ಮುಂದುವರೆಯಿತು.

ಮಹ್ಮದ್ ಷಾನ ಆಳ್ವಿಕೆಯಲ್ಲಿ ಮುಖ್ಯವಾಗಿ ವಿಜಯನಗರ ಮತ್ತು ತೆಲಂಗಾಣದ ವಿರುದ್ಧ ಯುದ್ಧಗಳು ಜರುಗಿದವು. ಇದಲ್ಲದೇ ಸುಲ್ತಾನನ ದೌಲತಾಬಾದನಲ್ಲಿ ತಲೆದೋರಿದ ದಂಗೆಯನ್ನು ಆಡಗಿಸಿದನು. ಕೊನೆಗೆ ತೆಲಂಗಾಣದ ರಾಜನು ಸುಲ್ತಾನನೊಂದಿಗೆ ಒಪ್ಪಂದ ಮಾಡಿಕೊಂಡನು. ತನ್ನ ಚಿನ್ನದ ಸಿಂಹಾಸನವನ್ನು ಸುಲ್ತಾನನಿಗೆ ಅರ್ಪಿಸಿದನು. ಈ ಸಿಂಹಾಸನವು ಗುಲಬರ್ಗಾದ ಅರಮನೆಯಲ್ಲಿ ಸ್ಥಾಪಿಸಲಾಯಿತೆಂದು ತಿಳಿದುಬರುತ್ತದೆ. ಮಹಮ್ಮದನ ನಂತರ ಗುಲಬರ್ಗಾವನ್ನು ಆಳಿದ ಸುಲ್ತಾನರುಗಳು ಈ ಸಿಂಹಾಸನವನ್ನು ಮತ್ತಷ್ಟು ಮುತ್ತು ರತ್ನಗಳಿಂದ ಅಲಂಕರಿಸಿದರು.

ಮೊದಲನೆ ಮಹಮ್ಮದನು ನಿಧನವಾದ ಮೇಲೆ ಅವನ ಮಗ ಅಲ್ಲಾವುದ್ದೀನ್ ಮುಜಾಹಿದನು ಪಟ್ಟಕ್ಕೆ ಬಂದನು. ಈತನು ಸಹ ತನ್ನ ತಂದೆಯ ತತ್ವಗಳನ್ನು ಅವಲಂಬಿಸಿ ವಿಜಯನಗರದೊಡನೆ ಸೆಣಸಾಟವನ್ನು ಮುಂದುವೆರೆಸಿದನು. ಆದರೆ ಬುಕ್ಕನು ತನ್ನ ರಾಜ

ತಂತ್ರದ ಮೂಲಕ ಯುದ್ಧಕ್ಕೆ ಬದಲಾಗಿ ಈತನ ಮನವನ್ನು ಗೆಲ್ಲುವ ಯೋಜನೆಯನ್ನು ಕಾರ್ಯರೂಪಗೊಳಿಸಿದನು. ಮುಜಾಹಿದ್‌ನ ಸೈನ್ಯಾಧಿಕಾರಿಯಾಗಿದ್ದ ದಾವುದ್‌ಖಾನನು ಸಂಚಿನಿಂದ ಸುಲ್ತಾನನಿಗೆ ಮೋಸ ಮಾಡಿ ಕೊಂದುಹಾಕಿದನು. ಮುಂದೆ ತಾನೇ ಗುಲಬರ್ಗಾದ ಸುಲ್ತಾನನೆಂದು ಸ್ವಯಂ ಘೋಷಿಸಿಕೊಂಡನು. ಇದಾದ ಕೆಲವೇ ದಿನಗಳಲ್ಲಿ ಮುಜಾಹಿದನ ತಂಗಿ ದೌದಖಾನನನ್ನು ಮೋಸದಿಂದಲೇ ಕೊಂದು ಎರಡನೇ ಮಹಮ್ಮದ ಷಾನನ್ನು ಅಧಿಕಾರಕ್ಕೆ ತಂದಳು.

ಬಹಮನಿ ಸಿಂಹಾಸನವನ್ನೇರಿದ ಎರಡನೇ ಮೊಹ್ಮದ್ ಷಾ ಒಬ್ಬ ಪರಿಜ್ಞಾನಾಯುತ ಆಡಳಿತಗಾರ ಹಾಗೂ ಸ್ವತಃ ಪಂಡಿತನು ಆಗಿದ್ದನು. ತನ್ನ ಆಸ್ಥಾನದ ಸದರ್-ಇ-ಜಬಾನ್ ಅಂದರೆ (ಮುಖ್ಯ ನ್ಯಾಯಾಧೀಶ)ನಾಗಿ ಫೈಜುಲ್ಲ ಅಂಜು ಎಂಬ ಪ್ರಸಿದ್ಧ ಪಂಡಿತನನ್ನು ನೇಮಕ ಮಾಡಿದನು. ಇವನ ಔದಾರ್ಯದ ಫಲವಾಗಿ ಏಷ್ಯದ ವಿವಿಧ ಭಾಗಗಳಿಂದ ವಿದ್ವಾಂಸರು ಇವನ ಅಸ್ಥಾನಕ್ಕೆ ಬಂದಿದ್ದರು.

ಮುಂದೆ ಹಸನ ಬಹಮನ್ ಷಾನ ಮೊಮ್ಮಗನಾದ ತಾಜೋದ್ದೀನ್ ಫಿರೋಜನು ತನ್ನ ಆಡಳಿತವನ್ನು ಪವಿತ್ರ ಕುರಾನ್ ಗ್ರಂಥದ ತತ್ವಗಳ ಆಧಾರದ ಮೇಲೆ ನಿಯಂತ್ರಿಸಿದ ಕಾರಣ ಸಮಾಜದಲ್ಲಿ ಎಲ್ಲರಿಗೂ ಅದರಲ್ಲೂ ಸ್ತ್ರೀಯರಿಗೆ ವಿಶೇಷ ಸ್ಥಾನಮಾನಗಳು ದೊರೆಯು ವಂತಾಯಿತೆಂಬ ಅಭಿಪ್ರಾಯವಿದೆ. ಫಿರೋಜನು ದಕ್ಷ ಅಡಳಿತಗಾರ ನಾಗಿದ್ದುದರಿಂದ ಈತನು ಅನೇಕ ಸಾಂಸ್ಕೃತಿಕ ಚಟುವಟಿಕೆಗಳಿಗೆ ವಿಶೇಷ ಉತ್ತೇಜನವನ್ನು ನೀಡಿದನು. ಈತನ ಆಸ್ಥಾನದಲ್ಲಿ ಒಳ್ಳೆಯ ಸಂಗೀತಗಾರರು, ನೃತ್ಯಗಾರರು,ತತ್ವಜ್ಞಾನಿಗಳು ಹಾಗೂ ಇತಿಹಾಸಕಾರರು ಇದ್ದದರ ಬಗೆಗೆ ಉಲ್ಲೇಖವಿದೆ. ಫಿರೋಜನೆ ಸ್ವತಃ ದಕ್ಷ ಆಡಳಿತಗಾರನಾಗಿದ್ದಕಾರಣ ಆತನ ಇತಿಹಾಸ ಕಾರರು "ಸುಲ್ತಾನ -ಇ-ಫಿಸಿಯನ್"[18] ಎಂದು ಕರೆದಿದ್ದಾರೆ.

### ಗುಲಬರ್ಗಾ ಜಿಲ್ಲೆ ಮತ್ತು ಮೊಗಲರ ದಾಳಿಗಳು

ಮೊಗಲ ಸಾಮ್ರಾಜ್ಯದ ಪ್ರಸಿದ್ಧ ಅರಸರುಗಳಾದ ಜಹಾಂಗೀರ ಮತ್ತು ಷಾಹಾಜಾನರು ದಖನ್ನಿನ ಮೇಲೆ ತೀವ್ರವಾದ ಗಮನವನ್ನರಿಸಿದರು. ಅವರ ಪ್ರಮುಖ ಉದ್ದೇಶವೆಂದರೆ ದಖ್ಖನಿನ್ ಪ್ರಬಲ ರಾಜಕೀಯ ಶಕ್ತಿಯನ್ನು ದಮನಗೊಳಿಸುವುದಾಗಿತ್ತು. ಇದರ

ಪರಿಣಾಮವಾಗಿ ಮೊಗಲ ಸೇನೆಯು ದಖ್ಖನಿನ ಮೇಲೆ ಎರಗಿ ಬೆರಾರ್ ಮತ್ತು ಅಹಮ್ಮದನಗರದವರೆಗೂ ತಮ್ಮ ದಂಡಯಾತ್ರೆಯನ್ನು ಮುಂದುವರೆಸಿದವು. ಆ ಸಮಯದಲ್ಲಿ ಗೋಲ್ಕಂಡ ಮತ್ತು ವಿಜಾಪುರಗಳು ಅವರ ರಾಜಕೀಯ ಹತೋಟಿಯಿಂದ ಹೊರಗುಳಿದವು. ಆದರೆ ಔರಂಗಜೇಬನು ದಖ್ಖನಿನ ರಾಜ್ಯಪಾಲನಾಗಿ ನೇಮಕಗೊಂಡ ಸ್ವಲ್ಪ ಕಾಲದಲ್ಲೇ ಆತನು ಗುಲಬರ್ಗಾದ ಮೇಲೆ ದಾಳಿಮಾಡಿ ಅಲ್ಲಿಂದ ಮುಂದುವರೆದು ವಿಜಾಪುರದವರೆಗೂ ತನ್ನದಂಡೆಯಾತ್ರೆಯನ್ನು ಕೈಗೊಂಡನು.



ಮಹಮ್ಮದ್ ಆದಿಲ್‌ಷಾ ನವೆಂಬರ ೧೬೫೬ರಲ್ಲಿ ನಿಧನರಾಗಿದ್ದ ಕಾರಣ ಹಾಗೂ ಉತ್ತರಾಧಿಕಾರಿಯಾಗಿದ್ದ ಎರಡನೆ ಆದಿಲ್‌ಷಾ ಇನ್ನು ೧೮ ವರ್ಷಗಳ ಯುವಕನಾಗಿದ್ದರಿಂದ ಪರಸ್ಥಿತಿ ಔರಂಗಜೇಬನಿಗೆ ಅನುಕೂಲವಾಗಿತ್ತು. ಔರಂಗಜೇಬನು ಮಹಮ್ಮದ್ ಆದಿಲ್‌ಷಾ ರಾಜನ ನೇರವಾದ ಮಗನಲ್ಲವೆಂಬ ಕ್ಷುಲ್ಲಕ ಕಾರಣವನ್ನು ನೀಡಿ ವಿಜಾಪುರದ ಮೇಲೆ ದಾಳಿ ಮಾಡಲು ಮೊಗಲ ಚಕ್ರವರ್ತಿ ಷಹಾಜಹಾನನ ಅನುಮತಿಯನ್ನು ಪಡೆದುಕೊಂಡಿದ್ದನು. ಮಾರ್ಚ ೧೬೫೭ರಲ್ಲಿ ಔರಂಗಜೇಬನು ಬೀದರನ್ನು ಆಕ್ರಮಿಸಿಕೊಳ್ಳಲು. ಮಹಾಬತ್ ಖಾನನ ನೇತೃತ್ವದಲ್ಲಿ ಪ್ರಬಲ ಸೈನ್ಯವನ್ನು ತೆಗೆದುಕೊಂಡು ಈತನು ಬಿಜಾಪುರದ ಗಡಿಯನ್ನು ಪ್ರವೇಶಿಸಿ ಕಲ್ಯಾಣ ಮತ್ತು ಗುಲಬರ್ಗಾ ನಗರವನ್ನು ಸುಲಭವಾಗಿ ಆಕ್ರಮಿಸಿಕೊಂಡನು. ೧೬೭೨ರಲ್ಲಿ ಎರಡನೇಯ ಆದಿಲ್‌ಷಾ ನಿಧನನಾದ ಮೇಲೆ ಅಧಿಕಾರಕ್ಕೆ ಬಂದ ಸಿಕಂದರ್ ತನ್ನ ಅಪ್ರಾಪ್ತ ವಯಸ್ಸಿನಲ್ಲಿದ್ದುದ್ದರಿಂದ ಆಡಳಿತವನ್ನು ಸಮರ್ಥವಾಗಿ ನಿರ್ವಹಿಸಲು ಸಾಧ್ಯವಾಗಲಿಲ್ಲ. ಇದರ ಪರಿಣಾಮವಾಗಿ ವಿಜಾಪುರದ ಪತನವು ಪ್ರಾರಂಭವಾಯಿತು.

ಸಿಕಂದರ್‌ನ ದುರ್ಬಲತೆಯ ಪರಿಣಾಮದಿಂದಾಗಿ ಅನುಕೂಲತೆಯಿಂದ ಸಾಮ್ರಾಜ್ಯದಾದ್ಯಂತ ಅರಾಜಕತ್ವ, ಗಲಭೆ ಹಾಗೂ ಅಧಿಕಾರ ದುರುಪಯೋಗಗಳು ಪ್ರಾರಂಭವಾದವು. ಈ ಸಮಯದ ಉಪಯೋಗವನ್ನು ಪಡೆದು ಮೊಗಲರ ದಖನ್ನಿನ ರಾಜ್ಯಪಾಲನಾದ ಬಹದ್ದೂರ್ ಖಾನನು ತನ್ನ ಪ್ರಬಲ ಸೇನೆಯ ಸಹಾಯದಿಂದ ವಿಜಾಪುರದ ಹಲವಾರು ಪ್ರಾಂತಗಳನ್ನು ಹಾಗೂ ಗುಲಬರ್ಗಾವನ್ನು ೧೬೭೭ರಲ್ಲಿ ತನ್ನ ವಶಕ್ಕೆ ತೆಗೆದುಕೊಂಡನು. ಗುಲಬರ್ಗಾ ಜಿಲ್ಲೆಯ ದಕ್ಷಿಣದ ಭಾಗಗಳಾದ ಸುರಪುರ, ಶಹಾಪುರ, ಸಗರನಾಡು, ಮುಂತಾದ ಪ್ರದೇಶಗಳು

ಮೊದಲು ವಿಜಯನಗರದ ಮಾಂಡಲಿಕರಾಗಿದ್ದು ನಂತರ ಸ್ವತಂತ್ರವಾಗಿದ್ದ ಸುರಪುರದ ಬೇಡರ ನಾಯಕರ ಆಳ್ವಿಕೆಯಲ್ಲಿದ್ದವು. ಮೊಗಲ ಅರಸರು ಸುರಪುರ ಅರಸರೊಂದಿಗೆ ಸಂಧಾನ ಮಾಡಿಕೊಂಡ ನಂತರ ಗುಲಬರ್ಗಾ ಜಿಲ್ಲೆಯ ಎಲ್ಲಾ ಪ್ರಾಂತ್ಯಗಳು ಮೊಗಲರ ಹತೋಟಿಗೆ ಒಳಪಟ್ಟವು ಇದರ ಪರಿಣಾಮವಾಗಿ ಸುರಪುರದ ನಾಯಕರು, ಮೊಗಲರ ಮಂಡಳಿಕರಾದರು. ಗುಲಬರ್ಗಾ ಜಿಲ್ಲೆಯ ದಕ್ಷಿಣದ ಪ್ರಾಂತ್ಯಗಳಲ್ಲಿ ಆಡಳಿತದ ಹತೋಟಿಯನ್ನು ನಿರಂತರವಾಗಿ ಪಡೆಯುವಂತಾಯಿತು.

## ಗುಲಬರ್ಗಾ ಜಿಲ್ಲೆಯಲ್ಲಿ ಸ್ವಾತಂತ್ರ್ಯ ಸಂಗ್ರಾಮ

ಆದಿಲ್ ಷಾಹನ ಸಾಮ್ರಾಜ್ಯ ಪತನವಾದ ಮೇಲೆ ದಖ್ಖನ ಪ್ರದೇಶದಲ್ಲಿ ಸಣ್ಣ ಪುಟ್ಟ ಸ್ವತಂತ್ರ ರಾಜ್ಯಗಳು ಬಲ ಗೊಂಡವು. ಅಷ್ಟೇ ಅಲ್ಲ ಹೈದ್ರಾಬಾದ ಸಂಸ್ಥಾನದ ನಿಜಾಮನು ೧೮೧೮ರ ತರುವಾಯ ಈಸ್ಟ ಇಂಡಿಯಾ ಕಂಪನಿಯು ಆಡಳಿತದ ಹಿತವನ್ನು ಬೆಂಬಲಿಸುವ ಪರಾಧೀನತ್ವದೆಡೆಗೆ ಸಾಗಿದನು. ಇದೇ ಸಮಯದಲ್ಲಿ ಸುರಪುರದ ನಾಯಕರು ಕಂಪನಿ ಸರಕಾರದ ಹತೋಟಿಗೆ ಒಳಪಡುವುದಕ್ಕೆ ತಮ್ಮ ವಿರೋಧವನ್ನು ಪ್ರಕಟಿಸಿದರು. ನಾಲ್ವಡಿ ವೆಂಕಟಪ್ಪನಾಯಕರು ೧೮೪೧ರಲ್ಲಿ ಸುರಪುರ ಸಂಸ್ಥಾನದ ನಾಯಕನಾದ ಮೇಲೆ ಆತನು ಅಪ್ರಾಪ್ತ ವಯಸ್ಕನಾದ ಕಾರಣ ಬ್ರಿಟಿಷರು, ಹೈದ್ರಾಬಾದ ನಿಜಾಮನ ಬೆಂಬಲದಿಂದ ಈ ಸಂಸ್ಥಾನಕ್ಕೆ ಮೆಡೋಸ್ ಟೆಲರನನ್ನು ರಾಜಕೀಯ ಪ್ರತಿನಿಧಿಯಾಗಿ ನೇಮಿಸಿದರು. ಯುವರಾಜನಿಗೆ ಶಿಕ್ಷಣ ಹಾಗೂ ರಾಜಾಡಳಿತದಲ್ಲಿ ಸೂಕ್ತ ತರಬೇತಿ ನೀಡುವದು, ಈ ರಾಜಕೀಯ ಪ್ರತಿನಿಧಿಯ ಪ್ರಮುಖ ಜವಾಬ್ದಾರಿಯಾಗಿತ್ತು.

ಮುಂದೆ ವೆಂಕಟಪ್ಪನಾಯಕನು ಪ್ರೌಢ ವಯಸ್ಸಿಗೆ ಬಂದ ಮೇಲೆ ಸಂಸ್ಥಾನದ ಆಡಳಿತವನ್ನು ತನ್ನ ಕೈಗೆ ತೆಗೆದುಕೊಂಡದ್ದೆ ಅಲ್ಲದೇ ರಾಜಕೀಯ ಪರಿಜ್ಞಾನದಿಂದ ಆಡಳಿತ ಪದ್ಧತಿಯನ್ನು ಆಂತರಿಕವಾಗಿ ಭದ್ರಪಡಿಸಿದನು. ಅದೇ ಸಮಯದಲ್ಲಿ ಹೈದ್ರಾಬಾದಿನ ನಿಜಾಮನು ಸುರಪುರ ಸಂಸ್ಥಾನದ ನಾಯಕನು ಗುಪ್ತವಾಗಿ ಸೈನಿಕ ಶಕ್ತಿಯನ್ನು ಹೆಚ್ಚಿಸಿಕೊಳ್ಳುತ್ತಾನೆ ಎಂದು ಬ್ರಿಟಿಷ ಸರಕಾರಕ್ಕೆ ವೆಂಕಟಪ್ಪನನ್ನು ದಂಡಿಸಲು ಕ್ಯಾಪ್ಟನ್ ಬ್ಯಾರಿಯ ನೇತೃತ್ವದಲ್ಲಿ ಸೈನಿಕ ತುಕಡಿಯನ್ನು ಸುರಪುರಕ್ಕೆ ಕಳಿಸಿದನು. ಈ ದಾಳಿಯನ್ನು ಪರಾಕ್ರಮದಿಂದ ಎದುರಿಸಿದ್ದೆ ಅಲ್ಲದೇ ಬ್ರಿಟಿಷರ

ಈ ಸೇನೆಯ ಮುಖಂಡ ಕ್ಯಾಪ್ಟನ್ ಬ್ಯಾರಿಯನ್ನು ಕೊಲ್ಲಲಾಯಿತು.[19] ಇದಕ್ಕೆ ಉತ್ತರವಾಗಿ ಬಲಿಷ್ಟವಾದ ಸೈನ್ಯವನ್ನು ಬ್ರಿಟಿಷರು ಸುರುಪುರಕ್ಕೆ ಕಳುಹಿಸಿದರು. ಆದರೆ ಪ್ರಬಲ ವಿರೋಧ ವನ್ನೊಡ್ಡಿದ ಸುರಪುರ ಸೈನ್ಯ ದೇಶದ್ರೋಹಿಯೊಬ್ಬನ ಪಿತೂರಿಯಿಂದ ಸೋಲನ್ನು ಅನುಭವಿಸಿತು. ಇದನ್ನು ಮನಗಂಡ ವೆಂಕಟಪ್ಪನಾಯಕ ಸುರಪುರದಿಂದ ಹೈದ್ರಾಬಾದಿಗೆ ಹೊರಟು ಹೋಗಿದ್ದನು ಮತ್ತು ವೆಂಕಟಪ್ಪನಾಯಕ ಅರಬ್ಬಿ ಮತ್ತು ರೋಹಿಲ್ಲಾಗಳ ನ್ನೊಳಗೊಂಡ ಸೈನಿಕ ಶಕ್ತಿಗಳನ್ನು ಸಂಘಟಿಸಿ ಸುರಪುರವನ್ನು ಹಿಂದಕ್ಕೆ ಪಡೆಯಬಹುದೆಂಬ ಆಕಾಂಕ್ಷೆ ಆತನಿಗಿತ್ತು. ಆದರೆ ಈ ಆಸೆ ಕೈಗೂಡಲಿಲ್ಲ. ವೆಂಕಟಪ್ಪನ ಜೊತೆಗೆ ಹೋಗಿದ್ದ ಜೊತೆಗಾರರು ತಿರುಗಿ ಬರುವಾಗ ಚದುರಿ ಹೋಗಿದ್ದರು. ಹೀಗಾಗಿ ವೆಂಕಟಪ್ಪನಾಯಕನನ್ನು ಸುಲಭವಾಗಿ ಸೆರೆಹಿಡಿದು ಸಾಲರಜಂಗನ ಮೂಲಕ ಬ್ರಿಟಿಷರಿಗೆ ಒಪ್ಪಿಸಲಾಯಿತು. ವೆಂಕಟಪ್ಪ ನಾಯಕನ ವಿರುದ್ಧ ಅನೇಕ ಆರೋಪಗಳನ್ನು ಹೊರಿಸಿ ವಿಚಾರಣೆಗೆ ಗುರಿ ಮಾಡಿ ನಾಲ್ಕು ವರ್ಷಗಳ ವರೆಗೆ ಕಠಿಣ ಶಿಕ್ಷೆ ವಿಧಿಸಿದರು.

ಮುಂದೆ ಗುಲಬರ್ಗಾ ಜಿಲ್ಲೆಯು ಹೈದ್ರಾಬಾದ ನಿಜಾಮರ ಮೂಲಕ ಬ್ರಿಟಿಷರ ಆಳ್ವಿಕೆಗೆ ಪರೋಕ್ಷವಾಗಿ ಒಳಪಟ್ಟಿತು. ದಖನ್ ಪ್ರದೇಶದ ಹೃದಯದಂತಿರುವ ಹೈದ್ರಾಬಾದ ರಾಜ್ಯವು ಭಾರತದ ಅಂದಿನ ದೇಶಿಯ ರಾಜ್ಯಗಳ ಪೈಕಿ ಅತಿದೊಡ್ಡ ರಾಜ್ಯವಾಗಿತ್ತು. ನಿಜಾಮರ ನಿರಂಕುಶ ಆಡಳಿತಕ್ಕೆ ಒಲಪಟ್ಟಿದ್ದ ಗುಲಬರ್ಗಾ ಜಿಲ್ಲೆಯಲ್ಲಿ ೧೯೩೮ರ ವರೆಗೂ ಸ್ವಾತಂತ್ರ್ಯ ಹೋರಾಟವು ಹೆಚ್ಚು ಪ್ರಭಾವವಿಲ್ಲದೆ ಮಂದಗತಿಯಿಂದ ಸಾಗಿತು. ಪರದೇಶ ವಸ್ತುಗಳ ಬದಲು ಸ್ವದೇಶಿ ವಸ್ತುಗಳನ್ನೇ ಬಳಸಬೇಕು, ಖಾದಿ ಬಟ್ಟೆಗಳನ್ನು ಉತ್ಪಾದಿಸುವದನ್ನು ಪ್ರಚಾರ ಪಡಿಸಬೇಕೆಂಬ ರಾಷ್ಟ್ರೀಯ ರಚನಾತ್ಮಕ ಕಾರ್ಯಕ್ರಮದ ಬಗ್ಗೆ ಅರಿವು ಮೂಡಿದ್ದಿತ್ತು. ಈ ದಿಸೆಯಲ್ಲಿ ಅಲ್ಪ ಸ್ವಲ್ಪ ಕಾರ್ಯ ನಡೆಯುತ್ತಿತ್ತು.

ಹೈದ್ರಾಬಾದ ರಾಜ್ಯದ ಸ್ವಾತಂತ್ರ್ಯ ಹೋರಾಟದ ಇತಿಹಾಸದಲ್ಲಿ ೧೯೩೮ನೇ ಇಸವಿಯು ಒಂದು ಮೈಲುಗಲ್ಲೆಂದು ಪರಿಗಣಿಸಲ್ಪಟ್ಟಿದೆ. ಈ ಕಾಲದಲ್ಲಿ ರಾಜಕೀಯ ವಿಚಾರಗಳು ಕ್ರೋಢೀಕೃತಗೊಂಡು ಖಚಿತ ರೂಪ ತಳೆದವು. ಹೈದ್ರಾಬಾದನಲ್ಲಿ ಆರ್ಯಸಮಾಜದ ಚಟುವಟಿಕೆ ಗಳು ೧೯ನೇ ಶತಮಾನದ ಕೊನೆಯ ದಶಕದಲ್ಲಿ ಆರಂಭವಾಗಿದ್ದರೂ ೧೯೩೫ ರಿಂದೀಚೆಗೆ ಸ್ವಾಮಿಶ್ರದ್ಧಾನಂದರು ನೀಡಿದ್ದ ಉತ್ತೇಜನದಿಂದ ದ್ವಿಗುಣಗೊಂಡವು.

೧೯೩೫ ರಲ್ಲಿ ಸ್ವಾತಂತ್ರ್ಯ ಹೋರಾಟದ ಪ್ರಸಿದ್ಧ ನಾಯಕರಾಗಿದ್ದ ಹರ್ಡೇಕರ ಮಂಜಪ್ಪನವರು ಹೈದ್ರಾಬಾದ ಕರ್ನಾಟಕದ ಸಂಸ್ಥಾನದಲ್ಲೂ ಸಂಚರಿಸಿ ಪ್ರಚೋದಿತ ತಮ್ಮ ಭಾಷಣಗಳ ಮೂಲಕ ಜನರಲ್ಲಿ ಜಾಗೃತಿಯನ್ನು ಮೂಡಿಸಿದರು. ವಿದೇಶಿ ಬಟ್ಟೆಗಳನ್ನು ತ್ಯಜಿಸುವದು, ಖಾದಿ ಧರಿಸುವುದು, ಪಾನನಿರೋಧ ಹಾಗೂ ಅಸ್ಪೃಶ್ಯತೆಯ ನಿವಾರಣೆ ಮುಂತಾದ ರಾಷ್ಟ್ರೀಯ ಕಾರ್ಯಕ್ರಮಗಳನ್ನು ಮೊದಲಬಾರಿಗೆ ಹೈದ್ರಾಬಾದ ಕರ್ನಾಟಕ ಪ್ರದೇಶದಲ್ಲಿ ಜನಪ್ರಿಯ ಗೊಳಿಸಲಾಯಿತು. ೧೯೩೭ರಲ್ಲಿ ಗುಲಬರ್ಗಾದಲ್ಲಿ ಪ್ರಥಮ ಬಾರಿಗೆ ಖಾದಿ ಭಂಡಾರವನ್ನು ಮಂಠಾಳ ಅವರು ಪ್ರಾರಂಭಿಸಿದರು. ೧೯೩೮ರಲ್ಲಿ ಹೈದ್ರಾಬಾದ ಸ್ಟೇಟ್ ಕಾಂಗ್ರೇಸ್ ಅಧ್ಯಕ್ಷರಾಗಿದ್ದ ಗೋವಿಂದ ರಾವ ನಾನಲ್ ಮತ್ತು ರಾಮಾನಂದ ತೀರ್ಥರು ಜನಗಳಲ್ಲಿ ರಾಷ್ಟ್ರೀಯ ಜಾಗೃತಿ ಮೂಡಿಸಿದರು. ಇವರುಗಳು ನಿರ್ವಹಿಸಿದ ರಾಷ್ಟ್ರೀಯ ಹೋರಾಟದಲ್ಲಿ ಗುಲಬರ್ಗಾ ಜಿಲ್ಲೆಯ ನಾಯಕರ ಪಾತ್ರ ಅಗಾದವಾದದ್ದು.

ನಿಜಾಮರ ನಿರಂಕುಶ ಆಳ್ವಿಕೆಯ ಧೋರಣೆಗಳ ಪರಿಣಾಮವಾಗಿ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೈದ್ರಾಬಾದ ಸರ್ಕಾರದ ಪ್ರತಿನಿಧಿ ಸಾಲರ್‌ಜಂಗ್ ಇಂಗ್ಲಿಷರಿಗೆ ಸಹಾಯ ಮಾಡಿದ ಕಾರಣ ಈ ಭಾಗದಲ್ಲಿ ಈ ಸಂಗ್ರಾಮ ಯಾವುದೇ ಪ್ರಭಾವ ಮಾಡಲಿಲ್ಲವೆಂಬುದು ಇತ್ತೀಚಿನವರೆಗಿನ ಅಭಿಪ್ರಾಯವಾಗಿತ್ತು. ಆದರೆ ಕೇವಲ ಹೈದ್ರಾಬಾದನ ಅರಸರು ಮಾತ್ರ ಬ್ರಿಟಿಷರಿಗೆ ತಮ್ಮ ಬೆಂಬಲ ನೀಡಿದ್ದರು. ಗುಲಬರ್ಗಾ ಜಿಲ್ಲೆಯಲ್ಲಿಯು ಸ್ವಾತಂತ್ರ್ಯ ಹೋರಾಟದ ಬಗೆಗೆ ಜನಾಭಿಪ್ರಾಯ ಜಾಗೃತಿ ಮೂಡಿತು. ಸಿಪಾಯಿ ದಂಗೆಯ ಸಮಯದಲ್ಲಿ ಇಂಗ್ಲೀಷರ ಭದ್ರತೆಗಾಗಿ ನಿಜಾಮನು ಒದಗಿಸಿದ್ದ ಪ್ರಬಲ ಸೇನೆಯ ಸಂರಕ್ಷಣೆಯಿಂದ ಈ ರಾಜ್ಯದ ಆರ್ಥಿಕ ಪರಿಸ್ಥಿತಿಯ ಮೇಲೆ ತೀವ್ರ ಪರಿಣಾಮ ಉಂಟಾಯಿತು.

ಗುಲಬರ್ಗಾ ಜಿಲ್ಲೆಯೂ ಸ್ವಾತಂತ್ರ್ಯ ಹೋರಾಟದ ಬಗೆಗೆ ಜನಾಭಿಪ್ರಾಯದ ಜಾಗೃತಿ ಮೂಡಿ ಈ ಜಿಲ್ಲೆಯ ಸಾಮಾನ್ಯ ಜನತೆಯ ಬ್ರಿಟಿಷರ ರೆಸಿಡೆಂಟನು ಹೋರಾಟದ ಸಣ್ಣ-ಪುಟ್ಟ ಘಟನೆಗಳನ್ನು ಅಡಗಿಸಿದ ಕಾರಣ ಜನತೆ ತಮ್ಮಲ್ಲಿದ್ದ ರಾಷ್ಟ್ರೀಯತೆಯ ಅರಿವಿನಿಂದಾಗಿ ತಮ್ಮ ವಿರೋಧವನ್ನು ಆಗಿಂದಾಗ್ಗೆ ವ್ಯಕ್ತ ಪಡಿಸುತ್ತಿದ್ದರು. ಮಹಾತ್ಮ ಗಾಂಧೀಜಿಯವರು ೧೯೨೪ರಲ್ಲಿ ಅಧ್ಯಕ್ಷರಾಗಿದ್ದ ಬೆಳಗಾವಿ ಕಾಂಗ್ರೆಸ್ ಅಧಿವೇಶನದ

ಪರಿಣಾಮವಾಗಿ ಹೈದ್ರಾಬಾದ ಕರ್ನಾಟಕದಲ್ಲಿ ಭಾಗವಹಿಸಲು ಪ್ರಚೋದನೆ ಸಿಕ್ಕಿತು. ಇದಕ್ಕೆ ಪೂರ್ವದಲ್ಲಿ ೧೯೨೧-೨೨ ರಲ್ಲಿ ಗುಲಬರ್ಗಾದಲ್ಲಿ ಕರಾಳ ಸ್ವರೂಪದ ಹಿಂದೂ-ಮುಸಲ್ಮಾನರ ದಂಗೆ ನಡೆಯಿತು. ಜನಾರ್ಧನರಾವ ದೇಸಾಯಿಯವರು ತಿಳಿಸಿರುವಂತೆ ನಗರದಲ್ಲಿ ಗುಡಿಗಳನ್ನು ಹಾಗೂ ಶರಣಬಸವೇಶ್ವರ ಗುಡಿಯನ್ನು ಕೆಡವಲು ಪ್ರಯತ್ನಗಳು ನಡೆದವು ಕೊನೆಗೆ ಸಿ.ಐ.ಡಿ. ಮತ್ತು ಡಿ.ಎಸ್.ಪಿ. ಅವರುಗಳ ಕೊಲೆಯಾಯಿತು. [20]

೧೯೩೫ ರಿಂದೀಚೆಗೆ ಸ್ವಾಮಿ ಶ್ರದ್ಧಾನಂದರು ನೀಡಿದ ಉತ್ತೇಜನದಿಂದ ಸಂಗ್ರಾಮ ಚುರುಕುಗೊಂಡಿತು ಆ ಸಮಯಕ್ಕೆ ಆರ್ಯ ಸಮಾಜವು ವಿವಿಧ ಜಾತಿಗಳಲ್ಲಿ ಐಕ್ಯತೆಯನ್ನು ಮೂಡಿಸುವ ಒಂದು ಪ್ರಬಲ ರಾಷ್ಟ್ರೀಯ ಸಂಸ್ಥೆಯಾಗಿ ಬೆಳೆದು ಬಂದಿತು ೧೯೩೭ ರಲ್ಲಿ ಕಕ್ಕೇರಿ ಹನುಮಂತ ರಾಯರ ಅಧ್ಯಕ್ಷತೆಯಲ್ಲಿ ಹೈದ್ರಾಬಾದ ಸಾರ್ವಜನಿಕ ಸಮಿತಿಯ ಅಧಿವೇಶನದಲ್ಲಿ ಜವಾಬ್ದಾರಿ ಸರಕಾರದ ಬಗೆಗೆ ನಿರ್ಣಯ ಕೈಗೊಂಡಿತು. ೧೯೩೮ ರಲ್ಲಿ ಹೈದ್ರಾಬಾದಿನ ರಾಜ್ಯ ಕಾಂಗ್ರೆಸಿನ ಮೇಲೆ ನಿರ್ಬಂಧನೆ ಹೇರಿದ್ದ ಕಾರಣ ಆರ್ಯ ಸಮಾಜದ ಚಳುವಳಿಗೆ ಪುಷ್ಠಿ ಸಿಕ್ಕಿತೆಂಬುದು ಇತಿಹಾಸಕಾರರ ಅಭಿಪ್ರಾಯವಿದೆ. ಹೈದ್ರಾಬಾದ ಸಂಸ್ಥಾನದಲ್ಲೆಲ್ಲ ಹಿಂದೂ-ಮುಸ್ಲಿಂ ದಂಗೆಗಳು ಜರುಗುತ್ತಿದ್ದ ಕಾಲದಲ್ಲಿ ಎಲ್ಲೆಲ್ಲೂ ಅಸಮಧಾನದ ಹೊಗೆ ಮೂಡುತ್ತಿತ್ತು ಇದರಿಂದ ಹಿಂದೂಗಳ ಮನಸ್ಸು ಇನ್ನೂ ದಬ್ಬಾಳಿಕೆಯ ವಿರುದ್ಧ ತಲೆ ಎತ್ತಲು ಹವಣಿಸುತ್ತಿದ್ದವು. ಆರ್ಯ ಸಮಾಜದವು ಇದಕ್ಕೆ ನಾಯಕತ್ವ ಒದಗಿಸಿತು. ಹಾಗೂ ಬಹುಪಾಲು ಪ್ರತಿಭಟನೆಗಳು ಧಾರ್ಮಿಕ ಮೆರವಣಿಗೆಗಳಿಗೆ ಅವಕಾಶ ಕೊಡದಾದಾಗ ಜಾತಿಯ ದಂಗೆಗಳಲ್ಲಿ ಮುಕ್ತಾಯವಾಗುತಿತ್ತು ಎಂದು ರಮಾನಂದ ತೀರ್ಥರು ಅಭಿಪ್ರಾಯಪಡುತ್ತಾರೆ.

### ಗುಲಬರ್ಗಾದಲ್ಲಿ ಕ್ವಿಟ್ ಇಂಡಿಯ ಚಳುವಳಿ

ನಿಜಾಮನ ಮೂಲಕ ಹೈದ್ರಾಬಾದ ಪ್ರಾಂತದ ಗುಲಬರ್ಗಾ ಆಡಳಿತದ ಮೇಲೆ ಬ್ರಿಟಿಷ ರೆಸಿಡೆಂಟನು ಪರೋಕ್ಷವಾದ ಹತೋಟಿಯನ್ನು ಹೊಂದಿದ್ದನು. ಹೀಗಾಗಿ ಹೈದ್ರಾಬಾದ ರಾಜ್ಯದಲ್ಲಿ ಜನತೆ ಯಾವುದೇ ಬಹಿರಂಗ ವಿರೋಧ ಮಾಡುವುದು ಅಸಾಧ್ಯವಾಗಿತ್ತು. ಆದರೆ ಆ ವೇಳೆಗಾಗಲೇ ರಾಷ್ಟ್ರೀಯ ಭಾವನೆಯು ಜಿಲ್ಲೆಯಾದ್ಯಂತ ವ್ಯಾಪಕವಾಗಿ ಪಸರಿಸತು, ಶಿಕ್ಷಣ ಕ್ಷೇತ್ರದಲ್ಲೂ ರಾಷ್ಟ್ರೀಯ ಧ್ಯೇಯೋದ್ದೇಶಗಳ ಗುರಿಯಾಗಿ ಹೊಂದಿದ ಕೆಲವು ಶಿಕ್ಷಣ

ಸಂಸ್ಥೆಗಳು ಹಿಂದೆಯೇ ಗುಲಬರ್ಗಾದಲ್ಲಿ ಅಸ್ತಿತ್ವಕ್ಕೆ ಬಂದಿದ್ದವು. ಇವು ರಾಷ್ಟ್ರಹಿತವನ್ನು ತಮ್ಮ ಶಾಲೆಯ ಶಿಸ್ತಿನ ಪಾಲನೆಯ ತತ್ವವನ್ನಾಗಿ ಅನುಸರಿಸಿದವು. ಗುಲಬರ್ಗಾದಲ್ಲೇ ನೆಲಿಸಿದ್ದ ವಿಠಲರಾವ್ ದೇವಳಗಾಂವಕರ್ ಅವರು ವಕೀಲ ವೃತ್ತಿಯನ್ನು ಅನುಸರಿಸುತ್ತಾ, ಸಾಮಾಜಿಕ ಚಟುವಟಿಕೆಗಳನ್ನು ಕೈಗೊಂಡರು . ಇವರ ಪ್ರಯತ್ನದಿಂದಾಗಿ ದೇಶಿಯ ಶಾಲೆಗಳ ಸ್ಥಾಪನೆಯ ದಿಸೆಯಲ್ಲಿ ೧೯೦೭ರಲ್ಲಿ ಗುಲಬರ್ಗಾದಲ್ಲಿ ನೂತನ ವಿದ್ಯಾಲಯ ಸ್ಥಾಪಿತವಾಯಿತು. ಈ ಶಾಲೆಯು ಮಾತೃ ಭಾಷೆಯಲ್ಲಿ ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಶಿಕ್ಷಣವನ್ನು ನೀಡುವ ಉದಾತ್ತ ಉದ್ದೇಶವನ್ನು ಹೊಂದಿದ್ದಿತ್ತು. ಇವರ ಪ್ರಯತ್ನದಿಂದಾಗಿ ಜನಾಭಿಪ್ರಾಯವನ್ನು ಬಲಗೊಳಿಸುವ ದೃಷ್ಟಿಯಿಂದ ಸಾರ್ವಜನಿಕ ಗ್ರಂಥಾಲಯ ಚಳುವಳಿಯು ಪ್ರಾರಂಭವಾಯಿತು. ಇದರ ಫಲವಾಗಿ ಗುಲಬರ್ಗಾದಲ್ಲಿ ಸಾರ್ವಜನಕ ಗ್ರಂಥಾಲಯವು ಪ್ರಾರಂಭವಾಯಿತು.

"ಗುಲಬರ್ಗಾದಲ್ಲಿ ಶರಣಬಸವೇಶ್ವರ ಸಂಸ್ಥಾನದ ಆಶ್ರಯದಲ್ಲಿ ಪ್ರಥಮ ಬಾರಿಗೆ ಶರಣಬಸವೇಶ್ವರ ವಾಚನಾಲಯವನ್ನು ೧೯೧೮ರಲ್ಲಿ ಆರಂಭಿಸಲಾಯಿತು."[21] ಇದೇ ಸಮಯದಲ್ಲಿ ರಂಗಂಪೇಟೆ ಸಾಹಿತ್ಯ ಚಟುವಟಿಕೆಗಳು ಪ್ರಾರಂಭವಾದವು. ಮುಂದೆ ಕನ್ನಡ ಭಾಷೆಯ ಬೆಳವಣಿಗೆಗೆ ಶ್ರಮವಹಿಸಲಾಯಿತು. ಗಾಂಧೀಜಿ ಪ್ರಾರಂಭ ಮಾಡಿದ ಭಾರತ ಬಿಟ್ಟು ತೊಲಗಿ ಚಳುವಳಿಯ ಬಿಸಿ ಗುಲಬರ್ಗಾಕ್ಕೂ ಮುಟ್ಟಿ ಚಳುವಳಿ ತೀವ್ರಗೊಂಡಿತು. ನಿಜಾಮರ ಸರಕಾರವು ವಿಧಿಸಿದ್ಧ ಉಗ್ರ ಕ್ರಮಗಳಿಂದಾಗಿ ಇಲ್ಲಿ ವ್ಯಕ್ತಿ ಸ್ವಾತಂತ್ರ್ಯಕ್ಕೆ ದೊಡ್ಡ ಅಘಾತ ಉಂಟಾಯಿತು. ಗಣೇಶೋತ್ಸವಗಳು ಈ ಸಮಯದಲ್ಲಿ ಆಂದೋಲನ ಪ್ರಚಾರದ ಸಭೆಯಾಗಿ ಮಾರ್ಪಾಟಾದವು. ದಶಕಗಳ ಹಿಂದೆ ಬಾಲಗಂಗಾಧರ ತಿಲಕರು ಈ ಕ್ರಮವನ್ನು ಪ್ರಾರಂಭಿಸಿದರು.

## ಗುಲಬರ್ಗಾ ಜಿಲ್ಲೆಯಲ್ಲಿ ರಜಾಕರ ದೌರ್ಜನ್ಯಗಳು

೧೯೪೭ನೇ ಅಗಸ್ಟ ೧೫ನೇ ಮಧ್ಯರಾತ್ರಿಯ ತರುವಾಯ ಹೈದ್ರಾಬಾದ ಸಂಸ್ಥಾನದಲ್ಲಿ ನಡೆದ ವ್ಯಾಪಕ ದೌರ್ಜನ್ಯಗಳಿಗೆ ಧಾರ್ಮಿಕ ತೀವ್ರಗಾಮಿಗಳ ಸಂಸ್ಥೆಯಾದ ಇತ್ತ್ಹಾದ್-ಉಲ್ ಮುಸ್ಲಿಂಮೀನ್ ಮುಖ್ಯವಾಗಿ ಕಾರಣವಾಗಿತ್ತು. ಈ ಸಂಸ್ಥೆಯ ಸ್ಥಾಪನೆಯನ್ನು ಇದಕ್ಕೆ ಮೊದಲೆ ಲಾತೂರಿನ ಪ್ರಸಿದ್ಧ ವಕೀಲನಾಗಿದ್ದ ಖಾಸಿಂ ರಜ್ವಿ ಮತ್ತು ರೇಹಮಾನ್ ಮಾಯೆ

ದಖನ್ ಪತ್ರಿಕೆಯ ಸಂಪಾದಕನಾದ ಮಹ್ಮದ ಸಿದ್ದಿಕಿ ೧೯೪೦ರಲ್ಲಿ ಈ ಸಂಸ್ಥೆಯನ್ನು ಸ್ಥಾಪಿಸಿದರು. ಈ ಸಂಸ್ಥೆಯಲ್ಲಿ ಓರಿಸ್ಸಾದ ಚಳುವಳಿಯಲ್ಲಿ ಭಾಗವಹಿಸಿದ್ದ ತೀವ್ರಗಾಮಿ ಬಂಧೂಕುದಾರರನ್ನು ಸೇರಿಸಿಕೊಳ್ಳಲಾಗಿತ್ತೆಂದು ತಿಳಿದುಬರುತ್ತದೆ.

ನಿಜಾಂ ಸರಕಾರ ರಜಾಕರರ ದೌರ್ಜನ್ಯಗಳನ್ನು ಹತ್ತಿಕ್ಕಲು ವಿಫಲವಾದಾಗ ಸಾಮಾನ್ಯ ಜನತೆಯ ಹಲವು ದಿಟ್ಟ ಮುಂದಾಳುಗಳ ನಾಯಕತ್ವದಲ್ಲಿ ಸಂಘಟಿತರಾದರು. ರಜಾಕಾರ ವಿರುದ್ಧ ಪ್ರಬಲ ಹೋರಾಟ ಮಾಡಿ ರಜಾಕಾರರನ್ನು ಯಶಸ್ವಿಯಾಗಿ ಎದುರಿಸಿ ದಮನ ಮಾಡಿದರು. ಇಂತಹ ಪ್ರಶಂಸನೀಯವಾದ ಕಾರ್ಯದಲ್ಲಿ ತೊಡಗಿದ ಗುಲಬರ್ಗಾದ ಹೋರಾಟಗಾರರೆಂದರೆ ಕಕ್ಕೇರಿ ಹನುಮಂತರಾಯರ ಮನೆಯಲ್ಲಿ ಜನಾರ್ಧನರಾವ್ ದೇಸಾಯಿಯವರ ಮುಖಂಡತ್ವದಲ್ಲಿ ಸಭೆ ಸೇರಿದರು. ಇದರಲ್ಲಿ ಅನೇಕ ಜನರು ಪಾಲ್ಗೊಂಡಿದ್ದರು. ಜನಾರ್ಧನರಾವ್ ಅವರು ಈ ರಜಾಕರ್ ವಿರೋಧ ಚಳುವಳಿಯ ನಾಯಕತ್ವವನ್ನು ವಹಿಸಿದರು. ದೇಸಾಯಿಯವರು ಕೊನೆಯವರೆಗೂ ಪೋಲಿಸರ ಕೈಗೆ ಸಿಗದೆ ಗಡಿಭಾಗಗಳಲ್ಲಿದ್ದ ಚಳುವಳಿಯ ಶಿಬಿರಗಳ ಮಾರ್ಗದರ್ಶನ ಮಾಡುತ್ತಿದ್ದರು.

ಗುಲಬರ್ಗಾದಲ್ಲಿ ದೇಸಾಯಿಯವರ ಮಾರ್ಗದರ್ಶನವಲ್ಲಿ ಮುಂದುವರೆದ ಅನೇಕ ಜನ ಯುವಕರು ಚಳುವಳಿಯನ್ನು ಮುಂದುವರೆಸಿದರು. ಅಂತಹ ಯುವಕರಲ್ಲಿ ಶರಣಗೌಡ ಇನಾಂದಾರ ಎಂಬ ತರುಣ ನಾಯಕ. ಈ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಸೊಲ್ಲಾಪುರದಲ್ಲಿ ತಲೆ ಮರೆಸಿಕೊಂಡು ಪ್ರಬಲವಾದ ಭೂಗತ ಕಾರ್ಯಚಟುವಟಿಕೆಯಲ್ಲಿ ತೊಡಗಿದರು. ಒಂದು ಸಾರಿ ಸೊಲ್ಲಾಪುರದಿಂದ ಗುಲಬರ್ಗಾಕ್ಕೆ ಬರುವಾಗ ಪೋಲಿಸರ ಕಣ್ಣು ತಪ್ಪಿಸಿ ಸಾವಳಗಿ ರೈಲು ನಿಲ್ದಾಣದಿಂದ ತಪ್ಪಿಸಿಕೊಂಡರು. ಆದರೆ ಚಳುವಳಿಯ ಇತರ ನಾಯಕರಾದ ಜಗನ್ನಾಥರಾವ್ ಚಂಡ್ರಿಕಿ, ಅಣ್ಣಾರಾವ ಗಣಮುಖಿ, ಮಲ್ಲಪ್ಪ ಕೊಳೂರ ಮುಂತಾದವರನ್ನು ಪೋಲಿಸರು ಸೆರೆಹಿಡಿದರು.

ದತ್ತಾತ್ರೇಯ ಅವರಾದಿ, ನಾರಾಯಣರಾವ ಕಾನಿಹಾಳ್ ಮುಂತಾದವರು ಹೈದ್ರಾಬಾದನ ಗಡಿಯಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಶಿಬಿರಗಳನ್ನು ಸ್ಥಾಪಿಸಿದರು. ಸರದಾರ ಶರಣಗೌಡ ಮತ್ತು ದತ್ತಾತ್ರೇಯ ಅವರಾದಿ ಇಬ್ಬರೂ ಹೈದ್ರಾಬಾದಿಗೆ ಹೋಗಿ ಜೈಲಿನಲ್ಲಿದ್ದ ರಮಾನಂದ

ತೀರ್ಥರನ್ನು ಭೇಟಿಮಾಡಿ ತಮ್ಮ ಮುಂದಿನ ಹೋರಾಟಕ್ಕೆ ಸಿದ್ದರಾದರು. ಗದಗಿಗೆ ಹೋಗಿ ಅಲ್ಲಿ ಪ್ರಸಿದ್ಧ ಹೋರಾಟಗಾರರ ಜಾಲಿಯಳ ಅನಂತರಾಯರ ಮನೆಯಲ್ಲಿ "ಜನ ರಕ್ಷಣಾ ಕಛೇರಿ" ಯನ್ನು ಪ್ರಾರಂಭಿಸಿದರು. ಮುಂದೆ ಶರಣಗೌಡರು ಹಾಗೂ ದಾಸರಾವ ಮುಖ್ತೆದಾರ ಅವರುಗಳ ನಾಯಕತ್ವದಲ್ಲಿ ಸುಮಾರು ೧೦೦ ಯುವಕರ ಸೇನೆಯನ್ನೇ ಸಿದ್ದಪಡಿಸಿಕೊಂಡು ಗುಲಬರ್ಗಾ ಜಿಲ್ಲೆಯ ಒಳಗೆ ಪ್ರವೇಶಿಸಿ ಜೇವರ್ಗಿ ತಾಲೂಕಿನ ಹಗರಟಗಿ, ಅರಲಗುಂಡಗಿ, ಕಾಚಾಪುರ, ಮಳ್ಳಿ, ಕುಳಗೇರಿ, ಬೊಮ್ಮನಹಳ್ಳಿ ಹುಣಸಗಿ ಎಲ್ಲಾ ಕಡೆಗೆ ಒಂದು ವಾರದ ಅವಧಿಯಲ್ಲಿ ದಾಳಿ ಮಾಡಿ ಪೋಲಿಸ ಠಾಣೆಗಳನ್ನು ವಶಪಡಿಸಿಕೊಂಡರು. ಈ ರಕ್ಷಣಾ ದಾಳಿಗಳು ಅವರ ದೌರ್ಜನ್ಯಕ್ಕೆ  ನೀಡಿದ ಪ್ರಬಲ ಉತ್ತರವಾದವು.

ರಜಾಕಾರ ವಿರುದ್ಧ ಸಮರ ಸಾರಿದ ಚಳುವಳಿಗಾರರು ಹೈದ್ರಾಬಾದ ಸಂಸ್ಥಾನದ ೧೪ ಹಳ್ಳಿಗಳನ್ನು ಸ್ವತಂತ್ರಗೊಳಿಸಿದರು. ನಿಂಬರ್ಗಿ ಪೋಲಿಸ ಠಾಣೆಯ ಮೇಲೆ ದಾಳಿ ಮಾಡಿದ ಚಳುವಳಿಕಾರರ ಪ್ರತಿಯಾಗಿ ಕೋಪಗೊಂಡ ರಜಾಕಾರರು ಮುಂಬೈಯಿಂದ ಬರುತ್ತಿದ್ದ ರೈಲಿನ ಮೇಲೆ ದಾಳಿ ಮಾಡಿ ಅಪಾರ ಸಂಪತ್ತನ್ನು ಲೂಟಿ ಮಾಡಿದರು. ೧೯೪೭ರ ಅಗಸ್ಟ ೧೫ ರಂದು ರಾತ್ರಿ ಎರಡು ಗಂಟೆಗೆ ಅಫಜಲಪುರದಲ್ಲಿ ಹರಿರಾವ್ ಮೊರೀರಾ, ಜಗನ್ನಾಥರಾವ್ ಅಷ್ಟಗಿ, ದತ್ತಾತ್ರೇಯ ಅವರಾದಿ, ಹಕೀಕತ್‌ರಾವ ಚಿಟಗುಪ್ಪಿಕರ ಮುಂತಾದ ಯುವಕರು ಸತ್ಯಗ್ರಹ ನಡೆಸಿ ರಾಷ್ಟ್ರಧ್ವಜವನ್ನು ಹಾರಿಸಿದರು. ಇದಕ್ಕೆ ಪ್ರತ್ಯುತ್ತರವಾಗಿ ರಜಾಕರರು ಜನೆವರಿ ೧೯೪೮ರಲ್ಲಿ ಅಫಜಲಪುರದ ಮೇಲೆ ದಾಳಿ ಮಾಡಿ ವ್ಯಾಪಕ ಸಾವು ನೋವುಗಳನ್ನುಂಟು ಮಾಡಿದರು. ಇದನ್ನು ಖಂಡಿಸುವದಕ್ಕಾಗಿ ರಜಾಕಾರರರ ವಿರುದ್ಧ ಅನೇಕ ಚಳುವಳಿಗಳು ಸಂಘಟಿತವಾದವು. ಆಳಂದದಲ್ಲಿ ಕಲ್ಯಾಣರಾವ್ ದೇಶಪಾಂಡೆ, ದೊಂಡೋಪರಿತ್ ಮತ್ತು ಭೀಮಾಶಂಕರ ಅವರು ಜನಗಳನ್ನು ಸಂಘಟಿಸಿದರು. ನಂತರ ಗಣೋಶೋತ್ಸವದ ಕೋಮುಗಲಭೆಯಲ್ಲಿ ಕಲ್ಯಾಣರಾವ ಪೋಲಿಸರ ಗುಂಡಿಗೆ ಬಲಿಯಾದರು. ಇಲ್ಲಿ ರಜಾಕಾರರು ಒಂಬತ್ತು ಜನ ಸತ್ಯಾಗ್ರಹಿಗಳನ್ನು ಸಾಲಾಗಿ ನಿಲ್ಲಿಸಿ ಗುಂಡಿಟ್ಟುಕೊಂದರು. ಸುರಪುರ ತಾಲೂಕಿನ ರಾಜನಕೋಳೂರು ಭಾಗದಲ್ಲಿ ಆದ ಸಶಸ್ತ್ರ ಘರ್ಷಣೆಯಲ್ಲಿ ವಿರೂಪಾಕ್ಷರಡ್ಡಿ ಹಾಗೂ ಐವರು ಪೋಲಿಸರು ಮೃತಪಟ್ಟರು.ಸಾವಿರಾರು ಮಂದಿ ಚಳುವಳಿಗಾರರು ರಜಾಕರರ ವಿರುದ್ಧ ಚಳುವಳಿ ಮಾಡಿ ಜೈಲು ಸೇರಿದರು. ಇದಕ್ಕೆ ಹೆಚ್ಚು ಜನ ಗಡಿಯಿಂದ ಆಚೆಗೆ ವಲಸೆ

ಹೋದವರಲ್ಲಿ ಗುಲಬರ್ಗಾದ ಸದರ್ ಮೆಹಬಸ್ ಸುಬಾ (ಈಗಿನ ಸುಪರ್ ಮಾರ್ಕೇಟ ಜಾಗ) ಜೈಲಿನಲ್ಲಿ ೧೭ನೇ ಡಿಸೆಂಬರ ೧೯೪೭ ರಂದು ಪಿಕೆಟಿಂಗ್ ಮಾಡುತ್ತಿದ್ದ ಅನಿರುದ್ಧ ದೇಸಾಯಿ ಕೃಷ್ಣಗೊನಾಳ ಮುಂತಾದವರನ್ನು ಬಂಧಿಸಿ ಜಗತ್ ಜೈಲಿನಲ್ಲಿಡಲಾಯಿತು.

ಒಂದು ಸಾಯಂಕಾಲ ಭೀಮಸೇನರಾವ ಇದ್ದ ಜೈಲಿನ ಆವರಣದಲ್ಲಿ ಸತ್ಯಾಗ್ರಹಿಗಳೆಲ್ಲಾ ಪ್ರಾರ್ಥನೆಗೆ ಸೇರಿದ್ದರು. ಆ ಸಮಯದಲ್ಲಿ ರಜಾಕಾರರು ಹಾಗೂ ಪೋಲಿಸರು ಅಧಿಕ ಸಂಖ್ಯೆಯಲ್ಲಿ ಜೈಲಿಗೆ ನುಗ್ಗಿ ಪ್ರಾರ್ಥನೆ ಮಾಡುತ್ತಿದ್ದ ಸತ್ಯಾಗ್ರಹಿಗಳ ಮೇಲೆ ಎರಗಿದರು. ಲಾಠಿಯಿಂದ ಮನ ಬಂದಂತೆ ಥಳಿಸಿದರು. ಇಂಥ ಕಷ್ಟಕಾರಕ ಭೀಕರ ಸಂದರ್ಭದಲ್ಲಿ ಭೀಮಸೇನರಾವ ದೇಸಾಯಿಯವರು ತಲೆಗೆ ಬಲವಾದ ಪೆಟ್ಟು ಬಿದ್ದಿತು. ಅವರ ತಲೆಯಿಂದ ರಕ್ತಸ್ರಾವವಾಗಿ ಅಸುನೀಗಿದರು.

ಹೈದ್ರಾಬಾದ ಸಂಸ್ಥಾನದಲ್ಲಿ ಏನು ನಡೆಯುತ್ತಿದೆ ಎಂಬುದು ಹೊರಪ್ರಪಂಚಕ್ಕೆ ಕೇವಲ ವೃತ್ತ ಪತ್ರಿಕೆಗಳಿಂದ ಮಾತ್ರ ತಿಳಿದು ಬರುತ್ತಿತ್ತು. ಇಂತಹ ಸಂದರ್ಭದಲ್ಲಿ ಡಾ॥ ಕಂಠೀಯವರು ಪ್ರಯತ್ನದಿಂದ "ಹೈದ್ರಾಬಾದ ಕರ್ನಾಟಕ "ಎಂಬ ಪತ್ರಿಕೆಯು ಪ್ರಕಟವಾಯಿತು. ಮತ್ತೆ ದತ್ತಾತ್ರೇಯ ಅವರಾದಿ ಮತ್ತು ಎಸ್. ಹನುಮಂತರಾಯರು ಸೇರಿ ೧೯೪೭ರ ಫೆಬ್ರವರಿಯಲ್ಲಿ "ನಾಗರಿಕ" ಎಂಬ ಸಾಪ್ತಾಹಿಕ ಪತ್ರಿಕೆಯನ್ನು ಪ್ರಕಟಿಸಿದರು. ದೇಶದ ಸ್ವಾತಂತ್ರ್ಯ ಹೋರಾಟಕ್ಕೆ ಸಂಬಂಧ ಪಟ್ಟ ಹೈದ್ರಾಬಾದ ಸಂಸ್ಥಾನದ ವಿಮೋಚನ ಚಳುವಳಿಗೆ ಸಂಬಂಧಿಸದ ಕರಪತ್ರಗಳ ಹಸ್ತಪ್ರತಿಗಳನ್ನು ತೆಗೆದು ಜನಗಳಿಗೆ ಹಂಚುತ್ತಿದ್ದರು. ಇದು ಜನ ಜಾಗೃತಿಗೆ ಪ್ರಮುಖ ಕಾರಣವಾಯಿತು. ಆಗ ತರುಣರಾಗಿದ್ದ ವಸಂತ ಕುಷ್ಟಗಿ, ಲಕ್ಷ್ಮೀಕಾಂತ ಪಟ್ಟಣಕರ "ಉದಯ" ಎಂಬ ಕೈಬರಹದ ಪತ್ರಿಕೆಯನ್ನು ಆರಂಭಿಸಿ ಜನರಲ್ಲಿ ರಾಷ್ಟ್ರೀಯತೆಯ ಪ್ರಜ್ಞೆಮೂಡಲು ಕಾರಣರಾದರು.

ಹೀಗೆ ರಜಾಕರರ ಹಾವಳಿಯಿಂದ ಹೈದ್ರಾಬಾದ ಸಂಸ್ಥಾನೀ ಜನತೆ ಅನುಭವಿಸಿದ ದಾರುಣ ಘಟನೆಗಳು ಸ್ವಾತಂತ್ರ್ಯ ಚಳುವಳಿಗೆ ಜನರನ್ನು ಸಿದ್ಧಗೊಳಿಸಿತ್ತು. ಜನಾಭಿಪ್ರಾಯವು ಕ್ರೋಢಿಕೃತಗೊಂಡು ಶಾಂತಿ ಸ್ಥಾಪನೆಯಡೆಗೆ ಕೇಂದ್ರ ಸರಕಾರವನ್ನು ಕ್ರಿಯಾಶೀಲವಾಗುವಂತೆ ಮಾಡಿದುದು ಗಣನೀಯವಾಗಿದೆ. ಕೊನೆಗೆ ಚಳುವಳಿಕಾರರ ಹೋರಾಟ ಯಶಸ್ವಿಯಾಗಿ

ಹೈದ್ರಾಬಾದ ಸಂಸ್ಥಾನ ೧೯೪೮ರ ಸಪ್ಟೆಂಬರ ೩೦ ರಂದು ಭಾರತ ಸರಕಾರದಲ್ಲಿ ವಿಲೀನವಾಗಿ ಅಖಂಡ ಭಾರತ ಸ್ವತಂತ್ರ ಪಡೆದುದು ಎಲ್ಲಾ ಚಳುವಳಿಕಾರರಿಗೆ ನೆಮ್ಮದಿ ತಂದಿತ್ತು.

## ಗುಲಬರ್ಗಾ ಜಿಲ್ಲೆಯ ಪ್ರೇಕ್ಷಣೀಯ ಸ್ಥಳಗಳು

ಕರ್ನಾಟಕದ ಉತ್ತರಕ್ಕೆ ಇರುವ ಗುಲಬರ್ಗಾ ಜಿಲ್ಲೆಯು ಭೌಗೋಳಿಕವಾಗಿ, ಚಾರಿತ್ರಿಕವಾಗಿ, ಧಾರ್ಮಿಕವಾಗಿ ಹಾಗೂ ಸಾಂಸ್ಕೃತಿಕವಾಗಿ ಫಲವಾತ್ತಾಗಿದ್ದು ವೈವಿಧ್ಯತೆಯಿಂದ ಕೂಡಿದೆ. ಭೌಗೋಳಿಕವಾಗಿ ಎತ್ತರವಾದ ದಖ್ಖನ್ ಪ್ರಸ್ಥಭೂಮಿಯ ಭಾಗವಾಗಿರುವ ಈ ಪ್ರದೇಶವು ಎರೆ ಮಣ್ಣನ್ನು ಹೊಂದಿದ್ದು, ಕೃಷ್ಣಾ, ಭೀಮಾ, ಕಾಗಿಣಾ, ಅಮರಣಾ, ಬೆಣ್ಣೆತೊರೆ ಮುಂತಾದ ನದಿ ಉಪನದಿಗಳ ಬಯಲು ಬಹು ಹಿಂದಿನಿಂದಲೂ ಜನವಸತಿಯ ನೆಲೆಗಳಿಗೆ ಪ್ರಶಸ್ಥವಾಗಿದೆ.

ಗುಲಬರ್ಗಾ ಜಿಲ್ಲೆಯಲ್ಲಿ ಹಲವಾರು ಸಂತರು, ಶರಣರು ಹುಟ್ಟಿ-ಬಾಳಿ ಬೆಳಗಿದ್ದಾರೆ. ಆದ್ದರಿಂದ ಜಿಲ್ಲೆಯಲ್ಲಿ ಹಲವಾರು ಧಾರ್ಮಿಕ ಮತ್ತು ಐತಿಹಾಸಿಕ ಸ್ಥಳಗಳು ಪ್ರವಾಸಿಗರಿಗೆ ಆಕರ್ಷಣೆಯವಾಗಿವೆ. ಜಿಲ್ಲೆಯ ಪ್ರಮುಖ ಪ್ರೇಕ್ಷಣೀಯ ಸ್ಥಳಗಳು ಅಂಕಲಗಿ, ಅಡಕಿ, ಅರಳಗುಂಡಗಿ, ಅಲ್ಲೂರ, ಐವೂರ, ಕಕ್ಕೇರಿ, ಕನ್ಯಾಕೋಳೂರು, ಕಾಳಗಿ, ಕೆಂಬಾವಿ, ಕೊಲ್ಲೂರು, ಗುರುಸುಣಗಿ, ಗುರುಮಿಠಕಲ್, ಗುಲಬರ್ಗಾ, ಘತ್ತರಗಿ, ಚಂದ್ರಂಪಳ್ಳಿ, ಚಿತ್ತಾಪೂರ, ಜಿಡಗಾ, ತಿಂತಣಿ, ತುಮಕೂರ, ದಂಡಗುಂಡ, ದೇವರಗಾಣಗಾಪೂರ, ನಾರಾಯಣಪುರ ಡ್ಯಾಂ, ನಾಲವಾರ, ಮಳಖೇಡ, ಮುದನೂರು, ವಾಗಣಗೇರಿ ಇತ್ಯಾದಿ.

## ಗುಲಬರ್ಗಾ ಜಿಲ್ಲೆಯ ಸಂಪನ್ಮೂಲಗಳು

### ಖನಿಜಗಳು ನಿಕ್ಷೇಪಗಳು

ಜಿಲ್ಲೆಯು ವೈವಿಧ್ಯಮಯ ಖನಿಜ ನಿಕ್ಷೇಪಗಳಿಂದ ಸಂಪದ್ಭರಿತವಾಗಿದೆ. ಸುಣ್ಣದ ಕಲ್ಲು, ಎರಕದ (ಮೌಲ್ಡಿಂಗ್) ಮರಳು, ಚಿನ್ನ, ಕೆಂಪು ಕಾವಿ ಮಣ್ಣು, ಬಿಳುಚು ಜೇಡು ಹಾಗೂ ಬೆಣಚುಕಲ್ಲು ಪ್ರಮುಖವಾದ ಖನಿಜಗಳು. ಜೊತೆಗೆ ಶಹಾಬಾದ್ ಕಲ್ಲುಗಳು, ಧೋಬೀ (ಅಗಸರ) ಚೌಳು (ಸವಳು) ಮಣ್ಣು, ಕಟ್ಟಡ ನಿರ್ಮಾಣದ ಕಲ್ಲುಗಳು ಅಲಂಕಾರಿಕ ಕಲ್ಲುಗಳು ಜಿಲ್ಲೆಯಲ್ಲಿ ದೊರಕುತ್ತವೆ.

**ಜಿಲ್ಲೆಯಲ್ಲಿ ೧೯೯೩-೯೪ ಮತ್ತು ೧೯೯೪-೯೫ನೇ ಸಾಲಿನಲ್ಲಿ ಉತ್ಪಾದಿಸಿದ ಖನಿಜಗಳ ಪ್ರಮಾಣ (ಟನ್ನುಗಳಲ್ಲಿ) ಹಾಗೂ ಅದರ ಮೌಲ್ಯ ಹೀಗಿದೆ.**

**ಭಾರೀ ಖನಿಜಗಳು**

| | ೧೯೯೩-೯೪ | ೧೯೯೪-೯೫ | ಮೌಲ್ಯ ಲಕ್ಷ ರೂ. |
|---|---|---|---|
| ೧. ಚಿನ್ನ (ಕೆ.ಜಿ) | - | + ೧೨.೬೫ | ೬೩.೭೫ |
| ೨. ಬೆಳ್ಳಿ (ಕೆ.ಜಿ) | - | + ೯೯೩.೭೮ | ೦.೬೯ |
| ೩. ಎರಕದ ಮರಳು (ಮೌಲ್ಡಿಂಗ್ ಸ್ಯಾಂಡ್) | ೧೧,೯೪೨ | ೧೮.೪೧೬ | ೩.೬೮ |
| ೪. ರೆಡ್ ಆಕರ್ | ೨೩೧ | - | - |
| ಒಟ್ಟು | ೧೨,೧೭೩ | ೧೮,೪೧೬ | ೬೮.೧೨ |

**ಕಿರು ಖನಿಜಗಳು**

| | | | |
|---|---|---|---|
| ೧. ಕಟ್ಟಡದ ಕಲ್ಲುಗಳು | ೧೩,೩೩೩ | ೧೧.೦೬೭ | ೧೧.೦೭ |
| ೨. ಪುಲ್ಲರ್ಸ್ ಅರ್ತ | ೫,೦೨೨ | ೫,೪೦೫ | ೫.೪೧ |
| ೩. ಶಹಾಬಾದ್ ಕಲ್ಲು | ೭೬.೬೨ ಲಕ್ಷ ಚ.ಅಡಿ | ೫೬.೭೧ ಲಕ್ಷ ಚ.ಅಡಿ | ೧೧,೩೪೨.೩೩ |
| ೪. ಮರಳು | ೫೫,೭೫೩ | ೩೨,೩೦೩ | ೩೭.೧೪ |

**ಮೂಲ** - ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಗುಲಬರ್ಗಾ ಜಿಲ್ಲೆ - ಸಂ. ಎಂ.ಬಿ. ಪಾಟೀಲ್ - ಮೆ॥ ಗೀತಾಂಜಲಿ ಪ್ರಿಂಟರ್ಸ್ - ಪುಟ ೨೦ - ೧೯೯೭

**ವಾಯುಗುಣ**

ಗುಲಬರ್ಗಾ ಜಿಲ್ಲೆಯ ವಾಯುಗುಣ ಶುಷ್ಕ ಮತ್ತು ಆರೋಗ್ಯಕರವಾಗಿದೆ. ಇಲ್ಲಿಯ ಹವಾಗುಣ ಸ್ಥೂಲವಾಗಿ ಡೆಕ್ಕನ್ (ದಕ್ಷಿಣ) ಪ್ರಸ್ಥಭೂಮಿ ಮಾದರಿಯಲ್ಲಿ ಇದೆ. ಫೆಬ್ರವರಿಯಿಂದ ಜೂನ ಆರಂಭದವರೆಗೆ ಬೇಸಿಗೆ ಕಾಲ. ಅಲ್ಲಿಂದ ಮುಂದೆ ಸೆಪ್ಟೆಂಬರ್

ಅಂತ್ಯದವರೆಗೆ ಮಳೆಗಾಲ. ಅನಂತರ ಮಳೆಗಾಲ ತೀವ್ರವಾಗಿ ಹಿನ್ನಡೆಯುತ್ತದೆ. ಡಿಸೆಂಬರ್‌ನಿಂದ ಫೆಬ್ರವರಿಯವರೆಗೆ ಚಳಿಗಾಲವಿರುತ್ತದೆ.

**ಮಳೆ**

ಜಿಲ್ಲೆಯಲ್ಲಿರುವ ನಾಲ್ಕು ವಿವಿಧ ಮಳೆಮಾಪನ ಕೇಂದ್ರಗಳಲ್ಲಿ ಹಿಂದಿನ ೪೧ ರಿಂದ ೯೬ ವರ್ಷಗಳವರೆಗಿನ ಅಂಕಿಅಂಶಗಳು ದೊರಕುತ್ತವೆ. ಜಿಲ್ಲೆಯಲ್ಲಿ ವಾರ್ಷಿಕ ಸರಾಸರಿ ಮಳೆ ೭೧.೧೬ ಮಿ.ಮಿ. (೧೯೦೧-೧೯೫೦). ಈ ವಾರ್ಷಿಕ ಸರಾಸರಿ ಮಳೆಯ ಪ್ರಮಾಣವು ೧೯೦೧ ರಿಂದ ೧೯೭೦ ರ ಅವಧಿಯಲ್ಲಿ ೭೭೬.೫ ಮಿ.ಮಿ. ಗೆ ಏರಿದೆ. ರಾಜ್ಯದಲ್ಲಿ ಮಧ್ಯಮ ಪ್ರಮಾಣದಿಂದ ಕಡಿಮೆ ಪ್ರಮಾಣದಲ್ಲಿ ಮಳೆ ಬೀಳುವ ಪ್ರದೇಶದಲ್ಲಿ ಈ ಜಿಲ್ಲೆ ಇರುವದರಿಂದ ಸಾಮಾನ್ಯವಾಗಿ ಬರಗಾಲ ಮತ್ತು ಕ್ಷಾಮ ಪರಿಸ್ಥಿತಿಗಳು ಆಗಾಗ್ಗೆ ಗೋಚರಿಸುತ್ತವೆ.

**ಉಷ್ಣತೆ**

ಗುಲಬರ್ಗಾದಲ್ಲಿ ಹವಾಮಾನ ವೀಕ್ಷಣಾಲಯದಲ್ಲಿನ ಉಷ್ಣತೆಯ ಅಂಕಿ ಅಂಶಗಳ ಪ್ರಕಾರ ಜಿಲ್ಲೆಯಲ್ಲಿ ಡಿಸೆಂಬರ್ ತಿಂಗಳಿನಲ್ಲಿ ಅತಿ ಹೆಚ್ಚು ಚಳಿ ಆಗುತ್ತದೆ. ಆಗ ಸರಾಸರಿ ದೈನಂದಿನ ಅತೀ ಹೆಚ್ಚು ಉಷ್ಣತೆ ೨೯.೫ ಡಿಗ್ರಿ ಸೆಲ್ಸಿಯಸ್ ಮತ್ತು ಅತೀ ಕಡಿಮೆ ಉಷ್ಣತೆ ೧೫.೧ ಡಿಗ್ರಿ ಸೆಲ್ಸಿಯಸ್ ಆಗಿರುತ್ತದೆ. ಫೆಬ್ರವರಿ ಮಧ್ಯಭಾಗದಿಂದ ಉಷ್ಣತೆ ಏರುತ್ತಾ ಹೋಗಿ ಮೇ ತಿಂಗಳಲ್ಲಿ ಅತೀ ಹೆಚ್ಚು ಉಷ್ಣತೆ ಇರುತ್ತದೆ. ಆಗ ದೈನಂದಿನ ಅತೀ ಹೆಚ್ಚಿನ ಉಷ್ಣತೆ ೪೦.೨ ಡಿಗ್ರಿ ಸೆಲ್ಸಿಯಸ್ ಮತ್ತು ಅತೀ ಕಡಿಮೆ ೨೬.೩ ಡಿಗ್ರಿ ಇರುತ್ತದೆ. ಹಗಲಿನ ಉಷ್ಣತೆಯು ಬೆಸಿಗೆ ಕಾಲದಲ್ಲಿ ಕೆಲವೊಮ್ಮೆ ೪೫ ಡಿಗ್ರಿ ಸೆಲ್ಸಿಯಸ್‌ವರೆಗೆ ತಲುಪುವುದುಂಟು.

**ನದಿಗಳು ಮತ್ತು ಜಲಾನಯನ ಪ್ರದೇಶಗಳು**

**೧. ಕೃಷ್ಣಾನದಿ :** ಕರ್ನಾಟಕದ ಜೀವ ನದಿಗಳಲ್ಲಿ ಒಂದಗಿರುವ ಕೃಷ್ಣಾನದಿಯು ಉತ್ತರ ಕರ್ನಾಟಕದ ಭಾಗಕ್ಕೆ ಅತಿ ಉಪಯುಕ್ತವಾದ ನದಿಯಾಗಿದೆ. ಇದು ಪವಿತ್ರ ನದಿಯೆಂದು, ಸ್ಥಳೀಯರಲ್ಲಿ ಇದಕ್ಕೆ ಹಿರೇಹೊಳೆ ಎಂಬ ಹೆಸರಿದೆ. ಶಾಸನಗಳಲ್ಲಿ ಪೆರ್ದೊರೆ, ಸಂಸ್ಕೃದಲ್ಲಿ

ಕೃಷ್ಣಾವೇಣೀ ಎಂಬ ಹೆಸರುಗಳು ಕಂಡುಬರುತ್ತವೆ. ಕೃಷ್ಣಾನದಿಯನ್ನು ದಕ್ಷಿಣದ ಗಂಗೆ ಎಂದು ಕರೆಯುತ್ತಾರೆ.

**೨. ಭೀಮಾನದಿ :** ಈ ನದಿಯು ಕೃಷ್ಣಾನದಿಯ ಉಪನದಿಯಾಗಿದೆ. ಇದು ಮಹಾರಾಷ್ಟ್ರದ ಪಶ್ಚಿಮ ಘಟ್ಟಗಳ ಭೀಮಾಶಂಕರದಲ್ಲಿ ಉಗಮಿಸುತ್ತದೆ. ಈ ನದಿಯು ಬಿಜಾಪುರ ಮತ್ತು ಸೊಲ್ಲಾಪುರ ಜಿಲ್ಲೆಗಳ ಗಡಿರೇಖೆಯಾಗಿ ಪ್ರವಹಿಸುತ್ತದೆ. ಅಲ್ಲಿಂದ ಪೂರ್ವಾಭಿಮುಖವಾಗಿಯೂ ಹರಿದು ಗುಲಬರ್ಗಾ ಜಿಲ್ಲೆಯಲ್ಲಿ ಪ್ರವೇಶಿಸುತ್ತದೆ.

**೩. ಅಮರ್ಜಾ ನದಿ :** ಈ ನದಿಯ ಭೀಮಾನದಿಯ ಉಪನದಿಗಳಲ್ಲೊಂದು, ಮಹಾರಾಷ್ಟ್ರ ರಾಜ್ಯದ ಉಸ್ಮಾನಬಾದ ಜಿಲ್ಲೆಯ ಉಮರ್ಗಾ ತಾಲೂಕಿನಲ್ಲಿ ಆಲೂರ ಗ್ರಾಮದ ಹತ್ತಿರ ಹುಟ್ಟಿ, ಗುಲಬರ್ಗಾ ಜಿಲ್ಲೆಯ ಆಳಂದ ತಾಲೂಕನ್ನು ನೀರ್ಗುಂಡಿ ಗ್ರಾಮದ ಹತ್ತಿರ ಪ್ರವೇಶಿಸುತ್ತದೆ.

**೪. ಕಾಗಿಣಾ ನದಿ :** ಭೀಮಾನದಿಯ ಉಪನದಿಯಾಗಿರುವ ಕಾಗಿಣಾ ನದಿಯು ಆಂಧ್ರಪ್ರದೇಶದ ಕೋಹಿರ್ ಎಂಬಲ್ಲಿ ಹುಟ್ಟುತ್ತದೆ. ಇದು ಆಂಧ್ರಪ್ರದೇಶದಲ್ಲಿರುವ ತಾಂಡೂರ ಬಳಿ ಹರಿಯುತ್ತಿದ್ದರಿಂದ ಇದಕ್ಕೆ ತಾಂಡೂರ ನದಿ ಎಂಬ ಹೆಸರು ಇದ್ದುದ್ದು ತಿಳಿದು ಬರುತ್ತದೆ. ಈ ನದಿಯು ಸೇಡಂ ತಾಲೂಕಿನಲ್ಲಿ ಗುಲಬರ್ಗಾ ಜಿಲ್ಲೆಯನ್ನು ಪ್ರವೇಶಿಸಿದೆ.

**೫. ಮುಲ್ಲಾಮಾರಿ ನದಿ :** ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನ ಮಟೌಲ ಬಳಿ ಹುಟ್ಟುವ ಮುಲ್ಲಾಮಾರಿಯು ಆಗ್ನೇಯ ದಿಕ್ಕಿನಡೆ ಸುಮಾರು ೫೦ ಕಿ.ಮಿ. ಹರಿದು ಗುಲಬರ್ಗಾ ಜಿಲ್ಲೆಯನ್ನು ಕಿನ್ನಿ ಗ್ರಾಮದ ಬಳಿ ಪ್ರವೇಶಿಸುತ್ತದೆ.

**೬. ಬೆಣ್ಣೆತೊರೆ ನದಿ :** ಕಾಗಿಣಾ ನದಿಯ ಉಪನದಿಯಾದ ಬೆಣ್ಣೆತೊರೆ ನದಿಯು ಮಹಾರಾಷ್ಟ್ರ ರಾಜ್ಯದ ಮಲೆಗಾಂವ್ ಗ್ರಾಮದ ಬಳಿ ಹುಟ್ಟಿ ಆಳಂದ ತಾಲೂಕಿನ ಹಿಪ್ಪರಗಿ ಗ್ರಾಮದ ಬಳಿ ಗುಲಬರ್ಗಾ ಜಿಲ್ಲೆಯನ್ನು ಪ್ರವೇಶಿಸುತ್ತದೆ.

**೭. ಬೋರಿ ನದಿ :** ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯಲ್ಲಿ ಎರಡು ದೊಡ್ಡ ಹಳ್ಳಗಳು ಸೇರಿ ಬೋರಿ ನದಿಯು ಆಗುತ್ತದೆ. ಇದು ಗುಲಬರ್ಗಾ ಜಿಲ್ಲೆಯನ್ನು ಅಫಜಲಪುರ ತಾಲೂಕಿನ ಜೋಡಿ ಕುರಡ್ ಗ್ರಾಮದ ಬಳಿ ಪ್ರವೇಶಿಸುತ್ತದೆ.

## ಸಸ್ಯ ಸಂಪತ್ತು

ಗುಲಬರ್ಗಾ ಜಿಲ್ಲೆಯು ಭಾರತದ ದಕ್ಷಿಣ ಪ್ರಸ್ಥಭೂಮಿಯ ಭಾಗವಾಗಿದ್ದು ಸಮುದ್ರ ಮಟ್ಟದಿಂದ ಸರಾಸರಿ ೬೦೦ ಮೀ. ಎತ್ತರ ಇದ್ದು ಒಣ ಹವೆಯಿಂದ ಕೂಡಿರುತ್ತದೆ. ಜಿಲ್ಲೆಯ ಈಶಾನ್ಯ ಭಾಗದಲ್ಲಿ ಅಲ್ಲಲ್ಲಿ ದಟ್ಟವಾದ ಅರಣ್ಯಗಳು ಕಂಡುಬಂದರೆ ಆಗ್ನೇಯ ಭಾಗದಲ್ಲಿ ಇರುವದು ಬಹುತೇಕ ಕುರಚಲ ಕಾಡು, ಉರುವಲಕ್ಕೆ (ಜಲಾವ) ಮಾತ್ರ ಉಪಯುಕ್ತ. ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶ (೧೬,೨೨೪ ಚ.ಕಿ.ಮೀ)ದ ಶೇ. ಏಳರಷ್ಟು ಭಾಗ ಎಂದರೆ ೧,೧೩೮ ಚ.ಕಿ.ಮೀ ಪ್ರದೇಶವನ್ನು ಮಾತ್ರ ಅರಣ್ಯಪ್ರದೇಶವೆಂದು ವರ್ಗೀಕರಿಸಲಾಗಿದೆ. ಒಟ್ಟು ಅರಣ್ಯಪ್ರದೇಶದ ಕಾಯ್ದಿರಿಸಿದ ಅರಣ್ಯ ೩೪೬ ಚ.ಕಿ.ಮೀ, ಗ್ರಾಮೀಣ ಅರಣ್ಯ ಏಳು ಚ.ಕಿ.ಮೀ ಹಾಗೂ ಉಳಿದ ಅರಣ್ಯ ಪ್ರದೇಶ (೭೮೬ ಚ.ಕಿ.ಮೀ) ವರ್ಗೀಕರಿಸದ ಅರಣ್ಯವಾಗಿದೆ.

## ವ್ಯವಸಾಯ ಮತ್ತು ಬೆಳೆಗಳು

ಒಂದು ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ನಿರ್ವಹಿಸುವಲ್ಲಿ ಕೃಷಿ ಅಥವಾ ಒಕ್ಕಲುತನ ಬಹುಮಹತ್ವದ ಪಾತ್ರವನ್ನು ವಹಿಸುವದು. ಕೋಟಿ ವಿದ್ಯಗಿಂತಲೂ ಮೇಟಿ ವಿದ್ಯೆ ಮಿಗಿಲು ಎಂದು ಸರ್ವಜ್ಞ ಕವಿಯು ಒಕ್ಕಲುತನದ ಮಹತ್ವವನ್ನು ಬಹು ಹಿಂದೆಯೇ ಒತ್ತಿ ಹೇಳಿರುವನು. ರಾಜ್ಯದ ಪ್ರತಿಶತ ೬೫ ರಷ್ಟು ದುಡಿಮೆಯ ಫಲವು ಕೃಷಿ ಮತ್ತು ಸಂಬಂಧಿತ ವಲಯಗಳದ್ದಾಗಿದ್ದು, ಈ ವಲಯಗಳು ಇಂದಿಗೂ ಪ್ರಧಾನ ಪಾತ್ರವನ್ನು ವಹಿಸುತ್ತಿವೆ. ವ್ಯವಸಾಯಕ್ಕೆ ಪೂರಕವಾಗಿ ಬೇಕಾಗುವ ಅನೇಕ ಅತ್ಯಾವಶ್ಯಕಗಳಲ್ಲಿ ಪ್ರಮುಖವಾಗಿ ನೀರಾವರಿಯು ಆರ್ಥಿಕ ಅಭಿವೃದ್ಧಿಯನ್ನು ಹೆಚ್ಚಿಸುವಲ್ಲಿ ಗಮನಾರ್ಹ ಪಾತ್ರವನ್ನು ವಹಿಸುವುದು.

ಗುಲಬರ್ಗಾ ಜಿಲ್ಲೆಯಲ್ಲಿ ೧೯೯೫-೯೬ರಲ್ಲಿ ಒಟ್ಟು ಭೌಗೋಳಿಕ ವಿಸ್ತೀರ್ಣ ೧೬,೧೦,೨೦೮ ಆಗಿದ್ದು ಆ ಪೈಕಿ ಅರಣ್ಯ ಪ್ರದೇಶ ೬೮,೭೫೯ ಹೆ.; ಸಾಗುವಳಿಗೆ ಲಭ್ಯವಿಲ್ಲದ ಪ್ರದೇಶ ೧,೨೧,೮೫೦ ಹೆ.; ಸಾಗುವಳಿ ಮಾಡದಿರುವ ಇತರ ಬೀಳು ಭೂಮಿ ೫೧,೨೪೮ ಹೆ.; ಮತ್ತು ಬೀಳು ಭೂಮಿ ೧,೭೪,೩೬೫ ಹೆ.; ಆಗಿದೆ. ಇದರಲ್ಲಿ ನಿವ್ವಳ ಬಿತ್ತನೆಯಾದ ಪ್ರದೇಶವು

೧೧,೯೩,೯೮೨ ಹೆ.; ಆಗಿತ್ತು. ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶದ ಶೇ. ೮೦ ರಷ್ಟು ಭಾಗದಲ್ಲಿ ಬಿತ್ತನೆಯಾಗಿತ್ತು.

**ಗುಲಬರ್ಗಾ ಜಿಲ್ಲೆಯ ಪ್ರಮುಖ ಬೆಳೆಗಳು**

ಜಿಲ್ಲೆಯಲ್ಲಿ ಕೃಷಿ ಬೆಳೆಗಳಿಗೆ ಉಪಯುಕ್ತವಾದ ಮಣ್ಣು ಇದೆ. ಕರೆಕಲ್ಲು ಮಣ್ಣು, ಮಧ್ಯಮ ಕಪ್ಪುಮಣ್ಣು, ಆಳವಾದ ಕಪ್ಪು ಮಣ್ಣು ಇದೆ. ಇಲ್ಲಿ ಭತ್ತ, ಜೋಳ, ಸಜ್ಜೆ, ಗೋಧಿ, ತೊಗರಿ, ಕಡಲೆ, ಸೇಂಗಾ, ಸೂರ್ಯಕಾಂತಿ, ಕುಸುಬೆ, ಎಳ್ಳು, ಹತ್ತಿ, ಕಬ್ಬು ಇತ್ಯಾದಿ ಪ್ರಮುಖ ಬೆಳೆಗಳಾಗಿವೆ.

**ಕೈಗಾರಿಕೆಗಳು**

ಗುಲಬರ್ಗಾ ಜಿಲ್ಲೆಯು ಕೈಗಾರಿಕೆಯಲ್ಲಿ ರಾಜ್ಯದಲ್ಲಿ ಹಿಂದುಳಿದಿರುವ ಜಿಲ್ಲೆಗಳಿಲ್ಲಿ ಒಂದಾಗಿದೆ. ಕೈಗಾರಿಕಾ ಬೆಳವಣಿಗೆಗೆ ಸಂಬಂಧಿಸಿದಂತೆ ಇದು ರಾಜ್ಯದಲ್ಲಿ ೧೨ನೇ ಸ್ಥಾನದಲ್ಲಿದೆ. ಜಿಲ್ಲೆಯಲ್ಲಿ ಕಚ್ಚಾ ಸರಕು ಹಾಗೂ ಆಂತರಿಕ ಸಾಧನ ಸೌಲಭ್ಯಗಳ ಕೊರತೆ ಇಲ್ಲದಿದ್ದರೂ ಕೈಗಾರಿಕಾ ಅಭಿವೃದ್ಧಿಯಲ್ಲಿ ನಿರೀಷಿತ ಮಟ್ಟವನ್ನು ತಲುಪದಿರುವದಕ್ಕೆ ಬಹುಮಟ್ಟಿನ ಕಾರಣ ಕೈಗಾರಿಕೋದ್ಯಮಿಗಳ ಕೊರತೆ ಎಂದು ತೋರುವದು. ಜಿಲ್ಲೆಯಲ್ಲಿ ಸ್ವಾಭಾವಿಕ ಸಂಪನ್ಮೂಲಗಳಾದ ನದಿಗಳು, ಅರಣ್ಯಗಳು, ಖನಿಜಗಳು ಮತ್ತು ವ್ಯವಸಾಯಕ್ಕೆ ಯೋಗ್ಯವಾದ ಭೂಮಿಗಳಿದ್ದರೂ ಜಿಲ್ಲೆಯ ಆರ್ಥಿಕ ಪ್ರಗತಿಗೆ ನದಿಗಳ ಮತ್ತು ಅರಣ್ಯಗಳ ಕೊಡುಗೆ ಅತ್ಯಲ್ಪದ್ದಾಗಿದೆ. ಜಿಲ್ಲೆಯಲ್ಲಿ ದೊರಕುವ ಸುಣ್ಣ ಕಲ್ಲು, ರೆಡ್‌ಅಕರ್, ಕ್ವಾರ್ಟ್ಸ್ ಫುಲ್ಲರ್ಸ್ ಅರ್ಥ, ಜೇಡಿ ಮಣ್ಣು, ಬಳಪದ ಕಲ್ಲು, ಮೊದಲಾದ ಪ್ರಮುಖ ಖನಿಜಗಳು ಕೈಗಾರಿಕಾ ಬೆಳವಣಿಗೆಗೆ ನೆರವನ್ನೊದಗಿಸಿವೆ. ಜಿಲ್ಲೆಯಲ್ಲಿ ಹಲವಾರು ದೊಡ್ಡ ಪ್ರಮಾಣದಲ್ಲಿ ಸಿಮೆಂಟ್ ಕಾರ್ಖಾನೆಗಳು, ಬಟ್ಟೆ ಗಿರಣಿಗಳು, ಇದ್ದು ಹಲವಾರು ಜನ ಕಾರ್ಮಿಕರಿಗೆ ಉದ್ಯೋಗವನ್ನು ಒದಗಿಸಿವೆ.

**ಸಾರಿಗೆ ಮತ್ತು ಸಂಪರ್ಕ**

ಒಂದು ಪ್ರದೇಶದ ಆರ್ಥಿಕ ಮತ್ತು ವಾಣಿಜ್ಯ ಬೆಳವಣಿಗೆಯಲ್ಲಿ ಸಂಪರ್ಕ ಸಾಧನಗಳು ಬಹು ಮುಖ್ಯ ಪಾತ್ರವನ್ನು ವಹಿಸುವವು. ವಿಜ್ಞಾನ ಹಾಗೂ ತಾಂತ್ರಿಕ ಆವಿಷ್ಕಾರಗಳಿಂದ

ಸಂಪರ್ಕ ಸಾಧನಗಳಲ್ಲಿ ಸಾಕಷ್ಟು ಸುಧಾರಣೆ ಆಗಿರುವುದನ್ನು ನಾವು ಕಾಲದ ಉದ್ದಕ್ಕೂ ಗಮನಿಸಬಹುದು. ಗುಲಬರ್ಗಾವು (ಕಲಬುರ್ಗಿ) ಚರಿತ್ರೆಯಲ್ಲಿ ಮಹತ್ವದ ಸ್ಥಾನ ಗಳಿಸಲು ಸಂಪರ್ಕ ವ್ಯವಸ್ಥೆಯು ಒಂದು ಬಹು ಮುಖ್ಯ ಕಾರಣವಾಗಿದ್ದಿರಬಹುದು.

ಗುಲಬರ್ಗಾ ಜಿಲ್ಲೆಯ ಮೂಲಕ ಎರಡು ಮುಖ್ಯವಾದ ರೈಲು ಮಾರ್ಗಗಳು ನಿರ್ಮಿಸಲ್ಪಟ್ಟು ಜಿಲ್ಲೆಯ ಅನೇಕ ಭಾಗಗಳಿಗೆ ಕಲ್ಪಿಸಲಾಗಿತ್ತು. ೧೯೦೫ ರಲ್ಲಿ ಅಂದಿನ ಗುಲಬರ್ಗಾ ಜಿಲ್ಲೆಯಲ್ಲಿದ್ದ ಪ್ರಮುಖ ರಸ್ತೆಗಳ ಉದ್ದ ಸುಮಾರು ೧೨೮ ಕಿ.ಮಿ. ಮಾತ್ರ ಆಗಿತ್ತು. ೧೯೯೨ರ ವೇಳೆಗೆ ೫೭೦೩ ಕಿ.ಮಿ.ಗಳಿಗೆ ಏರಿಕೆಯಾಗಿದೆ. ಇದರಲ್ಲಿ ರಾಜ್ಯ ಹೆದ್ದಾರಿಗಳು, ಜಿಲ್ಲೆಯ ಮುಖ್ಯ ರಸ್ತೆಗಳು, ಜಿಲ್ಲೆ ಇತರೆ ರಸ್ತೆಗಳು ಹಾಗೂ ಹಳ್ಳಿಯ ರಸ್ತೆಗಳೆಂದು ವಿಂಗಡಿಸಲಾಗಿದೆ.

## ಬ್ಯಾಂಕಿಂಗ್ ವ್ಯವಸ್ಥೆ

ಒಂದು ಪ್ರದೇಶದ ಆರ್ಥಿಕ ವ್ಯವಸ್ಥೆಯನ್ನು ರೂಪಿಸುವಲ್ಲಿ ಮತ್ತು ಅಭಿವೃದ್ಧಿ ಪಡಿಸುವಲ್ಲಿ ಕೃಷಿ ಮತ್ತು ಕೈಗಾರಿಕಾ ವಲಯಗಳು ಬಹು ಪ್ರಮುಖ ಪಾತ್ರ ವಹಿಸುತ್ತವೆ. ಈ ವಲಯಗಳ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸಲು ಬೇಕಾಗುವ ಬಂಡವಾಳ, ಹಣಕಾಸಿನ ನೆರವು ಒದಗಿಸುವ ಸಂಘಟಿತ ಮತ್ತು ಅಸಂಘಟಿತ ವಲಯದ ಸಾಂಸ್ಥಿಕ ಹಣಕಾಸು ಸಂಸ್ಥೆಗಳೂ ಆಯಾ ಪ್ರದೇಶಗಳ ಆರ್ಥಿಕ, ಸಾಮಾಜಿಕ ಮತ್ತು ಜೀವನದ ಮೇಲೆ ತಮ್ಮದೇ ಪ್ರಭಾವ ಬೀರುತ್ತವೆ.

ಈ ಜಿಲ್ಲೆಯ ವಾಣಿಜ್ಯ ಬ್ಯಾಂಕಿಂಗ್ ನಕ್ಷೆಯಲ್ಲಿ ಕಂಡುಬರುವ ಮೊದಲನೆಯ ಬ್ಯಾಂಕ್ ದಿ. ಸರಸ್ವತಿ ಬ್ಯಾಂಕ್ ಆಗಿದ್ದು, ಅದು ೯-೫-೧೯೨೨ ರಂದು ಪ್ರಾರಂಭವಾಯಿತು. ಅದರನಂತರ ಜಿಲ್ಲೆಯಲ್ಲಿ ಗ್ರಾಮೀಣ ಹಾಗೂ ರಾಷ್ಟ್ರೀಯ ಬ್ಯಾಂಕುಗಳು ಹುಟ್ಟಿಕೊಂಡು ಸಾರ್ವಜನಿಕರಿಗೆ ನಿರಂತರ ಆರ್ಥಿಕ ಸಹಾಯವನ್ನು ನೀಡುತ್ತಿವೆ.

## ಆರೋಗ್ಯ

ಸಾಮಾನ್ಯವಾಗಿ ಒಣ ಹಾಗೂ ಆರೋಗ್ಯಕರವಾದ ಹವಾಮಾನ ಹೊಂದಿರುವ ಗುಲಬರ್ಗಾ ಜಿಲ್ಲೆಯು ರಾಜ್ಯ ಪುನರ್ಘಟನೆ ಪೂರ್ವದಲ್ಲಿ ಹಿಂದಿನ ಹೈದರಾಬಾದ ರಾಜ್ಯದ ಒಂದು

ಭಾಗವಾಗಿದ್ದು ಆರೋಗ್ಯ ಹಾಗೂ ವೈದ್ಯಕೀಯ ಸೇವೆಗಳ ಮಾಹಿತಿ ತೀರ ಅಲ್ಪವಾಗಿದೆ ೧೮೬೯ರಲ್ಲಿ ಗುಲಬರ್ಗಾದಲ್ಲಿ ಸಿವಿಲ್ ಆಸ್ಪತ್ರೆಯು ಪ್ರಾರಂಭವಾಯಿತು. ತಾಲೂಕಾ ಕೇಂದ್ರಗಳಲ್ಲಿ ಸಿವಿಲ್ ಆಸ್ಪತ್ರೆಗಳು ಪ್ರಾರಂಭಗೊಂಡವು. ೧೯೫೫ರಲ್ಲಿ ಜಿಲ್ಲೆಯಲ್ಲಿ ೧೨ ಸಾರ್ವಜನಿಕ ಆಸ್ಪತ್ರೆಗಳು, ಒಂದು ವೈದ್ಯಕೀಯ ಸಂಸ್ಥೆ, ೯೨ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ೨೫ ಪ್ರಾಥಮಿಕ ಆರೋಗ್ಯ ಘಟಕಗಳು, ೪ ಭಾರತೀಯ ವೈದ್ಯ ಪದ್ಧತಿಯ ಆಸ್ಪತ್ರೆಗಳು ಮತ್ತು ಅವುಗಳಲ್ಲಿ ಲಭ್ಯವಿರುವ ಒಟ್ಟು ಹಾಸಿಗೆಗಳ ಸಂಖ್ಯೆ ೨,೦೬೦ ಆಗಿದೆ. ಇವುಗಳಿಗೆ ಹೊರತಾಗಿ ೧೧ ಔಷಧಾಲಯಗಳು, ೨೯ ಕುಟುಂಬ ಕಲ್ಯಾಣ ಕೇಂದ್ರಗಳು, ೬೪೭ ಉಪ ಕೇಂದ್ರಗಳು ಹಾಗೂ ಖಾಸಗಿ ಕ್ಷೇತ್ರದಲ್ಲಿ ನೂರಾರು ಶುಶ್ರುಷಾ ಕೇಂದ್ರಗಳು ಹಾಗೂ ೪೫೯ ಮಾರಾಟ ಅಂಗಡಿಗಳು ಇವೆ(ಅನುಬಂಧ ೩ ನೋಡಿ).

**ಗುಲಬರ್ಗಾ ಜಿಲ್ಲೆಯ ಸಂಸ್ಕೃತಿ**

ಹೈದರಾಬಾದ್ ಕರ್ನಾಟಕ ಪ್ರದೇಶದ ಜಿಲ್ಲೆಗಳನ್ನು ಪರಿಗಣಿಸಿದರೆ ಗುಲಬರ್ಗಾ ಜಿಲ್ಲೆ ಸಾಂಸ್ಕೃತಿಕವಾಗಿ ಶ್ರೀಮಂತ ಪರಂಪರೆ ಹೊಂದಿದೆಯೆಂದು ಹೇಳಬಹುದು. ರಾಷ್ಟ್ರಕೂಟರ ಕಾಲದಲ್ಲಿ ಪ್ರಾಕೃತ ; ಸಂಸ್ಕೃತ ಸಾಹಿತ್ಯದೊಂದಿಗೆ ಕನ್ನಡ ಸಾಹಿತ್ಯಕ್ಕೂ ಸಾಕಷ್ಟು ಪ್ರೋತ್ಸಾಹ ದೊರೆಯಿತು. ನಂತರ ಆಯಾ ಕಾಲದ ಸಾಹಿತ್ಯದ ಬೆಳವಣಿಗೆಗಳು ಜಿಲ್ಲೆಯಲ್ಲಿ ಮುಂದುವರೆದವು ವೀರಶೈವ ವಚನಕಾರ ಪರಂಪರೆ ಕಲ್ಯಾಣ ನಾಡಿನ ಈ ಭಾಗದಲ್ಲಿ ಕಾಣಿಸಿಕೊಂಡಿದ್ದು ಇಂದಿಗೂ ಶೈವ ಪರವಾದ ಮಠ ಮಾನ್ಯಗಳು ಸಾಂಸ್ಕೃತಿಕ ಕ್ಷೇತ್ರಕ್ಕೆ ತಮ್ಮ ಕಾಣಿಕೆಗಳನ್ನು ನೀಡುತ್ತವೆ. ಕನ್ನಡದ ಪ್ರಥಮ ಕಾವ್ಯ ಕವಿರಾಜ ಮಾರ್ಗ ರಚಿತವಾಗಿದ್ದು ಈ ಜಿಲ್ಲೆಯಲ್ಲಿ. ನ್ಯಾಯಾ ಶಾಸ್ತ್ರದಲ್ಲಿ ಆಕರ ಗ್ರಂಥವಾದ ಮಿತಾಕ್ಷರದ ಕೃತಿಕಾರ ವಿಜ್ಞಾನೇಶ್ವರ ಈ ಜಿಲ್ಲೆಯವನು. ಕನ್ನಡ ಸಾಹಿತ್ಯದೊಂದಿಗೆ ಉರ್ದು, ಮರಾಠಿ ಹಾಗೂ ಹಿಂದಿ ಸಾಹಿತ್ಯ ಕೃಷಿಯೂ ಜಿಲ್ಲೆಯಲ್ಲಿ ಗಮನಾರ್ಹವಾಗಿ ಆಗಿವೆ. ಖಾಜಾ ಬಂದೇ ನವಾಜರು ಸ್ವತಃ ಹಲವಾರು ಗ್ರಂಥಗಳನ್ನು ರಚಿಸಿದ್ದು ಆ ಪರಂಪರೆ ಇಂದಿಗೂ ಮುಂದುವರಿದಿದೆ.

ಚಿತ್ರಕಲೆಯ ಕ್ಷೇತ್ರದಲ್ಲಿಯಂತು ಗುಲಬರ್ಗಾ ಇಡೀ ರಾಜ್ಯದ ಗಮನ ಸೆಳೆದಿವೆ. ಸ್ನಾತಕೋತ್ತರ ಮಟ್ಟದಲ್ಲಿ ಚಿತ್ರಕಲೆ ಕಲಿಯಲು ದಕ್ಷಿಣ ಭಾರತದಲ್ಲೇ ಪ್ರಥಮವಾಗಿ ಅವಕಾಶವಾದುದು ಇಲ್ಲಿಯ ವಿಶ್ವವಿದ್ಯಾಲಯದಲ್ಲಿ ಎಂದು ಹೇಳಿದರೆ ತಪ್ಪಾಗಲಾರದು.

ಕಳೆದ ೩-೪ ದಶಕಗಳಲ್ಲಿ ರಂಗ ಭೂಮಿಯು ಕೂಡ ಗಮನಾರ್ಹವಾಗಿ ಬೆಳೆದಿದೆ. ನಾಟಕ ತಂಡಗಳು ಉದಯವಾಗಿ ನಿರಂತರವಾಗಿ ನಾಟಕ ಪ್ರಯೋಗಗಳು ರಂಗಮಂದಿರದಲ್ಲಿ ನಡೆಯುತ್ತವೆ. ಸಂಗೀತವು ಕನಿಷ್ಠ ೩೦ ವರ್ಷಗಳ ಹಾದಿಯನ್ನು ಪ್ರವಹಿಸಿದೆ. ರಾಜ್ಯ ಮಟ್ಟದಲ್ಲಿ ಮಾನ್ಯತೆ ಪಡೆದಿರುವ ಹಲವಾರು ಪ್ರಸಿದ್ದ ಸಂಗೀತಗಾರರು ಈ ಜಿಲ್ಲೆಯಲ್ಲಿದ್ದಾರೆ.

ಜನಪದ ಕಲೆಗಳು ವೈವಿಧ್ಯಮಯವಾಗಿ ಜಿಲ್ಲೆಯಾದ್ಯಂತ ಜೀವಂತವಿರುವುದಲ್ಲದೆ, ವಿಶ್ವವಿದ್ಯಾಲಯದ ಪ್ರಾಧ್ಯಾಪಕರುಗಳು ವ್ಯವಸ್ಥಿತವಾಗಿ ಜಾನಪದದ ಬಹುಮುಖಗಳನ್ನು ಅಧ್ಯಯನ ಮಾಡುತ್ತಿದ್ದಾರೆ.

ಗುಲಬರ್ಗಾ ಜಿಲ್ಲೆಯು ಶ್ರೀಮಂತ ಸಂಸ್ಕೃತಿಯನ್ನು ಹೊಂದಿದೆ. ಸಂಗೀತ ಕ್ಷೇತ್ರದಲ್ಲಿ ಸಿದ್ದರಾಮ ಜಂಬಲದಿನ್ನಿ, ನಾಟಕ ಕ್ಷೇತ್ರದಲ್ಲಿ ಗರುಡ ಸದಾಶಿವರಾಯರು ಹಾಗೂ ಗಿರಡ್ಡಿ ಗೋವಿಂದರಾಜ, ಜನಪದ ಸಂಶೋಧನೆಯಲ್ಲಿ ಬಿ.ಬಿ. ಹೆಂಡಿ, ಎಂ.ಎಸ್. ಲಠ್ಠೆ, ನೃತ್ಯದಲ್ಲಿ ಶುಭಾಂಗಿ, ಶಿಲ್ಪಕಲೆಯಲ್ಲಿ ಧನಂಜಯ ಶಿಲ್ಪಿ, ಪ್ರೊ.ರಾಜಾ ಹನುಮಣ್ಣನಾಯಕ ದೊರೆ ಹಿಂದೂಸ್ಥಾನಿ ಸಂಗೀತ ಗಮನಿಸಿ ಮುಂತಾದವರು ರಾಜ್ಯದ ಇತರ ಜಿಲ್ಲೆಗಳಿಂದ ಬಂದು ಇಲ್ಲಿಯ ಆಯಾ ಸಾಂಸ್ಕೃತಿಕ ಕ್ಷೇತ್ರಕ್ಕೆ ಹೊಸ ತಿರುವು ನೀಡಿದರು. ಅಂತೆಯೇ ಜಿಲ್ಲೆಯಿಂದ ಹೊರ ಹೋಗಿ ಸಾಂಸ್ಕೃತಿಕ ಕ್ಷೇತ್ರಕ್ಕೆ ಗಣನೀಯ ಕಾಣಿಕೆ ನೀಡಿದವರಲ್ಲಿ ಆಧ್ಯಾತ್ಮಿಕ ಕ್ಷೇತ್ರದ ವರದಹಳ್ಳಿ ಶ್ರೀಧರ ಸ್ವಾಮಿಗಳು, ಇತಿಹಾಸ ಸಂಶೋಧಕ ಹಾಗೂ ಬರಹಕಾರರಾದ ಸೇತು ಮಾಧವರಾವ್ ಪಗಡಿ, ಮತ್ತು ಸೀತಾರಾಮ ಜಹಗೀರ್‌ದಾರ್ ಪ್ರಮುಖರಾಗಿದ್ದಾರೆ. ಇದಲ್ಲದೇ ಜಿಲ್ಲೆಯಲ್ಲಿಯೇ ಹುಟ್ಟಿ ಬೆಳೆದ ಆಯಾ ಕ್ಷೇತ್ರದಲ್ಲಿ ಅರ್ಪಿಸಿಕೊಂಡ ನೂರಾರು ಕ್ರಿಯಾಶೀಲ ವ್ಯಕ್ತಿಗಳಿಗೆ ಜನ್ಮಕೊಟ್ಟ ಈ ಜಿಲ್ಲೆಯೇ ಧನ್ಯ ಎಂದು ಹೇಳಬಹುದು.

## ಸಾಹಿತ್ಯ

ಗುಲಬರ್ಗಾ ಜಿಲ್ಲೆ ಇತಿಹಾಸದ ಆರಂಭ ಕಾಲದಿಂದಲೂ ಹಲವಾರು ರಾಜ ಮನೆತನಗಳಿಗೆ ನೆಲೆವಿಡಾಗಿತ್ತು. ಹಾಗೂ ರಾಜರುಗಳು ಪಂಡಿತ ವರ್ಗಗಳಿಗೆ ಉದಾರವಾಗಿ ನೆರವು ನೀಡಿದ್ದರು. ಜಿಲ್ಲೆಯ ಇಂದಿನ ಮಳಖೇಡವು ಇತಿಹಾಸ ಪ್ರಸಿದ್ದ ಮಾನ್ಯಖೇಟವೆಂದು ಗುರುತಿಸಲಾಗಿದ್ದು,

ಇದು ರಾಷ್ಟ್ರಕೂಟರ ನಂತರದ ಕಲ್ಯಾಣಿ ಚಾಳುಕ್ಯರ ರಾಜಧಾನಿಯಾಗಿತ್ತೆಂದು ತಿಳಿಯಲಾಗಿದೆ. ಚಕ್ರವರ್ತಿಗಳು, ಮಾಂಡಳಿಕರೂ ಹಲವಾರು ಸೃಜನಶೀಲ ಕವಿ, ಸಾಹಿತಿ, ಪಂಡಿತರಿಗೆ ಆಶ್ರಯ ನೀಡಿದ್ದು, ಪ್ರಾರಂಭಕಾಲದ ಸಾಹಿತ್ಯ ಪರಂಪರೆಯು ಔನತ್ಯವನ್ನು ಕಾಣುವಂತಾಯಿತು.

**ಶಾಸನ ಕವಿಗಳು**

ಜಿಲ್ಲೆಯ ಅನೇಕ ಶಾಸನಗಳು ಕಾವ್ಯಾತ್ಮಕವಾಗಿದ್ದು "ಅತಿಶಕ್ವರಿ"ಯಂಥಹ ಅಪರೂಪದ ಛಂದೋ ಪ್ರಕಾರಗಳಲ್ಲದೆ, ಖ್ಯಾತ ಕರ್ಣಾಟಕ ವೃತ್ತಗಳು, ಕಂದಪದ್ಯಗಳು ಸಹ ಕಾಣಿಸಿಗುತ್ತವೆ. ಏವೂರು, ಹೆಮ್ಮಡಿಗೆ ಶಾಸನಗಳು ಪಟ್ಟ ಚಂಪೂಕಾವ್ಯದಂತೆ ಇವೆ. ಹಲವಾರು ಕಡೆಗಳಲ್ಲಿ ಗದ್ಯವೂ ಕಾವ್ಯ ಶೈಲಿಯಲ್ಲಿರುವುದು ಕಾಣಬಹುದು. ಅಡಕಿ, ಏವೂರು, ಆಳಂದ, ಹುಣಸಿ, ಹಡಗಲಿ, ಸೇಡಂ, ಕಾಳಗಿ, ಹರಸೂರು, ನಿಂಬರಿಗೆ, ಮರ್ತೂರು ಇತ್ಯಾದಿ ಹತ್ತು ಶಾಸನಗಳಲ್ಲಿ ಛಂದೋ ಬದ್ಧವಾದ ರಚನೆಯನ್ನು ಕಾಣಬಹುದು. ಹಲವಾರು ಶಾಸನ ಕವಿಗಳಿಗೆ ಬಿರುದು ಬಾವಲಿಗಳು ಇವೆ. ಇಂಗಳಿಗಿ ನಾಗಾರ್ಜುನ ಪಂಡಿತರಿಗೆ "ವಾಗ್ವಾಧೂ ನಂದನ " ಎಂದು ಬೋಧನೆದ ಮಾಧವ ಕವಿಗೆ "ಅವಧಾನ ನಿಧಾನ ವಾಕ್ರೀಧವ " ಎಂಬ ಬಿರುದುಗಳಿದ್ದವು.

**ಅಪಭ್ರಂಶ ಸಾಹಿತ್ಯ**

ರಾಷ್ಟ್ರಕೂಟರ ಕಾಲದಲ್ಲಿ ಸಂಸ್ಕೃತ ಸಾಹಿತ್ಯ ರಚನೆ ವಿಪುಲವಾಗಿ ಆಯಿತಾದರೂ ಅಪಭ್ರಂಶ ಸಾಹಿತ್ಯ ಇನ್ನೂ ಅಸ್ತಿತ್ವದಲ್ಲಿತ್ತು. ಧ್ರುವರಾಜನ ಆಸ್ಥಾನದಲ್ಲಿದ್ದ ಸ್ವಯಂಭೂ ಎಂಬಾತ ರಾಮಾಯಣ ಕಥಾನಕಗಳ ಪದ್ಮಚರಿತ, ಮಹಾಭಾರತ ಕಥೆಯ ಹರಿವಂಶ ಪುರಾಣ ಹಾಗೂ ನಾಗಕುಮಾರ ಚರಿತೆಯನ್ನು ಅಪಭ್ರಂಶದಲ್ಲಿ ರಚಿಸಿದ್ದಾನೆ. ತನ್ನ ಹೆಸರಿನಲ್ಲಿ ಸ್ವಯಂಭೂ ಛಂದಸ್ಸನ್ನು ಬರೆದಿದ್ದಾನೆ. ಆತನ ಕಾವ್ಯಗಳು ಅಪೂರ್ಣವಾಗಿದ್ದು ಆತನ ಮಗ ತ್ರಿಭುವನ ಸ್ವಯಂಭೂ ಪೂರ್ತಿಗೊಳಿಸಿದ ತ್ರಿಶಷ್ಠ ಪುರಾತ ಗುಣಾಲಂಕಾರ ಅಥವಾ ಮಹಾಪುರಾಣ ನಾಗಕುಮಾರ ಚರಿತ, ಹಾಗೂ ಯಶೋಧರ ಚರಿತೆ ರಚಿಸಿದನು. ಮಹಾಪುರಾಣದಲ್ಲಿ ಮೂರು ಸಂಧಿಗಳಿದ್ದು ಪ್ರಥಮ ಚಕ್ರವರ್ತಿ, ಭರತನ ಜೀವನ ಸಾಧನೆಗಳನ್ನು ಚಿತ್ರಿಸಿದ್ದಾನೆ. ಮಳಖೇಡ

ನಗರದ ಯೋಧರ, ಜನ ಸಾಮಾನ್ಯರ ಕುರಿತು ಅನೇಕ ವಿವರಗಳು ಈತನ ಕಾಲದಲ್ಲಿ ದೊರೆಯುತ್ತವೆ.

## ಸಂಸ್ಕೃತ ಸಾಹಿತ್ಯ

ರಾಷ್ಟ್ರಕೂಟರ ಅರಸರು ಕವಿಗಳಿಗೆ, ಸಾಹಿತ್ಯಿಗಳಿಗೆ ಮತ್ತು ಕಲಾಕಾರರಿಗೆ ಆಶ್ರಯ ನೀಡಿದ್ದರು. ಸಂಸ್ಕೃತದಲ್ಲಿ ಉಪಲಬ್ದವಿರುವ ಚಂಪುಕಾವ್ಯಗಳಲ್ಲಿ ಪ್ರಥಮವೆನಿಸಿರುವ ನಳಚಂಪುವಿನ ಕರ್ತೃ ತ್ರಿವಿಕ್ರಮ ಮೂರನೇ ಇಂದ್ರನ ಆಶ್ರಯದಲ್ಲಿ ಇದ್ದನು. ಅಮೋಘವರ್ಷ ನೃಪತುಂಗನ ಪ್ರಶ್ನೋತ್ತರ ರತ್ನಮೂಲಿಕಾ ರಚಿಸಿದ್ದಾಗಿ ತಿಳಿದು ಬಂದಿದೆ. ಮೂರನೇ ಕೃಷ್ಣನ ಆಶ್ರಿತ ಹಲಾಯುಧ ಹಲಾಯುಧ ಕೋಶ, ಕವಿ ರಹಸ್ಯ ಮೃತ ಸಂಜೀವಿನಿ ಇತ್ಯಾದಿ ಕೃತಿಗಳನ್ನು ರಚಿಸಿದ್ದಾನೆ.

ಸುರುಪುರದ ದೊರೆಗಳು ಮತ್ತೆ ಸಂಸ್ಕೃತ ಪಂಡಿತರಿಗೆ ಆಶ್ರಯ ನೀಡಿದ್ದರು. ಮುಮ್ಮಡಿ ರಾಮರಾಯನ ಆಸ್ಥಾನದಲ್ಲಿ ಶ್ರೀನಿವಾಸಚಾರ್ಯ ಮತ್ತು ಅಣ್ಣಯ್ಯಚಾರ್ಯರೆಂಬ ಸಂಸ್ಕೃತ ಪಂಡಿತರಿದ್ದು, ಶ್ರೀನಿವಾಸಚಾರ್ಯರು ವೇದಾಂತ ಗ್ರಂಥಗಳಾದ ತತ್ವಮಾರ್ತಂಡ, ನಯದ್ಯಮಣಿ, ಹರಿಗುಣಿ, ಮಣಿದರ್ಪಣ, ದೇವತಾ ಪ್ರಸಾದ ದರ್ಪಣ ಇತ್ಯಾದಿಯಾಗಿ ಇಪ್ಪತ್ತಕ್ಕೂ ಹೆಚ್ಚು ಗ್ರಂಥಗಳನ್ನು ರಚಿಸಿದ್ದಾರೆ. ವಿಶಿಷ್ಟಾದ್ವೈತದಲ್ಲಿ ಹಲವಾರು ಭಾಷೆಗಳನ್ನು ರಚಿಸಿರುವ ನಿಗಮಾಂತ ದೇಶಿಕಾಚಾರ್ಯರು, ಶ್ರೀನಿವಾಸಚಾರ್ಯರ ಬಳಿ ತಮ್ಮ ಗ್ರಂಥಗಳನ್ನು ಪರಿಷ್ಕರಿಸಿಕೊಂಡರೆಂದು ಪ್ರತೀತಿ ಇದೆ. ಅಣ್ಣಯ್ಯಚಾರ್ಯರ ಕೃತಿಗಳಲ್ಲಿ ವಿವರ ತಿಳಿದು ಬರುವದಿಲ್ಲ. ಆದರೆ ಅವರ ಮಗ ಕಿರೀಟ ವೆಂಕಟಚಾರ್ಯರು ಇಮ್ಮಡಿ ವೆಂಕಟಪ್ಪನಾಯಕನ ಆಸ್ಥಾನದಲ್ಲಿದ್ದವರು. ಇವರು ಗಜ ಸೂತ್ರಾರ್ಥವಾದಮ್ ಎಂಬ ವ್ಯಾಕರಣ ಗ್ರಂಥ, ಸಿದ್ಧಾಂತ ಚಿಂತಾಮಣಿ ಎಂಬ ವೇದಾಂತ ಗ್ರಂಥ, ಇತ್ಯಾದಿ ಹಲವಾರು ಗ್ರಂಥಗಳನ್ನು ರಚಿಸಿದ್ದಾರೆ. ಅವರು ನಾನಾಘಡ್ನವಿಸನಲ್ಲಿ ನೆಲೆ ನಿಂತು ಪಂಡಿತರನ್ನು ವಾದದಲ್ಲಿ ಸೋಲಿಸಿ ಕಿರೀಟ ಧಾರಣೆ ಮಾಡಿದ್ದರು. ಈ ಕಾಲದ ಹೆಬ್ಬಾಳ ರಾಮಶಾಸ್ತ್ರಿ ಅವರು ಜ್ಯೋತಿಷ್ಯ ಶಾಸ್ತ್ರ ನಿಪುಣರಾಗಿದ್ದರು. ಅವರ ವಂಶಜರು ಇಂದಿಗೂ ಸುರಪುರದ ಪಂಚಾಗವನ್ನು ಪ್ರಕಟಿಸುತ್ತಾರೆ.

## ಕನ್ನಡ ಸಾಹಿತ್ಯ

**೧. ಪ್ರಾರಂಭ ಕಾಲ :** ರಾಷ್ಟ್ರಕೂಟರು ಸಂಸ್ಕೃತ ಭಾಷೆಗೆ ನೀಡಿದಷ್ಟೆ ಪ್ರೋತ್ಸಾಹ ಕನ್ನಡ ಸಾಹಿತ್ಯ ರಚನೆಗೂ ನೀಡಿದ್ದು ಕನ್ನಡ ಸಾಹಿತ್ಯ ವಿಶೇಷವಾಗಿ ಚಂಪು-ಸಾಹಿತ್ಯ ರಚನೆಯಾಗುವಂತಾಯಿತು. ಲಭ್ಯವಿರುವ ಪೂರ್ಣ ಪ್ರಮಾಣದ ಮೊದಲ ಕನ್ನಡದ ಕೃತಿಯಾದ ಕವಿರಾಜ ಮಾರ್ಗ ಇವರ ಕಾಲದಲ್ಲಿ ರಚನೆಯಾಯಿತು.

ಕವಿರಾಜ ಮಾರ್ಗ ದಂಡಿಯ ಸಂಸ್ಕೃತದ ಕಾವ್ಯದರ್ಶ ಕೃತಿಯ ಆಧಾರದ ಮೇಲೆ ರಚಿತವಾಗಿರುವ ಲಕ್ಷಣ ಗ್ರಂಥವಾದರೂ, ಇದರಲ್ಲಿ ಕನ್ನಡ ನಾಡು, ನುಡಿ, ಸಾಹಿತ್ಯ, ಜನಜೀವನ ಇತ್ಯಾದಿ ಮಹತ್ವದ ಸಂಗತಿಗಳು ದೊರೆಯುತ್ತವೆ. ಈ ಕೃತಿಯನ್ನು ರಾಷ್ಟ್ರಕೂಟ ಅರಸನಾದ ನೃಪತುಂಗನೇ ರಚಿಸಿದ್ದಾನೆಂದು ಇದುವರೆಗೆ ಭಾವಿಸಲಾಗಿತ್ತು. ಆದರೆ ಅದನ್ನೂ ಶ್ರೀವಿಜಯ ನೆಂಬಾತನು ರಚಿಸಿದ್ದಾನೆಂದು ಇತ್ತೀಚೆಗೆ ತಿಳಿದುಬಂದಿದೆ.

ಗುಲಬರ್ಗಾ ಜಿಲ್ಲೆಯವನೆಂದು ಹೇಳುವ ಪ್ರಮುಖ ಕವಿಯೆಂದರೆ ಜೈಮಿನಿ ಭಾರತದ ಲಕ್ಷ್ಮೀಶ. ಈತನು ತನ್ನ ಕಾವ್ಯದಲ್ಲಿ ದೇವನೂರು ಎಂದು ಬರೆಯದೇ ದೇವಪುರವೆಂದೆ ಹಲವಾರು ಬಾರಿ ಹೇಳಿರುವುದು. ಛಾಯಾ ಭಗವತಿಯನ್ನು ಪ್ರಸ್ತಾಪಿಸಿರುವದು. ಇತ್ಯಾದಿ ಹಲವಾರು ಕಾರಣಗಳಿಂದ ಲಕ್ಷ್ಮೀಶನ ಊರು ಸುರುಪುರದ ದೇವಪುರವೆಂದೇ ವಿದ್ವಾಂಸರ ಅಭಿಪ್ರಾಯ. ಮತ್ತೊಬ್ಬ ವಿದ್ವಾಂಸ ನಾಗರಾಜ ಈತ ಅಫಜಲಪುರದ ಮಾಸಿವಾಳದವರು. ಈತನು ಸಗರ ನಾಡಿನ ಕೋರಿಕೆಯ ಮೇರೆಗೆ ಪುಣ್ಯಾಸ್ರವ ಎಂಬ ಗ್ರಂಥವನ್ನು ರಚಿಸಿದ್ದಾನೆಂದು ತಿಳಿಸುತ್ತಾನೆ.

**೨. ವಚನಕಾರರು :** ೧೧ನೇ ಶತಮಾನದ ಅಂತ್ಯದಲ್ಲಿಯೇ ಕಂಡುಬರುವ ವಚನಕಾರರ ಚಳವಳಿ ಗುಲಬರ್ಗಾ ಜಿಲ್ಲೆಯಿಂದಲೇ ಆರಂಭಗೊಂಡಂತೆ ಕಂಡುಬರುತ್ತದೆ. ಬಸವ ಪೂರ್ವ ಯುಗದಲ್ಲೇ ವಚನಗಳ ಆದ್ಯನೆಂದು ಕರೆಯಲಾಗಿರುವ ಜೇಡರ ದಾಸಿಮಯ್ಯ ಸುರಪುರ ತಾಲೂಕಿನ ಮುದನೂರಿನಾತ. ರಾಮನಾಥ ಎಂಬ ಅಂಕಿತದಿಂದ ಈತ ರಚಿಸಿರುವ ೧೫೦ ವಚನಗಳು ದೊರೆತಿವೆ. ಚಿಮ್ಮಲಿಗೆಯ ಚಂದಿಮರಸ, ಕೆಂಭಾವಿಯ ಭೋಗಣ್ಣ, ಅವರುಗಳೂ ಕೆಂಭಾವಿ ಭೋಗಣ್ಣ ನಿಜಮಾರು ಭೋಗನಾಥ ಎಂಬ ಅಂಕಿತದಲ್ಲಿ ೨೨ ವಚನಗಳು ದೊರೆತಿವೆ.

## ಹೊಸಗನ್ನಡ ಸಾಹಿತ್ಯ

ಹೊಸಗನ್ನಡ ಸಾಹಿತ್ಯದ ಬೆಳವಣಿಗೆಯನ್ನೂ ಹೈದರಾಬಾದಿನ ಉಸ್ಮಾನಿಯ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗ ಆರಂಭಗೊಂಡ ೧೯೩೨ ರಿಂದ ಗುರುತಿಸಲಾಗಿದೆ. ಜಿಲ್ಲೆಯಲ್ಲಿ ಕನ್ನಡವು ಉರ್ದು ಮತ್ತು ಮರಾಠಿ ಎರಡು ಭಾಷೆಯೊಂದಿಗೆ ಸೆಣಸಬೇಕಾಗಿದೆ. ಸಾಹಿತ್ಯ ರಚನೆಗಿಂತ ಕನ್ನಡ ಪರ ಪ್ರಚಾರ, ಸಂಘಟನೆ, ನಾಟಕಾಭಿನಯ ಇತ್ಯಾದಿಗಳು ಅವಶ್ಯವಿದ್ದು ಆ ಕಾರ್ಯ ತವಗ ಭೀಮಶೇನ್‌ರಾವ್, ಹೇರೂರು ದತ್ತಾತ್ರೇಯರಾವ್ ಮೊದಲಾದವರಿಂದ ನೆರವೇರಿತು. ಇವರೊಂದಿಗೆ ಶ್ರೀಪತಿ ಪರನಾಡು, ಜಯರಾವ್ ಜರ್ಕುಂಟ, ದತ್ತಾತ್ರೇಯ ಅವರಾದಿ, ವಸಂತ ಕುಷ್ಠಿಗಿ ಮುಂತಾದವರು ತವಗ ಅವರ ನೇತೃತ್ವದಲ್ಲಿ ಕತೆ, ಕವಿತೆ, ವಿಮರ್ಶೆ, ಬರೆಯತೊಡಗಿದರು.

ಸುರಪುರದಲ್ಲಿ ಗುರುಚಾರ್ಯ ಬಂದಿ, ರಂಗಂಪೇಟೆಯ ಬುದ್ಧಿವಂತ ಶೆಟ್ಟಿಯ ಬೃಂದಾವನ ಎಂಬ ಕವಿತಾ ಸಂಗ್ರಹವನ್ನು ಸಂಪಾದಿಸಿ ಪ್ರಕಟಿಸಿದರು. ಜಿಲ್ಲೆಯಾದ್ಯಂತ ಮೂಡಿದ ಏಕತಾ ಮನೋಭಾವ ಹಾಗೂ ಕನ್ನಡ ನಾಡು-ನುಡಿಗಳ ಅಭಿಮಾನ, ಸರಕಾರ ಹಾಗೂ ಸಂಘ ಸಂಸ್ಥೆಗಳ ಪ್ರೋತ್ಸಾಹ ಇತ್ಯಾದಿಗಳಿಂದ ಬರಹಗಾರರಲ್ಲಿ ಗದ್ಯ, ಪದ್ಯ, ಸಂಶೋಧನೆ, ನಾಟಕ, ಮಕ್ಕಳ ಸಾಹಿತ್ಯ, ಇತ್ಯಾದಿ ಹಲವಾರು ಪ್ರಕಾರಗಳಲ್ಲಿ ಅಭಿವ್ಯಕ್ತಗೊಳಿಸಿದ ಕೀರ್ತಿ ಎ.ಕೆ. ರಾಮೇಶ್ವರ, ಎಸ್.ಎಸ್. ಆಲಗೂರು, ಕಂಟೆಪ್ಪ ಮಾಸ್ತರ, ಶಿವರುದ್ರಪ್ಪ ಮೇಳಕುಂದಿ, ಇತ್ಯಾದಿ ಹಲವಾರು ಜಿಲ್ಲೆಯ ಕ್ರಿಯಾಶೀಲ ಬರಹಗಾರರಾಗಿದ್ದಾರೆ.

ಮಹಿಳಾ ಲೇಖಕಿಯರೂ ಜಿಲ್ಲೆಯ ಸಾಹಿತ್ಯಕ್ಕೆ ಸಾಕಷ್ಟು ಕಾಣಿಕೆ ನೀಡಿದ್ದಾರೆ. ರಾಜ್ಯದ ಏಕೀಕರಣ ವೇಳೆಯಲ್ಲಿಯೇ ಕೃತಿ-ರಚನೆ ಮಾಡುತ್ತಿದ್ದ ಶೈಲಜಾ ಉಡಚಣ ಅವರು ಒಂದುಗಳಿಗೆ, ಕಾದು ನೋಡು, ಸ್ವಗತ, ಇತ್ಯಾದಿ ಕವನ ಸಂಕಲನ ಹೊರತಂದಿದ್ದಾರೆ. ಗೀತಾ ನಾಗಭೂಷಣ ಅವರು ಮಹಾಮನೆ, ಚಂದನದ ಚಿಗುರು, ಮರಳಿನ ಮನೆ, ಹಸಿ ಮಾಂಸ ಇತ್ಯಾದಿ ಕೃತಿಗಳನ್ನು ರಚಿಸಿದ್ದಾರೆ. ಸುರಪುರದವರಾದ ಹನುಮಾಕ್ಷಿ ಗೋಗಿ ಅವರು ೧೯೬೪ ರಲ್ಲಿ ಬಿ.ಆರ್.ಹಿರೇಮಠ ಅವರೊಂದಿಗೆ ಮುದ್ನೂರು ಮತ್ತು ಯಡ್ರಾಮಿ ಶಾಸನಗಳನ್ನು ಹೊರ ತಂದಿದ್ದಾರೆ.

## ಪತ್ರಿಕೆಗಳು

ಒಂದು ನೂರು ವರ್ಷಗಳ ಇತಿಹಾಸವಿರುವ ಜಿಲ್ಲೆಯ ಪತ್ರಿಕೆಗಳು ಜನರಲ್ಲಿ ವಾಚನಾಭಿರುಚಿ ಬೆಳೆಸುವುದರೊಂದಿಗೆ ಸಾಮಾಜಿಕ, ರಾಜಕೀಯ ಪ್ರಜ್ಞೆಗಳನ್ನು ಬೆಳೆಸುವಲ್ಲಿ ತನ್ನ ಕಾಣಿಕೆಯನ್ನು ನೀಡಿವೆ. ಈವರೆಗೆ ತಿಳಿದುಬಂದಂತೆ ೧೮೯೩ರಲ್ಲಿ ಮರಾಠಿಯಲ್ಲಿ ಪ್ರಕಟವಾದ 'ಗುಲಬರ್ಗಾ ಸಮಾಚಾರ' ಜಿಲ್ಲೆಯ ಪ್ರಥಮ ಪತ್ರಿಕೆ. ಇದು ಗುಲಬರ್ಗಾದ ಪರಶುರಾಮ ಗೋವಿಂದ ಬೋಡಸ್ ಅವರ ಮುದ್ರಣಾಯದಲ್ಲಿ ಮುದ್ರಣವಾಗಿ ಅವರ ಸಂಪಾದನೆಯಲ್ಲಿಯೇ ಹೊರ ಬರುತ್ತಿತ್ತು.

ಜಿಲ್ಲೆಯಲ್ಲಿ ಈವರೆಗೆ ನೂರ ಇಪ್ಪತ್ತಕ್ಕೂ ಹೆಚ್ಚು ಪತ್ರಿಕೆಗಳು ಆಗಿ ಹೋದ ಇತಿಹಾಸ ವಿದೆಯೆಂದೂ, ಈಗ ಮೂವತ್ತಕ್ಕೂ ಹೆಚ್ಚು ಪತ್ರಿಕೆಗಳು ಬರುತ್ತಿರುವುದಾಗಿಯೂ ತಿಳಿದು ಬರುತ್ತದೆ. ಜಿಲ್ಲಾ ವರದಿಗಾರರ ಸಂಘವು ೧೯೯೫ರಲ್ಲಿ ವರದಿಗಾರರು ಮತ್ತು ಸವಾಲುಗಳು ಕುರಿತು ಸಮಾಲೋಚನೆ ನಡೆಸಿತು. ಗುಲಬರ್ಗಾದ ಜಿಲ್ಲಾ ಕಾರ್ಯನಿರತ ಪತ್ರಕರ್ತರ ಸಂಘದವರು ಜುಲೈ ೧೯೯೭ರಲ್ಲಿ ಪತ್ರಿಕಾ ದಿನವನ್ನು ಪತ್ರಿಕಾ ಅಕಾಡಮಿಯ ನೆರವಿನೊಂದಿಗೆ ಆಚರಿಸಿದರು. ಪತ್ರಕರ್ತರಿಗೆಂದೇ ಕೊಡಮಾಡುವ ಶ್ರೀಮತಿ ಯಶೋದಮ್ಮ ಜಿ. ನಾರಾಯಣ ರಾಜ್ಯಮಟ್ಟದ ಪ್ರಶಸ್ತಿಯನ್ನು ೧೯೯೭ರಲ್ಲಿ ಗ್ರಿನೋಬಲ್ಸ್ ಪತ್ರಿಕೆಯ ಸಂಪಾದಕ ರಾಜೇಂದ್ರ ಪಾಟೀಲರಿಗೆ ನೀಡಲಾಯಿತು.

## ಗುಲಬರ್ಗಾ ಜಿಲ್ಲೆಯ ರಾಜಕೀಯ

ಸ್ವಾತಂತ್ರ್ಯಕ್ಕೆ ಮುನ್ನ ಹೈದರಾಬಾದ ಕರ್ನಾಟಕ ಪ್ರದೇಶದಲ್ಲಿ ಪ್ರಜಾಪ್ರಭುತ್ವದ ಅಲೆಯು ತುಂಬಾ ಕ್ಷೀಣವಾಗಿತ್ತು. ಪೋಲೀಸ್ ಕಾರ್ಯಾಚರಣೆಯ ನಂತರ ನಿಜಾಮಷಾಹಿ ಕೊನೆಗೊಂಡ ಬಳಿಕ ದೇಶದ ಇತರ ಪ್ರದೇಶಗಳಂತೆ ಈ ಭಾಗದಲ್ಲಿ ಪ್ರಜಾಪ್ರಭುತ್ವದ ಪರವಾಗಿ ಬಲವಾದ ಅಭಿಪ್ರಾಯ ಮೂಡತೊಡಗಿತು. ಸ್ವಾತಂತ್ರ್ಯ ನಂತರ ದೇಶದಲ್ಲೇ ಮೊದಲನೇ ಲೋಕಸಭೆ ಚುನಾವಣೆಯು ೧೯೫೨ರಲ್ಲಿ ನಡೆಯಿತು. ಗುಲಬರ್ಗಾ ಲೋಕಸಭಾ ಕ್ಷೇತ್ರದಿಂದ ಉಜ್ವಲ ದೇಶಪ್ರೇಮಿ ಮತ್ತು ಸ್ವಾತಂತ್ರ್ಯ ಹೋರಾಟಗಾರರಾಗಿದ್ದ ಸ್ವಾಮಿ ರಾಮಾನಂದ ತೀರ್ಥರು

ರಾಷ್ಟ್ರೀಯ ಕಾಂಗ್ರೆಸ್ ಪಕ್ಷದಿಂದ ಸ್ಪರ್ಧಿಸಿದ್ದರು. ೫೨.೮ರಷ್ಟು ಮತಗಳನ್ನುಗಳಿಸಿ ಸ್ವಾಮಿ ರಾಮಾನಂದ ತೀರ್ಥರು ವಿಜಯಿಯಾದರು.

೧೯೫೬ರಲ್ಲಿ ಲೋಕಸಭಾ ಮತ್ತು ವಿಧಾನ ಸಭಾ ಕ್ಷೇತ್ರಗಳ ಪುನರ್ ವಿಂಗಡನಾ ಆಜ್ಞೆಯ ಪ್ರಕಾರ ಜಿಲ್ಲೆಗೆ ಹನ್ನೊಂದು ವಿಧಾನ ಸಭಾ ಕ್ಷೇತ್ರಗಳನ್ನು ನಿಗದಿ ಮಾಡಲಾಗಿತ್ತು. ಅವುಗಳಲ್ಲಿ ಆಳಂದ ಮತ್ತು ಸೇಡಂ ಕ್ಷೇತ್ರಗಳು ದ್ವಿಸದಸ್ಯ ಕ್ಷೇತ್ರಗಳಾಗಿದ್ದು, ತಲಾ ಒಂದೊಂದು ಮೀಸಲು ಸ್ಥಾನಗಳನ್ನು ಹೊಂದಿದ್ದವು.

ಜಿಲ್ಲೆಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವು ತುಂಬಾ ಬಲಹೀನವಾಗಿತ್ತು. ಪ್ರಜಾ ಸೋಷಿಯಲಿಸ್ಟ್ ಹಾಗೂ ಕಮ್ಯೂನಿಷ್ಟ ಪಕ್ಷಗಳು ದುರ್ಬಲವಾಗಿದ್ದವು. ಪ್ರತಿಯೊಂದು ಚುನಾವಣೆಯ ವಿವರವನ್ನು ಈ ರೀತಿ ಇದೆ.

೧. ೧೯೫೭ : ಈ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಒಟ್ಟು ಜಿಲ್ಲೆಯ ೧೧ ಸ್ಥಾನಗಳನ್ನು ತನ್ನ ಮಡಿಲಿಗೆ ಸೇರಿಸಿಕೊಂಡಿತು. ಉಳಿದ ಎರಡು ಸ್ಥಾನಗಳು ಪಕ್ಷೇತರ ಪಾಲಾದವು. ಅದೇ ವೇಳೆಯಲ್ಲಿ ಜಿಲ್ಲೆಯಲ್ಲಿ ೨ ಲೋಕಸಭೆ ಸ್ಥಾನಗಳು ಕಾಂಗ್ರೆಸ್ ಪಾಲಾದವು.

೨. ೧೯೬೨ರ ಲೋಕಸಭಾ ಚುನಾವಣೆಯಲ್ಲಿ ೧೯೬೧ರ ಆಜ್ಞೆಯ ಪ್ರಕಾರ ಗುಲಬರ್ಗಾವನ್ನು ಸಾರ್ವತ್ರಿಕ ಚುನಾವಣೆಯಲ್ಲಿ ಏಕಸದಸ್ಯ ಕ್ಷೇತ್ರವನ್ನಾಗಿ ಮಾರ್ಪಡಿಸಲಾಯಿತು. ಕಾಂಗ್ರೆಸ್ ಜಯ ಸಾಧಿಸಿತು. ವಿಧಾನ ಸಭೆಯ ಚುನಾವಣೆಯಲ್ಲಿ ಜಿಲ್ಲೆಯ ೧೩ ಸ್ಥಾನಗಳನ್ನು ಹೊಂದಿದ್ದು ಕಾಂಗ್ರೆಸ್ ೦೮, ಸ್ವತಂತ್ರ ಪಕ್ಷವು ೦೧, ಸ್ಥಾನ ಗಳಿಸಿದವು.

೩. ೧೯೬೭ ಜಿಲ್ಲೆಯಲ್ಲಿ ಕಾಂಗ್ರೆಸ್ ಪಕ್ಷ-೦೮, ಸ್ವತಂತ್ರ ಪಕ್ಷ-೦೩ ಸ್ಥಾನಗಳು, ಪ್ರಜಾ ಸೋಶಿಯಲಿಷ್ಟ-೦೧ ಹಾಗೂ ಪಕ್ಷೇತರ-೦೧ ಸ್ಥಾನಗಳಿಸಿಕೊಂಡವು. ೧೯೬೭ ವಿಧಾನ ಸಭೆಯ ಚುನಾವಣೆಯಲ್ಲಿ-ರಾಜಾ ವೆಂಕಟಪ್ಪ ನಾಯಕರು ಆಯ್ಕೆಯಾಗಿದ್ದರು. (ಬುಡಕಟ್ಟು ನಾಯಕರು)(ಸೋಸಿಯಲಿಷ್ಠ ಪಕ್ಷ)

೪. ೧೯೭೧ ಜಗಜೀವನರಾಂ ನೇತೃತ್ವದ ಕಾಂಗ್ರೆಸ್ ಪಕ್ಷ ಲೋಕಸಭೆಯಲ್ಲಿ ೦೧ ಸ್ಥಾನಕ್ಕೆ ಜಯಗಳಿಸಿತು. ೧೯೭೨ ವಿಧಾನ ಸಭೆಯ ಚುನಾವಣೆ-ಕಾಂಗ್ರೆಸ್-I ೧೦ ಸ್ಥಾನಗಳು, ಸಂಸ್ಥಾ ಕಾಂಗ್ರೆಸ್ ೦೧ ಪಕ್ಷೇತರ-೦೨ ಸ್ಥಾನಗಳು ಗಳಿಸಿಕೊಂಡವು.

೫. ೧೯೭೭ ಕಾಂಗ್ರೆಸ್ ಪಕ್ಷವನ್ನು ತನ್ನ ಸ್ಥಾನವನ್ನು ಉಳಿಸಿಕೊಂಡಿತು. ವಿಧಾನ ಸಭೆಯ ಚುನಾವಣೆಯಲ್ಲಿ ಕಾಂಗ್ರೆಸ್-೧೦೮ ಸ್ಥಾನಗಳನ್ನು ಜನತಾ ಪಕ್ಷ - ೦೩ ಮತ್ತು ಸಿ.ಪಿ.ಐ.-೦೧, ಪಕ್ಷೇತರ -೦೧ ಪಡೆದು ಕೊಂಡುವು.

೬. ೧೯೮೦ - ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೇಸ್ ಪಕ್ಷವು ತನ್ನ ಸ್ಥಾನವನ್ನು ಉಳಿಸಿಕೊಂಡಿತು. ೧೯೮೩ ವಿಧಾನ ಸಭಾ ಚುನಾವಣೆಯಲ್ಲಿ - ಜನತಾಪಕ್ಷ ಐದು ಸ್ಥಾನಗಳು ಮತ್ತು ಕಾಂಗ್ರೆಸ್ ಪಕ್ಷ-೦೫ ಸ್ಥಾನಗಳು, ಬ.ಜ.ಪ. - ೦೧ ಸಿ.ಪಿ. ಐ. - ೦೧ ಸ್ಥಾನಗಳಿಸಿಕೊಂಡುವು.

೭. ೧೯೮೪ ಲೋಕಸಭಾ ಚುನಾವಣೆಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ ತನ್ನಸ್ಥಾನವನ್ನು ಉಳಿಸಿಕೊಂಡಿತು. ೧೯೮೫ ವಿಧಾನ ಸಭೆಯ ಚುನಾವಣೆಯಲ್ಲಿ - ಕಾಂಗ್ರೆಸ್-೦೮, ಜನತಾ ಪಕ್ಷ-೦೩, ಸಿ.ಪಿ.ಐ. + ಪಕ್ಷೇತರ ತಲಾ ಒಂದು ಸ್ಥಾನ ಪಡೆದವು.

೮. ೧೯೮೯ರ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಲೋಕ ಸಭೆಯು ಸ್ಥಾನವನ್ನು ಉಳಿಸಿ ಕೊಂಡಿತು. ವಿಧಾನ ಸಭೆಗೆ ೧೨ ಕಾಂಗ್ರೆಸ್ ಪಕ್ಷ ಗೆದ್ದುಕೊಂಡಿತು, ೦೧ ಮುಸ್ಲಿಂ ಲೀಗ್.

೯. ೧೯೯೧ ಲೋಕಸಭೆಯ ಚುನಾವಣೆಯಲ್ಲಿ ಜಿಲ್ಲೆಯಲ್ಲಿ ಕಾಂಗ್ರೆಸ್ ಪಕ್ಷ ತನ್ನ ಸ್ಥಾನವನ್ನು ಉಳಿಸಿಕೊಂಡಿತು. ವಿಧಾನ ಸಭೆಯ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ-೦೪ ಸ್ಥಾನಗಳು ಜನತಾ ದಳ - ೦೪, ಕರ್ನಾಟಕ ಕಾಂಗ್ರೆಸ್ - ೦೩, ಬಾ.ಜ.ಪ. - ೦೧, ಮುಸ್ಲಿಂ ಲೀಗ್-೦೧ ಸ್ಥಾನ ಪಡೆದು ಕೊಂಡವು.

೧೦. ೧೯೯೬ ಲೋಕಸಭೆಯ ಚುನಾವಣೆಯಲ್ಲಿ ಜಿಲ್ಲೆಯಲ್ಲಿ ಜನತಾದಳವು ಜಯಗಳಿಸಿತು.

೧೯೯೯ರ ವಿಧಾನ ಸಭೆಯ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಪ್ರಚಂಡ ಬಹುಮತವನ್ನು ಗಳಿಸಿತು. ಪಕ್ಷದ ಹಿರಿಯ ನಾಯಕರಾದ ಮಲ್ಲಿಕಾರ್ಜುನ ಖರ್ಗೆ ಮತ್ತು ಧರ್ಮಸಿಂಗರು ಹಾಗೂ ಇನ್ನಿತರ ನಾಲ್ಕು ಜನರು ಸಚಿವ ಸ್ಥಾನವನ್ನು ಹೊಂದಿದ್ದಾರೆ.

ಜಿಲ್ಲೆಯಲ್ಲಿ ಕೇವಲ ಕೆಲವೇ ಸಮುದಾಯಗಳು ಚುನಾವಣೆಯಲ್ಲಿ ಭಾಗವಹಿಸಿದೆ. ವಿಧಾನಸಭೆ ಮತ್ತು ಲೋಕಸಭೆಯ ಚುನಾವಣೆಯಲ್ಲಿ ಬುಡಕಟ್ಟು ನಾಯಕರು ನಿರಂತರವಾಗಿ ಭಾಗವಹಿಸಿ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿರುವದು ಗಮನಾರ್ಹ ಸಂಗತಿಯಾಗಿದೆ.

ಜಿಲ್ಲೆಯ ಪ್ರಮುಖ ಮತಕ್ಷೇತ್ರವಾದ ಸುರಪುರ ಬುಡಕಟ್ಟು ನಾಯಕರಿಗೆ ಭದ್ರಕೋಟೆಯಾಗಿದೆ. ಏಕೆಂದರೆ ಜಿಲ್ಲೆಯ ಹತ್ತು ತಾಲೂಕಿನಲ್ಲಿ ೨೦ ಬುಡಕಟ್ಟು ಸಮುದಾಯಗಳು ವಾಸವಾಗಿದ್ದು, ಚುನಾಯಿತರಾದ ನಾಯಕರು ಬುಡಕಟ್ಟು ಸಮುದಾಯಗಳ ಪ್ರಗತಿಗಾಗಿ ನಿರಂತರ ಶ್ರಮಿಸಿರುವದಕ್ಕೆ ಅದರ ಆಯ್ಕೆಯೇ ಒಂದು ಸಾಕ್ಷಿ ಎಂದು ಹೇಳಬಹುದು.

**ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಸಮುದಾಯಗಳು ಪಡೆದ ಸಂವಿಧಾನಾತ್ಮಕ ಸೌಲಭ್ಯಗಳು**

ಗುಲಬರ್ಗಾ ಜಿಲ್ಲೆಯಲ್ಲಿ ೧೯೮೧ರ ಜನಗಣತೆಯ ಪ್ರಕಾರ ೯೭,೬೨೭ ಹಾಗೂ ೧೯೯೧ರ ಪ್ರಕಾರ ೧,೦೬,೩೫೫ ಜನರು ಬುಡಕಟ್ಟು ಸಮುದಾಯಗಳಿಗೆ ಸೇರಿದವರಿದ್ದು, ಇದು ಕ್ರಮವಾಗಿ ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇ. ೪.೬೯ ಮತ್ತು ೪.೧೪ ರಷ್ಟಾಗಿರುತ್ತವೆ. ಜಿಲ್ಲೆಯ ಬುಡಕಟ್ಟು ಸಮುದಾಯಗಳ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಮತ್ತು ಶೈಕ್ಷಣಿಕ ಅಭಿವೃದ್ಧಿಗಾಗಿ ಸಾಕಷ್ಟು ಯೋಜನೆಗಳನ್ನು ಸರಕಾರ ಹಾಕಿ ಕೊಂಡಿದೆ.

೧. ಪರಿಶಿಷ್ಠ ವರ್ಗದ ಮಕ್ಕಳಿಗಾಗಿ ೧ ರಿಂದ ೪ನೇ ತರಗತಿವರಿಗೆ ಉಚಿತವಾಗಿ ಊಟ, ವಸತಿ, ಬಟ್ಟೆ ಮತ್ತು ಪುಸ್ತಕಗಳನ್ನು ನೀಡಿ ಶಿಕ್ಷಣ ಕೊಡುವಸಲುವಾಗಿ ಸರಕಾರ ೧೦.೦೨ ಲಕ್ಷ ರೂ. ವೆಚ್ಚಮಾಡಿದೆ.

೨. ಬುಡಕಟ್ಟು ಮಕ್ಕಳ ಅಭಿವೃದ್ಧಿಗಾಗಿ ಮೆಟ್ರೀಕ್ ಪೂರ್ವ ವಸತಿ ನಿಲಯ ಗಳಿಗೆ ಜಿಲ್ಲೆಯಲ್ಲಿ ೧೪೬.೭೮ ಲಕ್ಷ ರೂ., ೧೯೯೪-೯೫ರಲ್ಲಿ ವೆಚ್ಚಮಾಡಿದೆ.

೩. ವಿದ್ಯಾರ್ಥಿ ನಿಲಯದಲ್ಲಿ ಸೌಲಭ್ಯ ಪಡೆಯದ ಬುಡಕಟ್ಟು ಮಕ್ಕಳಿಗೆ ವಿದ್ಯಾರ್ಥಿ ವೇತನ, ಬಹುಮಾನ, ಹಣ ಇತ್ಯಾದಿ ಶೈಕ್ಷಣಿಕ ಸೌಲಭ್ಯಗಳನ್ನು ಸರಕಾರ ಒದಗಿಸಿದೆ.

೪. ಬುಡಕಟ್ಟು ಮಕ್ಕಳ ಶೈಕ್ಷಣಿಕ ಪ್ರಗತಿಗಾಗಿ ಸರಕಾರ ವಿವಿಧ ರೀತಿಯ ಯೋಜನೆಯನ್ನು ಹಾಕಿ ಕೊಂಡಿದೆ.

| | |
|---|---|
| ಮೆಟ್ರೀಕ್ ಪೂರ್ವ ವಿದ್ಯಾರ್ಥಿ ವೇತನ | ೧೮ ಲಕ್ಷ ರೂ. |
| ಮೆಟ್ರೀಕ್ ನಂತರ ವಿದ್ಯಾರ್ಥಿ ವೇತನ | ೯೯ ಲಕ್ಷ ರೂ. |
| ಪ್ರತಿಭಾವಂತ ವಿದ್ಯಾರ್ಥಿ ವೇತನ | ೧.೬೦ ಲಕ್ಷ ರೂ. |
| ಎಸ್.ಎಸ್.ಎಲ್.ಸಿ.ಮತ್ತು ಕಾಲೇಜು ವಿದ್ಯಾರ್ಥಿಗಳಿಗೆ ನೀಡಿದ ಬಹುಮಾನ | ೦.೭೪ ಲಕ್ಷ ರೂ. |
| ವಿದ್ಯಾರ್ಥಿಗಳ ಊಟ ವಸತಿಗಾಗಿ ಮಾಡಿದ ವೆಚ್ಚ | ೨೪.೧೮ ಲಕ್ಷ ರೂ. |

೫. ಪರಿಶಿಷ್ಠ ವರ್ಗದ ಯುವಕರು ಸ್ವಂತ ಉದ್ಯೋಗವನ್ನು ಕೈಗೊಳ್ಳಲು ೧೯೭೯-೮೦ ಸಾಲಿನಲ್ಲಿ ೭೪ ಜನ ಯುವಕರಿಗೆ ತರಬೇತಿ ನೀಡಿ ಅವರ ವ್ಯಾಪಾರಕ್ಕಗಿ ನೆರವುಯೋಜನೆಯು ಜಿಲ್ಲೆಯಲ್ಲಿ ಅನುಷ್ಠಾನಕ್ಕೆ ಬಂದು ೩೨೫ ಜನ ಇದರ ಲಾಭವನ್ನು ಪಡೆದಿದ್ದಾರೆ.

೬. ಬುಡಕಟ್ಟು ಜನರ ಅರ್ಥಿಕ ಅಭಿವೃದ್ಧಿಗಾಗಿ ಜಿಲ್ಲೆಯಲ್ಲಿ ಪರಿಶಿಷ್ಠವರ್ಗ ಉಪಯೋಜನೆ ಕಾರ್ಯಕ್ರಮವನ್ನು ಜಾರಿಗೊಳಿಸಲಾಗಿದೆ, ಈ ಜನರ ಕುಟುಂಬಗಳನ್ನು ಬಡತನ ರೇಖೆಯಿಂದ ಮೇಲೆ ತರಲು ಅನೇಕ ಅಭಿವೃದ್ದಿ ಇಲಾಖೆಗಳು ಅರ್ಥಿಕ ನೇರವು ನೀಡುತ್ತಿವೆ.

೭. ಪರಿಶಿಷ್ಠ ಜಾತಿ ಮತ್ತು ವರ್ಗಗಳ ನಿಗಮ, ಈ ನಿಗಮವು ಪರಿಶಿಷ್ಠಿ ವರ್ಗದ ಕೃಷಿ ಕಾರ್ಮಿಕರು ಜಮೀನು ಕೊಳ್ಳಲು ಗರಿಷ್ಠ ಮಿತಿ ೨೦,೦೦೦/- ವರೆಗೆ ಸಾಲವನ್ನು ಮಂಜೂರು ಮಾಡುತ್ತಿದೆ.

೮. ಪರಿಶಿಷ್ಠ ವರ್ಗಗಳ ಕೃಷಿ ಕಾರ್ಮಿಕರಿಗೆ ೨೦,೦೦೦/- ಎರಡು ಎಕರೆ ಖುಷ್ಕಿ ಅಥವಾ ಒಂದು ಎಕರೆ ತರೀ ಜಮೀನು ಖರೀದಿ ಮಾಡಿಕೊಡಲಾಗುವುದು. ೧೯೫೫ರ ಸಾಲಿನಲ್ಲಿ ಇಬ್ಬರ ಪರಿಶಿಷ್ಠ ಪಂಗಡದವರು ನಾಲ್ಕು ಎಕರೆ ಜಮೀನು ಖರೀದಿಸಲು ಸರಕಾರ ಮಾಡಿದ ವೆಚ್ಚ ೨೨,೩೭೪ ರೂ.

೯. ಪರಿಶಿಷ್ಠ ವರ್ಗದ ನಿರುದ್ಯೋಗಿ ಯುವಕ, ಯುವತಿಯಗೆ ಅದರಲ್ಲಿ ಗ್ರಾಮಾಂತರ ಪ್ರದೇಶದ ಜನರಿಗೆ ಸ್ವಂತ ಉದ್ಯೋಗ ಪ್ರಾರಂಭಿಸಲು ಈ ಸ್ವಂತ ಉದ್ಯೋಗ ಯೋಜನೆಯ ಸೌಲಭ್ಯ ಪಡೆಯಬಹುದು. ನೇಯ್ಗೆ,ರೇಷ್ಮೆ ನೂಲುಸುತ್ತುವದು, ಬೆರಳಚ್ಚುಯಂತ್ರ

ತರಬೇತಿ, ಹೈನುಗಾರಿಕೆ, ಚರ್ಮಗಾರಿಕೆ, ಸೈಕಲ್ ಅಂಗಡಿ ಇತ್ಯಾದಿ ಉದ್ಯೋಗಗಳಿಗೆ ೨೫,೦೦೦/- ಸಹಾಯಧನ ನಿಗಮದಿಂದ ಮಂಜೂರು ಮಾಡಲಾಗುವದು.

ವ್ಯಾಪಾರಕ್ಕಾಗಿ ಆರ್ಥಿಕ ನೆರವು ನೀಡಲು ಕೆಲವೊಂದು ಯೋಜನೆಗಳನ್ನು ಹಾಕಿಕೊಳ್ಳಲಾಗಿದೆ. ಪರಿಶಿಷ್ಠ ವರ್ಗದ ಜನರಿಗೆ ೫೦೦/- ರೂ.ಯಿಂದ ೧೦೦೦/ ವರೆಗೆ. ಶೇಕಡಾ ೪% ರಂತೆ ಬಡ್ಡಿದರದಲ್ಲಿ ಸಾಲವಾಗಿ ನಿಗಮ ನೀಡುತ್ತದೆ.

೧೧. ಕೆಲವು ಸ್ವಯಂಸೇವಾ ಸಂಸ್ಥೆಗಳು ಸಹ -ಪರಿಶಿಷ್ಠ ವರ್ಗದವರ ಕಲ್ಯಾಣ ಕಾರ್ಯಕ್ರಮಗಳನ್ನು ಜಿಲ್ಲೆಯಲ್ಲಿ ಕೈಗೊಂಡಿದೆ. ಗುಲಬರ್ಗಾದಲ್ಲಿ ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಸಂಸ್ಥೆ ಪ್ರಾರಂಭಗೊಂಡಿದ್ದು ಪ್ರತಿ ವರ್ಷ ೪೫ ವಿದ್ಯಾರ್ಥಿಗಳಿಗೆ ಉಚಿತವಾಗಿ ವಸತಿಯನ್ನು ಒದಗಿಸುವದು.

ಸರಕಾರವು ಬುಡಕಟ್ಟು ಸಮುದಾಯಗಳ ಆರ್ಥಿಕ ಮತ್ತು ಶೈಕ್ಷಣಿಕ ಅಭಿವೃದ್ದಿಗಾಗಿ ಹಲವಾರು ಯೋಜನೆಗಳನ್ನು ಹಾಕಿಕೊಂಡಿದೆ. ಸರಕಾರದ ಪ್ರಮುಖವಾದ ಉದ್ದೇಶ ಬುಡಕಟ್ಟು ಆರ್ಥಿಕ ಮತ್ತು ಶೈಕ್ಷಣಿಕ ಪ್ರಗತಿಯಾದರೆ, ರಾಜಕೀಯದಲ್ಲಿ ಸಕ್ರೀಯವಾಗಿ ಭಾಗವಹಿಸಬಹುದು. ಏಕೆಂದರೆ ಪ್ರಜಾಪ್ರಭುತ್ವ ಯಶಸ್ವಿ ಕೇವಲ ಕೆಲವು ಸಮುದಾಯಗಳನ್ನು ಅವಲಂಬಿಸಿರದೆ ರಾಜ್ಯದಲ್ಲಿ ವಾಸಿಸುವ ಎಲ್ಲಾ ಸಮುದಾಯಗಳನ್ನು ಅವಲಂಬಿಸಿದೆ. ಆದ್ದರಿಂದ ಬುಡಕಟ್ಟು ಸಮುದಾಯಗಳ ಸರ್ವತೋಮುಖ ಅಭಿವೃದ್ಧಿಗಾಗಿ ಸರಕಾರ ರಾಜಕೀಯದಲ್ಲಿ ಮೀಸಲಾತಿ ಸೌಲಭ್ಯವನ್ನು ನೀಡಿದೆ.

## ೨.೭. ಗುಲಬರ್ಗಾ ಜಿಲ್ಲೆಯ ಬುಡಕಟ್ಟುಗಳು

ಬುಡಕಟ್ಟು ಎಂಬುವದು ಅನೇಕ ಕುಲಗಳು ಅಲೆಮಾರಿ ತಂಡಗಳು ನಿಶ್ಚಿತ ಭೌಗೋಳಿಕ ಪ್ರದೇಶಗಳಲ್ಲಿ ವಾಸಿಸುವ ಒಳಗುಂಪುಗಳು, ಪ್ರತ್ಯೇಕ ಭಾಷೆ, ವಿಶಿಷ್ಠ ಸಂಸ್ಕೃತಿ ಹಾಗೂ ಒಂದು ಸಾಮಾನ್ಯ ರಾಜಕೀಯ ಸಂಘಟನೆ ಅಥವಾ ಹೊರಗಿನವರ ವಿರುದ್ಧ ತಾವೆಲ್ಲ ಒಂದೇ ಸಮೂಹ. ಬುಡಕಟ್ಟು ಎಂಬುವದು ಅನೇಕ ಕುಲಗಳು, ಅಲೆಮಾರಿ ತಂಡಗಳು ಅಥವಾ ನಿಶ್ಚಿತ ಭೌಗೋಳಿಕ ಪ್ರದೇಶಗಳಲ್ಲಿ ವಾಸಿಸುವ ವಿಶಿಷ್ಠ ಸಂಸ್ಕೃತಿಯನ್ನೊಳಗೊಂಡಿರುವ ಒಂದು ಸಾಮಾಜಿಕ ಸಂಘಟನೆಯಾಗಿದೆ.

ಅನೇಕ ವಿದ್ವಾಂಸರು ಈ ಬುಡಕಟ್ಟುಗಳನ್ನು ಮೂಲನಿವಾಸಿಗಳೆಂದು ಅಥವಾ ಆದಿವಾಸಿಗಳೆಂದು ವರ್ಣಿಸಿದ್ದಾರೆ. (ಈ ವಿಷಯ ಹಿಂದಿವ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಹೇಳಲಾಗಿದೆ) ಇವರು ಸಾಮನ್ಯವಾಗಿ ಅರಣ್ಯ ಅಥವಾ ಗುಡ್ಡ ಗಾಡುಗಳಲ್ಲಿ, ದುರ್ಗಮ ಪ್ರದೇಶಗಳಲ್ಲಿ, ನಾಗರಿಕ ಜಗತ್ತಿನಿಂದ ದೂರವಾಗಿ ವಾಸಿಸುತ್ತಾರೆ. ಬುಡಕಟ್ಟಿನವರೆಲ್ಲರೂ ತಮ್ಮದೇ ಆದ ಒಂದು ಭಾಷೆಯನ್ನಾಡುತ್ತಾರೆ. ಸಂಪ್ರದಾಯಿಕವಾಗಿ ಇವರು ಅನುಸರಿಸುವ ಧರ್ಮವೆಂದರೆ ಸರ್ವ ಚೇತನವಾದ. ಈ ಧರ್ಮದ ಬಹುಮುಖ್ಯ ಅಂಶವೆಂದರೆ ಭೂತ ಮತ್ತು ಪ್ರೇತಾತ್ಮಗಳ ಆರಾಧನೆ. ಆದರೆ ಈಗೀಗ ಹೆಚ್ಚಿನ ಆದಿವಾಸಿಗಳು ವೈದಿಕ ಧರ್ಮವನ್ನು ಅನುಸರಿಸುತ್ತಿದ್ದಾರೆ. ಅವರು ಆಹಾರ ಸಂಗ್ರಹಿಸುವದು, ಬೇಟೆಯಾಡುವದು ಮತ್ತು ಅರಣ್ಯ ಉತ್ಪಾದನೆಗಳನ್ನು ಶೇಖರಿಸುವದು ಮುಂತಾದ ಉದ್ಯೋಗಗಳಲ್ಲಿ ತೊಡಗಿದ್ದಾರೆ. ಅವರಲ್ಲಿ ಬಹುತೇಕ ಮಂದಿ ಮಾಂಸಹಾರಿಗಳು.

ಬುಡಕಟ್ಟು ಸಮುದಾಯವು ಅಲೆಮಾರಿ ಪ್ರವೃತ್ತಿ ಹೊಂದಿದ್ದು, ಕುಡಿತ ಹಾಗೂ ಕುಣಿತಗಳ ಬಗ್ಗೆ ಒಲವು ಉಳ್ಳವರು. ಅವರಲ್ಲಿ ಕೆಲವರು, ಸಾಲಕೊಡುವ ಸಾಹುಕಾರರ, ಜೀತ ದಾಳುಗಳಾಗಿ ಕಾಫಿತೋಟಗಳಲ್ಲಿ, ಗಣಿಗಳಲ್ಲಿ, ರೈಲ್ವೆ ಕಾಮಗಾರಿಗಳಲ್ಲಿ, ದುಡಿಯುವ ಗುಲಾಮರಾಗಿಯೇ ಇದ್ದಾರೆ. ಈಗ ಈ ಬುಡಕಟ್ಟುಗಳು ನಿಧಾನವಾಗಿ ತಮ್ಮ ವಂಶಪರಂಪರೆಯನ್ನು ಬದಲಿಸಿ ಹಿಂದೂ ಧರ್ಮದಲ್ಲಿ ಸಮ್ಮಿಳಿತಗೊಂಡು ಜಾತಿಗಳಾಗಿ ಮಾರ್ಪಡುತ್ತಿವೆ. ಕರ್ನಾಟಕ ಸರಕಾರವು ಬುಡಕಟ್ಟುಗಳ ಕಲ್ಯಾಣಕ್ಕಾಗಿ ವಿವಿಧ ಯೋಜನೆಗಳನ್ನು ಪ್ರಾರಂಭಿಸಿದೆ.

## ಕೋಷ್ಟಕ ೨.೬
## ೧೯೮೧ ರ ಪ್ರಕಾರ ಗುಲಬರ್ಗಾ ಜಿಲ್ಲೆಯ ವಿವಿಧ ಬುಡಕಟ್ಟುವಾರು ಜನಸಂಖ್ಯೆ

| ಕ್ರ. ಸಂ. | ಬುಡಕಟ್ಟುಗಳ ಹೆಸರು | ಬುಡಕಟ್ಟುವಾರು ಜನಸಂಖ್ಯೆ | | | ಅಕ್ಷರಸ್ಥರ ಸಂಖ್ಯೆ | | |
|---|---|---|---|---|---|---|---|
| | | ಪುರುಷರು | ಸ್ತ್ರಿಯರು | ಒಟ್ಟು | ಪುರುಷರು | ಸ್ತ್ರಿಯರು | ಒಟ್ಟು |
| ೧ | ಅಡಿಯನ್ | ೧೪ | ೧೩ | ೨೭ | ೦೭ | ೦೭ | ೧೪ |
| ೨ | ಬಾವಚು ಬಾಮ್ಚ | -- | ೦೧ | ೦೧ | -- | ೦೧ | ೦೧ |
| ೩ | ಭಿಲ್ | ೦೩ | ೦೨ | ೦೫ | ೦೩ | ೦೨ | ೦೫ |
| ೪ | ಚೋಧರಾ (ಚೋಢರಾ) | ೦೧ | ೦೨ | ೦೩ | -- | ೦೧ | ೦೧ |
| ೫ | ಗೊಂಡ್, ನಾಯ್ಕಪೋಡ್, ರಾಜ್‌ಗೊಂಡ್ | ೪೫೫ | ೩೭೨ | ೮೦೭ | ೨೦೪ | ೩೧೫ | ೫೧೯ |
| ೬ | ಹಕ್ಕಿಪಿಕ್ಕಿ | ೧ | -- | ೧ | -- | -- | -- |
| ೭ | ಇರುಳಿಗ | ೩೬ | ೩೮ | ೭೪ | ೧೪ | ೩೦ | ೪೪ |
| ೮ | ಜೇನು ಕುರುಬ | ೯೦ | ೯೭ | ೧೮೭ | ೫೬ | ೯೧ | ೧೪೭ |
| ೯ | ಕಾಡು ಕುರುಬ | ೬೮೭ | ೬೦೧ | ೧,೨೮೮ | ೩೮೦ | ೫೦೬ | ೮೮೬ |
| ೧೦ | ಕಥೋಡಿ | ೧೮ | ೨೫ | ೪೭ | ೪ | ೧೬ | ೨೦ |
| ೧೧ | ಕೋಳಿ ಧೋರ, ಟೋಕರೆಕೋಳಿ | ೨೯೬ | ೨೭೧ | ೫೬೭ | ೧೯೯ | ೨೨೬ | ೪೨೫ |
| ೧೨ | ಕೊರಗ | ೧೨ | ೮ | ೨೦ | ೬ | ೭ | ೧೩ |
| ೧೩ | ಕೋಯ, ಭೀನ ಕೋಯ, ರಾಜ್‌ಕೋಯ | ೬೪೪ | ೬೦೫ | ೧,೨೪೯ | ೪೧೧ | ೫೫೪ | ೯೬೫ |
| ೧೪ | ಕುಡಿಯ, ಮೇಲಕುಡಿ | -- | ೧ | ೧ | -- | -- | -- |
| ೧೫ | ಮಲೈಕುಡಿ | ೧ | -- | ೧ | ೧ | -- | ೧ |
| ೧೬ | ಮೇದ | ೫೩೪ | ೫೮೪ | ೧,೧೧೮ | ೨೯೨ | ೪೭೭ | ೭೬೯ |

ಕೃಪೆ: ಭಾರತದ ಜನಗಣತಿ -೧೯೮೧, ಸರಣಿ
ಕರ್ನಾಟಕ, ಪಾರ್ಟ್ IX(VI)
ಸ್ಪೆಷಲ್ ಟೇಬಲ್ಸ್ ಫಾರ ಟ್ರೈಬ್ಸ್

Census of India 1981
series 9
Karnataka
part-IX (V) Special Table for Scheduled tribes
(Table 1 to 4) Page No. 576. ST - 6 Part A
Educational Levels

### ನಾಯಕ ಸಮುದಾಯ

ಬೇಡರನ್ನು ವಾಲ್ಮೀಕಿ, ನಾಯಕ, ಮೊದಲಾದ ಹೆಸರುಗಳಿಂದಲೂ ಕರೆಯುತ್ತಾರೆ. ಇವರು ಜಿಲ್ಲೆಯ ಸುರುಪುರು, ಶಹಾಪುರು, ಯಾದಗಿರಿ ಹಾಗೂ ಜೇವರ್ಗಿ ತಾಲೂಕಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ದಕ್ಷಿಣ ಭಾರತದಲ್ಲಿ ಆಳ್ವಿಕೆ ಮಾಡಿದ ಹಲವಾರು ರಾಜವಂಶಗಳ ಅಧೀನದಲ್ಲಿ ಬೇಟೆಯಾಡಲು ಹಾಗೂ ಸೈನಿಕ ಸೇವೆಯಲ್ಲಿ ಹೆಚ್ಚಾಗಿ ಬೇಡರೆ ಇರುತ್ತಿದ್ದರೆಂಬ ಅಭಿಪ್ರಾಯವಿದೆ. ನಿಜಾಮರ ಕಾಲದಲ್ಲಿ ಜಹಾಗೀರ್ ಪದ್ಧತಿಯು ಜಾರಿಯಲ್ಲಿದ್ದ ಕಾರಣ ಇವರಿಗೆ ಗ್ರಾಮ ಕಾವಲುಗಾರರಾಗಿಯೂ ಹಾಗೂ ಓಲೆಕಾರರಾಗಿಯೂ ಕೆಲಸ ನಿರ್ವಹಿಸಲು

ಅವಕಾಶ ದೊರೆಯಿತೆಂದು ಹೇಳಲಾಗಿದೆ. ಈಚೆಗೆ ಇವರು ಕೃಷಿ ಕೂಲಿಗಾರರಾಗಿಯೂ, ಬೇಸಾಯಗಾರರಾಗಿಯೂ, ಮತ್ತಿತರ ಕ್ಷೇತ್ರಗಳಲ್ಲಿ ದುಡಿಯುತ್ತಿರುವರು. ಇವರಲ್ಲಿ ಜಾತಿ ಪಂಚಾಯತಿ ಇದ್ದು, ಗೋಸಲವರು, ಗುಜ್ಜಲವರು, ಮಿನುಗುಲವರು, ಜಂಪಲವರು, ಮುಂತಾದ ಬೆಡಗುಗಳಿವೆ. ಇವರಲ್ಲಿ ಪುರೋಹಿತವರ್ಗವಿಲ್ಲ. ವಿವಾಹ ಮುಂತಾದ ಧಾರ್ಮಿಕ ಕಾರ್ಯಗಳನ್ನು ಸಾಮಾನ್ಯವಾಗಿ ಬ್ರಾಹ್ಮಣ ಪುರೋಹಿತರು ನೆರವೇರಿಸಿಕೊಡುತ್ತಾರೆ. ಗಂಡಿನ ಮನೆಯಲ್ಲಿ ವಿವಾಹ ನೇರವೇರಿಸುವುದು. ಇವರ ಸಂಪ್ರದಾಯ ವಾಗಿದೆ. ವಿಧವಾ ವಿವಾಹ ಹಾಗೂ ವಿವಾಹ -ವಿಚ್ಛೆಧನಕ್ಕೆ ಇವರಲ್ಲಿ ಅನುಮತಿ ಇದೆ. ಇವರು ಮಾಂಸಹಾರವನ್ನು ಸೇವಿಸುತ್ತಾರೆ. ಇವರು ಮಾತನಾಡುದ ಭಾಷೆ ಕನ್ನಡ ಕೆಲವರು ತೆಲುಗು ಮಾತಾಡುತ್ತಾರೆ. ಯುಗಾದಿ, ನಾಗರ ಪಂಚಮಿ, ದಸರಾ, ಸಂಕ್ರಾಂತಿ, ಶಿವರಾತ್ರಿ ಇತ್ಯಾದಿ ಹಬ್ಬಗಳನ್ನು ಆಚರಿಸುತ್ತಾರೆ. ವೆಂಕಟರಮಣ, ಮಾರುತಿ, ದೇವಮ್ಮ, ಎಲ್ಲಮ್ಮ, ಕಾಳಿಕಾದೇವಿ, ಭೀಮರಾಯ, ಗೋಪಾಲಸ್ವಾಮಿ, ಮಲ್ಲಯ್ಯ ಮುಂತಾದ ದೇವರುಗಳನ್ನು ಇವರು ಪೂಜಿಸುತ್ತಾರೆ.

### ಮೇದ ಸಮುದಾಯ

ಮೇದ ಸಮುದಾಯ ಆಂಧ್ರದಿಂದ ವಲಸೆ ಬಂದವರು ಎಂದು ಶಂಕಿಸಲಾಗಿದೆ. ಇವರು ಸಾಂಪ್ರದಾಯಿಕ ವಾಗಿ ಬಿದಿರಿನಿಂದ ತಯಾರಾಗುವ ಮರ, ಬುಟ್ಟಿ, ಬೀಸಣಿಗೆ, ಚಾಪಿ ಹೆಣೆಯುವುದು ಮುಂತಾದ ಕೈಕಸಬುಗಳನ್ನು ಮಾಡುವರು. ಅಲ್ಲದೆ ವ್ಯಾಪಾರ, ಕೃಷಿ, ಕೂಲಿ ಮಾಡುವುದು ಮುಂತಾದವು ಇವರ ಇತರ ಉದ್ಯೋಗಗಳಾಗಿವೆ.

ಈ ಸಮುದಾಯದಲ್ಲಿ ಗೌಡರ್, ದಾಸರ್, ಹುಲೇರ್, ಪ್ಯಾರಸತಿ, ಸನ್ನರೆ, ಕುಂಕುಮ ಮೊದಲಾದ ಬೆಡಗುಗಳಿವೆ. ಇವರು ಕನ್ನಡ ಮಾತನಾಡುತ್ತಾರೆ. ಜಿಲ್ಲೆಯ ಕೆಲವು ಭಾಗದಲ್ಲಿ ಮರಾಠಿ ಮಾತನಾಡು ವವರು ಇದ್ದಾರೆ. ಇವರನ್ನು ಬುರುಡರು ಎಂದು ಕರೆಯುತ್ತಾರೆ. ಇವರಲ್ಲಿ ಪುರೋಹಿತರು ಇರುವದಿಲ್ಲ. ಇವರು ಧಾರ್ಮಿಕ ಕಾರ್ಯಕ್ರಮಗಳನ್ನು ಸಾಮಾನ್ಯವಾಗಿ ಬ್ರಾಹ್ಮಣ ಪುರೋಹಿತರು ನೆರೆವೇರಿಸಿ ಕೊಡುತ್ತಾರೆ. ವಿವಾಹ ವಿಚ್ಚೇದನ ಹಾಗೂ ವಿಧವಾ ವಿವಾಹಗಳು ಇವರಲ್ಲಿ ಪ್ರಚಲಿತವಿದೆ. ಇವರು ಮಾಂಸಹಾರಿಗಳು ಇವರಲ್ಲಿ ಶವವನ್ನು ಹೂಳುತ್ತಾರೆ. ಮರಿಯಮ್ಮ ಅಥವಾ ಮಲೆಯಾಳಮ್ಮ ಇವರ ಕುಲದೇವತೆ ಇವರು ತಿರುಪತಿ

ವೆಂಕಟರಮಣ, ಚಿತ್ತಾಪುರದ ನಾಗಎಲ್ಲಮ್ಮ, ಬೀದರ್ ಜಿಲ್ಲೆಯ ಖಾನಪುರದ ಮೈಲಾರ ದೇವರು, ಆಂಜನೇಯ ಮೊದಲಾದ ದೇವರುಗಳಿಗೆ ನಡೆದುಕೊಳ್ಳುತ್ತಾರೆ.

**ಚೆಂಚು, ಚೆಂಚವಾರು**

ಗುಲಬರ್ಗಾ ಜಿಲ್ಲೆಯಲ್ಲಿ ಹಲವಾರು ಜಾತಿ ಮತ್ತು ಬುಡಕಟ್ಟುಗಳಿವೆ ೧೯೯೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಚೆಂಚುವಾರು ಎಂಬ ಆದಿವಾಸಿಗಳು ಇದ್ದು ಜನಗಣತಿಯ ಪ್ರಕಾರ ೫೮೪ ಜನರಿದ್ದು ಜಿಲ್ಲೆಯ ಕಡಿಮೆ ಜನಸಂಖ್ಯೆಯನ್ನು ಹೊಂದಿರುವ ಬುಡಕಟ್ಟುಗಳಲ್ಲಿ ಈ ಬುಡಕಟ್ಟು ಒಂದಾಗಿದೆ. ಈ ಚೆಂಚು ಬುಡಕಟ್ಟು ಯಾದಗಿರಿ ತಾಲೂಕಿನ ಬಾಚವಾರ, ಯಂಪಾಡ ಮತ್ತು ಪಸಪುಲ್ ಹಾಗೂ ಸೇಡಂ ತಾಲೂಕಿನ ಮೊತಕಪಲ್ಲಿಯಲ್ಲಿ ಇರುವುದು ಕಂಡುಬಂದಿದೆ.

ಈ ಚೆಂಚು ಸಮುದಾಯ ವಾಸಿಸುವ ಪ್ರದೇಶ ಸಾಮಾನ್ಯವಾಗಿ ಬೆಟ್ಟಗುಡ್ಡಗಳಿಂದ ಆವೃತ್ತವಾಗಿದ್ದು ಅವರ ಮೂಲಕಸಬು ಬೇಟೆಯಾಡುವದು, ಇದಕ್ಕೆ ಅನುಕೂಲಕರವಾರದ ಪ್ರದೇಶದಲ್ಲಿ ಈ ಜನರು ವಾಸಿಸುತ್ತಾರೆ. ಈ ಬುಡಕಟ್ಟು ಹೆಚ್ಚಾಗಿ ತೆಲಗು ಮಾತನಾಡುತ್ತಿದ್ದು, ಆಂಧ್ರದಿಂದ ವಲಸೆ ಬಂದವರು ಎಂದು ಗೊತ್ತಾಗಿದೆ. ಈಗ ಅವರು ಕನ್ನಡ ಮಾತನಾಡುತ್ತಾರೆ. ಇವರು ಈಗ ಪ್ರಾಣಿ ಸಾಕಾಣಿಕೆ, ಕೃಷಿ, ಕೂಲಿ ಇತ್ಯಾದಿಯಲ್ಲಿ ತೊಡಗಿದ್ದು, ಬಿಡುವಿನ ವೇಳೆಯಲ್ಲಿ ಬೇಟೆಯಾಡಲು ಹೋಗುತ್ತಾರೆ. ಇವರು ಬೆಟ್ಟ-ಗುಡ್ಡಗಳಲ್ಲಿ ಭೂಮಿಯಲ್ಲಿ ಬೆಳೆಯುವ ಚಂಚುಗಡ್ಡೆಯನ್ನು ಅಗಿದು ತಿನ್ನುತ್ತಿದ್ದಾರೆ. ಇವರ ಸಾಂಪ್ರದಾಯಿಕ ಉಡುಗೆ ಪಂಜೆ ಮತ್ತು ಅಂಗಿ ಗಂಡಸರು ಉಡುತ್ತಾರೆ. ಸೀರೆ ಕುಪ್ಪಸ ಹೆಣ್ಣುಮಕ್ಕಳು ತೊಡುತ್ತಾರೆ. ಇವರಲ್ಲಿ ಪುರ್ನವಿವಾಹ ಮತ್ತು ವಿವಾಹ ವಿಚ್ಛೇದನ ಜಾರಿಯಲ್ಲಿ ಇದ್ದು, ಇವರಲ್ಲಿ ಪುರೋಹಿತ ವರ್ಗ ಇರುವದಿಲ್ಲ. ಬುಡಕಟ್ಟಿನ ಹಿರಿಯರೆ ಮದುವೆ ಸಮಾರಂಭದಲ್ಲಿ, ಪೂಜೆ ಪುನಸ್ಕಾರಗಳನ್ನು ನಿರ್ವಹಿಸುತ್ತಾರೆ. ಇವರು ಆಂಜನೇಯ ದೇವರು ಮತ್ತು ರಾಮ ದೇವರನ್ನು ಪೂಜಿಸುತ್ತಿದ್ದು, ಇವರ ಬೆಡಗುಗಳು ಬೊಮ್ಮರ ಸಮು,ಕುಕ್ಕಲವಾರು, ದಾಸರ್ ಇತ್ಯಾದಿ ಇದ್ದು ಬುಡಕಟ್ಟಿನ ನಿಯಮಗಳನ್ನು ಕಟ್ಟು ನಿಟ್ಟಾಗಿ ಪಾಲಿಸುತ್ತಾರೆ. ಈ ಸಮುದಾಯ ಯಾವದೇ ರೀತಿಯ ಸ್ಥಿರಾಸ್ಥಿ ಹೊಂದಿರುವದಿಲ್ಲ. ಈಗೀಗ ಸರಕಾರ ಕೆಲವರಿಗೆ ಜಮೀನು ನೀಡಿದ್ದು, ಕೆಲವರಿಗೆ ಮನೆಗಳನ್ನು ನಿರ್ಮಿಸಿಕೊಟ್ಟಿದೆ. ಬುಡಕಟ್ಟು ಅಭಿವೃದ್ಧಿ ಯೋಜನೆಯಡಿ

ಹಲವಾರು ಅಭಿವೃದ್ಧಿ ಕಾರ್ಯಕ್ರಮವನ್ನು ಹಾಕಿಕೊಂಡಿದ್ದು, ಇನ್ನು ಈ ಸಮುದಾಯದ ಬದುಕು ಸುಧಾರಣೆ ಕಂಡಿರದಿದ್ದದ್ದು ದುರದೃಷ್ಟಕರ ಸಂಗತಿಯೇ ಸರಿ.

**ಭಿಲ್, ಭಿಲ್‌ಗರಾಸಿಯ**

ಭಿಲ್ಲರು ಎಂಬುವದು ಬಹುಶಃ ಬಿಲ್ಲನಿಂದ ಬಂದಿದೆ. ಭಿಲ್ಲರು ಉತ್ತಮ ಬಿಲ್ಲುಗಾರರು. ಈ ಬುಡಕಟ್ಟಿನ ಜನರು ಹೆಚ್ಚಾಗಿ ರಾಜಸ್ಥಾನ, ಗುಜರಾತ, ಮಧ್ಯಪ್ರದೇಶ, ರಾಜ್ಯಗಳಲ್ಲಿ ವಾಸವಾಗಿದ್ದಾರೆ. ಭಿಲ್ ಎಂಬವದು ಇವರ ಆಡುಭಾಷೆ. ಇವರು ಪೂರ್ವ ದ್ರಾವಿಡರೆಂದು ವಿದ್ವಾಂಸರಾದ ಹ್ಯಾಡೋಸ್, ರಿಸ್ಲೆ, ಕ್ರೂಕ್ ಅಭಿಪ್ರಾಯ ಪಟ್ಟಿದ್ದಾರೆ. ಭಿಲ್ಲರು ಪ್ರೊಟೊ ಅಸ್ಟ್ರಲಾಯಿಡರೆಂದು, ಗುಹಾ ಎಂಬುವವರು ಅಭಿಪ್ರಾಯ ಪಟ್ಟಿದ್ದಾರೆ. ಸಂಸ್ಕೃತ ಸಾಹಿತ್ಯದಲ್ಲಿ ಬರುವ ನಿಷಾಧರು ಇಂದಿನ ಭಿಲ್ಲರೆಂದು ಊಹಿಸಲಾಗಿದೆ. ಭಿಲ್ಲರು, ನೇಗಿಲ, ಕೃಷಿಮಾಡಿ ಜೋಳ, ಗೋಧಿ, ಸಜ್ಜೆ, ಬಾರ್ಲಿ, ಮುಸಕಿನ ಜೋಳ, ಬತ್ತ, ಇತ್ಯಾದಿ ಬೆಳೆಗಳನ್ನು ಬೆಳೆಸುವರು. ಎತ್ತು, ಎಮ್ಮೆ, ಹಸು, ಕೋಳಿ ಮುಂತಾದವುಗಳನ್ನು ಸಾಕುವರು. ಕೆರೆಯ ಕಟ್ಟೆಗಳಲ್ಲಿ ಮೀನು ಹಿಡಿಯುವುದು, ಬೇಟೆಯಾಡುವುದು ಭಿಲ್ಲರ ಹವ್ಯಾಸಗಳಾಗಿವೆ.

ಭಿಲ್ಲರ ಹಳ್ಳಿಗಳು, ಬೆಟ್ಟದ ಇಳಿಜಾರು ಇಲ್ಲವೆ ಹೊಳೆಯ ಬದಿಯಲ್ಲಿರುತ್ತವೆ. ಹಳ್ಳಿಗಳ ಹೊರ ವಲಯದಲ್ಲಿ ಗ್ರಾಮದೇವತೆಗಳ ಗುಡಿಗಳನ್ನು, ಹಿರಿಯರ ಸ್ಮಾರಕಗಳನ್ನು ಕಾಣಬಹುದು. ಅರಣ್ಯ ವಸ್ತುಗಳಿಂದ ಮನೆಕಟ್ಟುವರು. ಗಂಡಸರು ಸೊಂಟಕ್ಕೆ ಪಟ್ಟಿ-ಕಟ್ಟಿ ಅದನ್ನು ಮೊಳಕಾಲಿನವರೆಗೆ ಇಳಿಬಿಡುವರು ಹಾಗೂ ಅಂಗಿ ಹಾಕಿಕೊಂಡು ತಲೆಗೊಂದು ಪೇಟಾ ಸುತ್ತುವರು. ಹೆಂಗಸರು ಸೀರೆಯುಟ್ಟು ರವಿಕೆ ಧರಿಸುವರು. ಭಿಲ್ಲರು ಪಿತೃಗಳನ್ನು ಆರಾಧಿಸುವರು. ಪ್ರಾಣಿ ಇಲ್ಲವೆ ಸಸ್ಯಗಳನ್ನು ಆರಾಧಿಸುವ ಕುಲಗಳಿವೆ. ತಂದೆಯ ತಂಗಿಯನ್ನು ಮತ್ತು ತಾಯಿಯ ಅಣ್ಣನ ಮಗಳನ್ನು ವರ ಮದುವೆಯಾಗಬಹುದು. ಗಂಡ ಸತ್ತರೆ ವಿಧವೆ ಗಂಡನ ತಮ್ಮನನ್ನೇ ಮದುವೆಯಾಗುವ ಕ್ರಮ ಬಳಕೆಯಲ್ಲಿದೆ. ಭಿಲ್ಲರು ಯಜಮಾನನ್ನು 'ವಾಸವ' ಎನ್ನುವರು. ಅವನು ಜನಗಳ ಸಮಸ್ಯೆಯನ್ನು ಪರಿಹರಿಸುವದಲ್ಲದೆ ಹಬ್ಬ-ಹರಿದಿನಗಳಲ್ಲಿ ಪ್ರಧಾನ ಪಾತ್ರವಹಿಸುವನು. 'ವಾರ್ತಾನಿಯ' ಎಂಬುವವನಿಗೆ ಸುದ್ದಿ ಸಾರುವ ಕೆಲಸ, ಹತ್ತು ಹನ್ನೆರಡು ಹಳ್ಳಿಗಳಿಗೊಬ್ಬ ದೇಶಮುಖ ಇದ್ದು ಈತ ಸಮುದಾಯದವರ ಯೋಗಕ್ಷೇಮವನ್ನು ನೋಡಿಕೊಳ್ಳುವನು.

ಭಿಲ್ಲರು ಅಗ್ನಿ ಆರಾಧಕರು, ಹಿರಿಯರ ಪ್ರೇತಾತ್ಮಗಳನ್ನು ಆರಾಧಿಸಿ ವರ್ಷಕೊಮ್ಮೆ ಸುಗ್ಗಿಯ ಕಾಲದಲ್ಲಿ ಜಮೀನುಗಳಲ್ಲಿ ಹಬ್ಬ ಆಚರಿಸುವರು. ಹಳ್ಳಿಗಳಲ್ಲಿ ತೆರೆದ ಗುಡಿಸಲುಗಳು ಇದ್ದು ತಮ್ಮ ದೇವತೆಗಳನ್ನು ಅಲ್ಲಿ ಇಟ್ಟು ಪೂಜಿಸುವರು. 'ಪುಂಜಾರೋ' ದೇವರ ಪೂಜಾರಿ ಆದರೆ ಭಗತೆ ಇಲ್ಲವೆ ಬಡವ ಎಂಬುವವರಿದ್ದು ಇವರು ಭೂತ ಪ್ರೇತಗಳನ್ನು ಆರಾಧಿಸಿ ಮಾಟ ಮಂತ್ರಗಳನ್ನು ಮಾಡಿಸುವರು. ಮಣ್ಣಿನಿಂದ ಮಾಡಿದ ಕುದುರೆ, ಜೇನು ಗೂಡಿನ ಆಕಾರದ ಪಾತ್ರೆಗಳನ್ನು ಅಲ್ಲದೆ, ಕೋಳಿ ಕುರಿ ಮತ್ತು ಮದ್ಯವನ್ನು ಭೂತಗಳಿಗೆ ಸಮರ್ಪಿಸುವರು.

ಮೃತ ವ್ಯಕ್ತಿ ಕನಸಿನಲ್ಲಿ ಬಂದು ಅವರ ಕಷ್ಟಗಳನ್ನು ನಿವಾರಿಸಲು ಸಹಾಯ ಮಾಡುವನೆಂಬ ನಂಬಿಕೆ ಇವರಲ್ಲಿ ಉಂಟು. ೧೯೯೧ರ ಜನಗಣತಿಯ ಪ್ರಕಾರ ಗುಲಬರ್ಗಾ ಜಿಲ್ಲೆಯಲ್ಲಿ ಭಿಲ್ಲ ಬುಡಕಟ್ಟಿನವರು ಪತ್ತೆಯಾಗಿದ್ದಾರೆ. ಆದರೆ ನಮ್ಮ ರಾಜಕೀಯ ವ್ಯಾಪ್ತಿಯಲ್ಲಿ ಈ ಸಮುದಾಯ ಕಂಡುಬಂದಿಲ್ಲ. ಇದು ಪ್ರಜಾಪ್ರಭುತ್ವ ಆಡಳಿತದ ವ್ಯಂಗ್ಯ.

**ಕೊರೆಗ**

ಕೊರೆಗ ಸಮುದಾಯವು ಬೇಟೆಯಾಡಿ ಅಲೆಮಾರಿ ಜೀವನವನ್ನು ನಡೆಸುತ್ತಿದ್ದರು. ಪರಿಶಿಷ್ಠ ಬುಡಕಟ್ಟುಗಳ ಪೈಕಿ ಪ್ರಾಯಶಃ ಇವರೇ ಎಲ್ಲರಿಗಿಂತ ಬಡವರು. ಬೇಸಾಯ, ಬುಟ್ಟಿ ಹೆಣೆಯುವುದು ಇತ್ಯಾದಿಗಳನ್ನು ರೂಢಿಸಿಕೊಂಡಿದ್ದಾರೆ. ಕೊರಗರು ಹೆಚ್ಚಾಗಿ ಮೈಸೂರು ಜಿಲ್ಲೆಯಲ್ಲಿ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ೧೯೯೧ರ ಜನಗಣತಿಯಲ್ಲಿ ಗುಲಬರ್ಗಾ ಜಿಲ್ಲೆಯಲ್ಲಿ ಕೆಲವರು ತಾವು ಕೊರಗ ಸಮುದಾಯಕ್ಕೆ ಸೇರಿದವರು ಎಂದು ಹೇಳಿಕೊಂಡವರು ಎಂದು ಮಾಹಿತಿ ನೀಡಿದ್ದಾರೆ. ಭೂತ ಪಿಶಾಚಿಗಳನ್ನು ನಂಬಿ ಪೂಜಿಸುತ್ತಾ ಬಂದಿದ್ದಾರೆ. ನೀಲಗಿರಿಯ ತೊಡವ ಸಮುದಾಯದಂತೆ ಕೊರಗರು ಸಣ್ಣ ಕೊಪ್ಪಲುಗಳಲ್ಲಿ ವಾಸಿಸುತ್ತಾರೆ. ಅವರಿಗೆ ತಮ್ಮದೇ ಆದ ಒಂದು ಆಡುಭಾಷೆಯಿದೆ. ಸೂರ್ಯರಾಧನೆ, ಪಿತೃ ಪೂಜೆ ಇತ್ಯಾದಿ ಅವರ ಸಾಂಪ್ರದಾಯದಲ್ಲಿವೆ. ವಿವಾಹ ವಿಚ್ಛೇದನ ಮತ್ತು ವಿಧವಾ ವಿವಾಹಗಳು ಅವರಲ್ಲಿ ಪ್ರಚಲಿತವಾಗಿದೆ. ಅವರು ಮೃತರನ್ನು ಹೂಳುತ್ತಾರೆ.

## ಇರುಳರು

ಈ ಬುಡಕಟ್ಟು ಸಮುದಾಯವು ನೀಲಗಿರಿ ಬೆಟ್ಟ ಪ್ರದೇಶದಲ್ಲಿರುವ ಹಿಂದುಳಿದ ಸಮುದಾಯ ದ್ರಾವಿಡ ಭಾಷೆಯನ್ನಾಡುತ್ತಾರೆ. ಕುಬ್ಜರು, ಕಪ್ಪು ಚಪ್ಪಟೆ ಮೂಗಿನವರು ಅನೇಕರು ಕಾಫಿ ತೋಟಗಳಲ್ಲಿ ಕೂಲಿಗಳಾಗಿದ್ದಾರೆ. ಇವರ ವೃತ್ತಿ ಬೇಟೆಯಾಡುವದು ಅರಣ್ಯದಲ್ಲಿ ಸಿಗುವ ಜೇನು ಪದಾರ್ಥಗಳನ್ನು ಶೇಖರಿಸುವದು ಮುಂತಾದ ವೃತ್ತಿಯನ್ನು ಅವಲಂಬಿಸಿದ್ದಾರೆ. ೧೯೯೧ರಲ್ಲಿ ಈ ಸಮುದಾಯ ಗುಲಬರ್ಗಾ ಜಿಲ್ಲೆಯಲ್ಲಿ ಪತ್ತೆಯಾಗಿದೆ.

## ಕುಡಿಯ, ಮೇಲಕುಡಿ

ಈ ಸಮುದಾಯವು ಕರ್ನಾಟಕದ ಬುಡಕಟ್ಟುಗಳಲ್ಲಿ ಒಂದಾಗಿದ್ದು ಇದು ಸಾಮಾನ್ಯವಾಗಿ ಕೊಡಗಿನ ಗುಡ್ಡ ಗಾಡಿನಲ್ಲಿ ಹಾಗೂ ಇಳಿಜಾರುಗಳಲ್ಲಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಕಂಡುಬರು ತ್ತಾರೆ. ಇವರ ಮಾತೃಭಾಷೆ ತೆಲುಗು ಇವರು ಸಾಮಾನ್ಯವಾಗಿ ವ್ಯವಸಾಯವನ್ನು ಅನುಸರಿಸುತ್ತಿದ್ದು ಕಾಫಿ ತೋಟಗಳಲ್ಲಿ ಕೆಲಸವನ್ನು ನಿರ್ವಹಿಸುತ್ತಾರೆ. ಇವರು ಜೀವನೋಪಾಯಕ್ಕಾಗಿ ಹಂದಿ, ಕೋಳಿ ಮತ್ತು ದನಕರು ಸಾಕುತ್ತಾರೆ. ಇವರು ಕಾಳಿ ಮತ್ತು ಕಾಮದೇವರು ಇವರ ನೆಚ್ಚಿನ ದೇವರಾಗಿದ್ದು, ಭೈರವ ಮತ್ತು ಪಾಂಡವ ಹಾಗೂ ಭೂತ ಪಿಶಾಚಿಗಳಾದ ಕಾಲುರ್ತಿ, ಪಂಜರಲು ಮತ್ತು ಗುಳಿಗೆ ನಂಬುತ್ತಾರೆ. ವಿವಾಹ ವಿಚ್ಛೇದನ ಪುನರ್ ವಿವಾಹ ಇತ್ಯಾದಿ ಅನುಸರಿಸುತ್ತಿದ್ದು ಸಾಮಾನ್ಯವಾಗಿ ಸತ್ತವರನ್ನು ಹೂಳುತ್ತಾರೆ. ಈ ಮೇಲ ಕುಡಿಯ ಸಮುದಾಯವು ೧೯೯೧ರ ಜನಗಣತಿಯ ಪ್ರಕಾರ ಗುಲಬರ್ಗಾ ಜಿಲ್ಲೆಯಲ್ಲಿ ಕಂಡುಬಂದಿದೆ. ಆದರೆ ರಾಜಕೀಯ ವ್ಯಾಪ್ತಿಯಲ್ಲಿ ಕಂಡುಬಂದಿಲ್ಲ.

## ಹಕ್ಕಿ ಪಿಕ್ಕಿ

ಹಕ್ಕಿ ಪಿಕ್ಕಿ ಎಂಬುವ ಪದವು ಅವರ ಸಂಪ್ರದಾಯಿಕವಾಗಿ ವೃತ್ತಿಯಿಂದ ಬಂದಿದೆ. "ಹಕ್ಕಿ" ಎಂಬುವ ಕನ್ನಡ ಪದ "ಪಕ್ಷಿ" ಮತ್ತು "ಪಿಕ್ಕಿ" ಎಂದರೆ ಪ್ರತಿಧ್ವನಿ. ಈ ಸಮುದಾಯವು ಸಾಮಾನ್ಯವಾಗಿ ಗುಜರಾತ್, ರಾಜಸ್ಥಾನ್ ಗಡಿಭಾಗದಲ್ಲಿ ವಾಸಿಸುತ್ತಿದ್ದು ಕ್ರಮೇಣವಾಗಿ ಆಂಧ್ರದ ಕಡೆಗೆ ವಲಸೆ ಬಂದಿರುವದು ಕಂಡುಬರುತ್ತದೆ. ಈಗ ಹಕ್ಕಿ ಪಿಕ್ಕಿ ಸಮುದಾಯವು

ಕರ್ನಾಟಕದ ಮೈಸೂರು, ಕೋಲಾರ, ಶಿವಮೊಗ್ಗ ಮತ್ತು ಹಾಸನ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ೧೯೮೧ ರ ಜನಗಣತಿಯ ಪ್ರಕಾರ ಹಕ್ಕಿ ಪಿಕ್ಕಿ ಜನಸಂಖ್ಯೆಯು ೩೩೮೭ ಇದ್ದು ಗುಲಬರ್ಗಾ ಜಿಲ್ಲೆಯಲ್ಲಿ ಸಹ ಈ ಸಮುದಾಯ ಕಂಡುಬಂದಿದೆ.

ಹಕ್ಕಿ ಪಿಕ್ಕಿ ಸಮುದಾಯವು ಇಂಡೋ-ಆರ್ಯನ್ ಭಾಷೆಯನ್ನು ಮಾತಾಡುತ್ತಾರೆ. "ವಾಘ್ರೀ" ಎಂಬ ಭಾಷೆಯನ್ನು ಮನೆಯಲ್ಲಿ ಬಳಸುತ್ತಿದ್ದು, ಕನ್ನಡ ಭಾಷೆಯನ್ನು ಹೊರಗಡೆ ಮಾತಾಡುತ್ತಾರೆ. ತಮಿಳು, ತುಳು, ಮಲೆಯಾಳಿ ಹಾಗೂ ಹಿಂದಿ ಭಾಷೆಯನ್ನು ಬಲ್ಲವರಾಗಿದ್ದಾರೆ. ಇವರು ಮಾಂಸಹಾರಿಗಳಾಗಿದ್ದು, ಭತ್ತ, ರಾಗಿ, ಜೋಳ ಇತ್ಯಾದಿ ಇವರ ಆಹಾರ ವಾಗಿದ್ದು, ಮಧ್ಯವನ್ನು ಸ್ತ್ರೀ-ಪುರುಷರಿಬ್ಬರು ಕುಡಿಯುತ್ತಾರೆ.ಈ ಸಮುದಾಯದಲ್ಲಿ ತಾಯಿಯ ಅಣ್ಣನ ಮಗಳು ಅಥವಾ ತಂದೆಯ ತಂಗಿಯ ಮಗಳನ್ನು ಮದುವೆಯಾಗುತ್ತಾರೆ. ಈಗೀಗ ಇವರ ವೈವಾಹಿಕ ಜೀವನದಲ್ಲಿ ಸಾಕಷ್ಟು ಬದಲಾವಣೆಯಾಗಿರುವದು ಕಂಡುಬಂದಿದೆ. ೧೯೯೩ರ ಪಂಚಾಯತ್ ರಾಜ್ ಅಧಿನಿಯಮದ ಪ್ರಕಾರ ಬುಡಕಟ್ಟು ಮೀಸಲಾತಿ ಇದ್ದರು ರಾಜಕೀಯದಿಂದ ಈ ಸಮುದಾಯ ದೂರ ಉಳಿದಿದೆ.

## ಪಲ್ಲಿಯನ್

ಪಲ್ಲಿಯನ್ ಸಮುದಾಯವನ್ನು ಪಲ್ಲಿಯರ್, ಪೋಲಿಯರ್, ಪಾಲನಿ ಇತ್ಯದಿ ಹೆಸರುಗಳಿಂದ ಕರೆಯಲಾಗಿದೆ. ಮಲಯಿ, ಪಲಿಯರ್ ಎಂಬುವದು ಎರಡು ಪದಗಳನ್ನು ಒಳಗೊಂಡಿದೆ. 'ವನ' ಪಲಿಯರ್ ಮತ್ತು 'ದಿವ್ಯ' ಪಲಿಯರ್. ಮಲಯಿ ಪಲಿಯರ್ ಎಂದರೆ ಗುಡ್ಡದ ಮೇಲೆ ವಾಸಿಸುವವರು. ತಮಿಳುನಾಡಿನಲ್ಲಿ ಆಹಾರ ಸಂಗ್ರಹಿಸುವ ಅಲೆಮಾರಿ ಸಮುದಾಯಗಳಲ್ಲಿ ಪಲ್ಲಿಯನ್ ಸಮುದಾಯ ಒಂದಾಗಿದೆ. ಪಲ್ಲಿಯನ್ ಸಮುದಾಯದ ನಂಬಿಕೆಯ ಪ್ರಕಾರ ಪಾಲಿನಿ ಗುಡ್ಡದ ಮೇಲೆ ವಾಸಿಸುವವರು. ಪಲ್ಲಿಯನ್ ಎಂಬುವ ಪದವು ಪಲಾನಿಯನ್ ಎಂಬುವದು ತಮಿಳಿನಲ್ಲಿ ಪಾಲನಿಯ ವ್ಯಕ್ತಿ. ಥರ್ಸ್ಟನ್ ಪ್ರಕಾರ ಆಹಾರ ಸಂಗ್ರಹಣೆಗಾಗಿ ನಿರಂತರವಾಗಿ ಮಧುರಾಯಿ, ತಂಜಾವೂರು, ಪುಡಕೊಟ್ಟಾಯಿ ಪ್ರದೇಶಗಳಲ್ಲಿ ವಾಸಿಸುವ ಒಂದು ಚಿಕ್ಕ ಗುಂಪು, ಇವರ ಭಾಷೆ ತಮಿಳು.

ಪಲ್ಲಿಯನ್ ಸಮುದಾಯವು ಮಾಂಸಹಾರಿಗಳಾಗಿದ್ದು ಭತ್ತ, ರಾಗಿ, ಜೋಳ, ಸೇಂಗಾ ಇತ್ಯಾದಿ ಊಟ ಮಾಡುತ್ತಾರೆ. ಸ್ತ್ರೀ-ಪುರುಷರಿಬ್ಬರು ಮದ್ಯ ಕುಡಿಯುತ್ತಾರೆ. ಬೀಡಿ, ಸಿಗರೇಟು, ತಂಬಾಕು ಇತ್ಯಾದಿ ಚಟಗಳು ಈ ಸಮುದಾಯಗಳಿಗಿವೆ. ಇವರು ಸಹೋದರ ಮಾವನ ಮಕ್ಕಳನ್ನು ಮದುವೆಯಾಗುತ್ತಾರೆ. ಏಕ ಪತ್ನಿ ಪದ್ಧತಿಯಲ್ಲಿ ಜಾರಿಯಲ್ಲಿದ್ದು ಕೆಲವು ಕಡೆ ಬಹು ಪತ್ನಿ ಇರುವದು ಕಂಡುಬಂದಿದೆ. ೧೯೮೧ರ ಜನಗಣತಿಯ ಪ್ರಕಾರ ಪಲ್ಲಿಯನ್ ಸಮುದಾಯವು ಗುಲಬರ್ಗಾ ಜಿಲ್ಲೆಯ ವ್ಯಾಪ್ತಿಯಲ್ಲಿ ಕಂಡುಬಂದಿದ್ದು ರಾಜಕೀಯದಿಂದ ದೂರ ಉಳಿದಿದ್ದು ಪ್ರಸ್ತುತ ಸಮೀಕ್ಷೆಯಿಂದ ತಿಳಿದು ಬಂದಿದೆ.

**ರಠಾವ**

ರಠಾವ ಸಮುದಾಯವು ಗುಜರಾತಿನ ರಟ್ಟಸ್ವಾರಮನಲ್ಲಿ ಅಥವಾ ಅರಣ್ಯ ಹಾಗೂ ಗುಡ್ಡಗಾಡಿನಲ್ಲಿ ವಾಸಿಸುತ್ತಾರೆ. ಈ ಸಮುದಾಯವನ್ನು 'ರಠಾವ ಕೋಳಿ' ಎಂದು ಕರೆಯುತ್ತಾರೆ. ಈ ಸಮುದಾಯವು ಛೋಟು ನಾಗಪುರ್, ಉದಯಪುರ, ಜಬುಗಂ ಹಾಗೂ ಬರೋಡ ಜಿಲ್ಲೆಯಿಂದ ಈ ಕಡೆ ವಲಸೆ ಬಂದಿರಬಹುದೆಂದು ಊಹಿಸಲಾಗಿದೆ. ೧೯೮೧ರ ಜನಗಣತಿಯ ಪ್ರಕಾರ ಗುಜತಾತ್‌ನಲ್ಲಿ ಈ ಸಮುದಾಯವು ೩೦೮,೬೪೦ ಇದೆ, ಗುಜರಾತಿ ಭಾಷೆಯನ್ನು ಮಾತಾಡಲು ಮತ್ತು ಬರೆಯಲು ಬಳಸುತ್ತಾರೆ. ಈ ಸಮುದಾಯದ ಸಂಪ್ರದಾಯಿಕ ಉಡುಗೆ 'ಲಂಗೋಟ' ಮತ್ತು'ಫೇಂಟಾ' ಇವರು ಮಾಂಸಹಾರಿಗಳಾಗಿದ್ದು ಮಾಂಸ, ಮೀನು, ಕೋಳಿ, ತತ್ತಿ ಇತ್ಯದಿ ಊಟಮಾಡುತ್ತಾರೆ.

ಇವರ ವಿವಾಹ ಪದ್ಧತಿಯು ಸರಳವಾಗಿದ್ದು ೧೨ ರಿಂದ ೨೦ ವರ್ಷಗಳ ನಡುವೆ ನಡೆಯುತ್ತದೆ. ತಂದೆ ತಾಯಿಗಳ ಒಪ್ಪಿಗೆಯಂತೆ ಇವರ ವಿವಾಹ ಜರುಗುತ್ತದೆ. ವಿವಾಹ ವಿಚ್ಛೇದನ ಮತ್ತು ವಿಧವಾ ವಿವಾಹಗಳಿಗೆ ಅನುಮತಿ ಇದೆ. ಭೂ ವ್ಯವಸಾಯ ಇವರ ಪ್ರಮುಖ ವೃತ್ತಿಯಾಗಿದೆ. ಇನ್ನುಳಿದ ಕೆಲವರು ಕೂಲಿಕಾರರಾಗಿ ಜೀವನ ಸಾಗಿಸುವದು ಸಾಮಾನ್ಯ. ಇವರ ರಾಜಕೀಯ ವ್ಯವಸ್ಥೆಯ ತುಂಬಾ ಪ್ರಾಚೀನವಾಗಿದ್ದು ಅದರಲ್ಲಿಯೇ ಒಬ್ಬ ಹಿರಿಯರನ್ನು ತಮ್ಮ ಸಮಿತಿಯ ವ್ಯಾಜ್ಯಗಳನ್ನು ಎಲ್ಲಾರ ಒಪ್ಪಿಗೆಯ ಮೇರೆಗೆ ತೀರ್ಮಾನಿಸುತ್ತಾರೆ. ಅಪರಾಧಿಯು ಈ ಸಮಿತಿಯ ತೀರ್ಮಾನಕ್ಕೆ ಬದ್ದನಾಗದಿದ್ದರೆ ಬಹಿಷ್ಕಾರ ಹಾಕಲಾಗುತ್ತದೆ.

ರಶಾವ ಸಮುದಾಯವು ಹಿಂದುಗಳಾಗಿದ್ದು ೧೯೮೧ರ ಜನಗನತಿಯಲ್ಲಿ ನೂರಕ್ಕೆ ನೂರರಷ್ಟು ಹಿಂದುಗಳಾಗಿದ್ದು ಪ್ರಸ್ತುತ ಸಮಿಕ್ಷೇಯಿಂದ ಕಂಡುಬಂದಿದೆ. ಗುಲಬರ್ಗಾ ಜಿಲ್ಲೆಯಲ್ಲಿ ಈ ಸಮುದಾಯ ಕಂಡುಬಂದಿದ್ದು ರಾಜಕೀಯ ವ್ಯಾಪ್ತಿಯಲ್ಲಿ ಕಂಡುಬಂದಿರುವದಿಲ್ಲ.

**ಅಡಿಯನ್**

ಕೇರಳವು, ಈ ಸಮುದಾಯಕ್ಕೆ ಮೂಲನೆಲೆಯಾಗಿದೆ. ಇವರು ತಮ್ಮನ್ನು 'ರವೂರ್' ಎಂದು ವರ್ಣಿಸಿಕೊಂಡಿದ್ದಾರೆ. ಕೆಆ 1962ರಲ್ಲಿ ಲೂಯಿಜ್ ಎಂಬ ತಜ್ಞರು ಅಡಿಯನ್ ಎಂಬ ಸಮುದಾಯವು ಹಳೆಯ ನಿಲುಮದ ಪ್ರಕಾರ ಈ ರೀತಿ ಇದೆ. ಅವರು ಇತರರಿಂದ ಆರ್ (ಆರು) ಅಡಿ (ಫೀಟ್) ದೂರ ಉಳಿದಿದ್ದಾರೆ. ಆದರೆ ಈಗ ಅವರ ಹೆಸರು ಬದಲಾಗಿದ್ದು ಅಡಿ ಎಂದರೆ ಕಡಿಮೆ ಎಂಬ ಅರ್ಥದಲ್ಲಿ ಬಳಸುತ್ತಾರೆ. ಇವರು ವ್ಯಾನಾಡು ಮತ್ತು ಕಣ್ಣನೂರು ಎಂಬ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಾರೆ. ಇವರು ದ್ರಾವಿಡ ಭಾಷೆಯಿಂದ ಉತ್ಪತ್ತಿಯಾದ ಕನ್ನಡ ಭಾಷೆಯಂತೆ ಇರುವ ಆದಿ ಭಾಷಯನ್ನು ಮಾತಾಡುತ್ತಾರೆ. ಆದೇ ರೀತಿ ಮಲೆಯಾಳಂ ಭಾಷೆಯನ್ನು ಓದಲು ಮತ್ತು ಬರೆಯಲು ಉಪಯೋಗಿಸುತ್ತಾರೆ.

ಇವರು ಮಾಂಸಹಾರಿಗಳಾಗಿದ್ದು ಅನ್ನ ಮತ್ತು ತರಕಾರಿ ಬಳಸುತ್ತಿದ್ದು ತೆಂಗಿನ ಎಣ್ಣೆ ಮತ್ತು ತಾಳೆ ಎಣ್ಣೆಯನ್ನು ಅಡಿಗೆಗೆ ಉಪಯೋಗಿಸುತ್ತಾರೆ. ಪುರುಷರು ಮದ್ಯ ಸೇವಿಸುಯತ್ತಾರೆ. ಇವರು ಅತ್ತೆ ಅಥವಾ ಮಾವನ ಮಗಳನ್ನು ಮದುವೆಯಾಗುತ್ತಾರೆ. ಏಕ ಪತ್ನಿತ್ವ ಪದ್ಧತಿ ಜಾರಿಯಲ್ಲಿದೆ. ವಿವಾಹ ವಿಚ್ಛೇದನ ಹಾಗೂ ಮರು ವಿವಾಹಗಳಿಗೆ ಈ ಸಮುದಾಯ ಭೂ ರಹಿತರಾಗಿರುತ್ತಾರೆ. ಆದರೆ ಈಗೀಗ ಕೆಲವರು ಭೂಮಿಯನ್ನು ಹೊಂದಿದ್ದಾರೆ. ಇವರ ಮೂಲ ಉದ್ಯೋಗ ವ್ಯವಸಾಯ ಕೂಲಿಕಾರರಾಗಿದ್ದಾರೆ.

ಈ ಸಮುದಾಯ ಆಹಾರಕ್ಕಾಗಿ ದೇಶದ ಎಲ್ಲಾ ಕಡೆಗೆ ವಲಸೆ ಹೋಗುವದು ಸರ್ವಸಾಮಾನ್ಯವಾಗಿದೆ. ಅದೇ ರೀತಿ 1981 ಮತ್ತು 1991ರ ಜನಗಣತಿಯ ಪ್ರಕಾರ ಈ ಸಮುದಾಯ ಕರ್ನಾಟಕದ ಕೆಲವು ಭಾಗಗಳಲ್ಲಿ ಕಂಡುಬಂದಿದ್ದು ಗುಲಬರ್ಗಾ ಜಿಲ್ಲೆಯಲ್ಲಿ ನೋಂದಣಿಯಾಗಿದೆ.

**ಕೋಳಿ ಧೋರ್**

ಈ ಕೋಳಿಧೋರ್ ಬುಡಕಟ್ಟು ಸಮುದಾಯವು ಭಾರತದಲ್ಲಿ ಮಹಾರಾಷ್ಟ್ರ, ಕರ್ನಾಟಕ, ಗುಜರಾತ್ ಮತ್ತು ರಾಜಸ್ಥಾನಿನಲ್ಲಿ ಹಾಗೂ ಕೇಂದ್ರಾಡಳಿತ ಪ್ರದೇಶಗಳಾದ ದಾದ್ರ ಮತ್ತು ನಾಗರಹವೇಲಿಯಲ್ಲಿ ಕಂಡುಬರುತ್ತವೆ.ಈ ಕೋಳಿಧೋರ್ ಎಂಬ ಪದವು ಧೋರ್ ಎಂಬ ಪದದಿಂದ ಉತ್ಪತ್ತಿಯಾಗಿದೆ. ಧೋರ್ ಎಂದರೆ ದನಕರು ಎಂದು ಅರ್ಥ. ಈ ಸಮುದಾಯದ ಜನಸಂಖ್ಯೆ 1981ರಲ್ಲಿ 692 ಇತ್ತು. ಈ ಸಮುದಾಯವು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುತ್ತದೆ. ಇವರ ಭಾಷೆ ಕೊಂಕಣಿ ಮತ್ತು ದೇವನಾಗರಲಿಪಿ ಇವರು ಮಾಂಸಹಾರಿಗಳಾಗಿದ್ದಾರೆ. ಈ ಸಮುದಾಯದಲ್ಲಿ ಎರಡು ಪಂಗಡಗಳು ಕೋಳಿಧೋರ್ ಮತ್ತು ಟೋಕ್ರೆಕೋಳಿ.

ಪ್ರಾಣಿ ಸಾಕಾಣಿಕೆಯು ಇವರ ಮೂಲ ವೃತ್ತಿ. ಆದರೆ ಈಗ ವ್ಯವಸಾಯ, ಅರಣ್ಯದಲ್ಲಿ ಕೆಲಸ ಇತ್ಯಾದಿ ನಿರ್ವಹಿಸುತ್ತಾರೆ. ಇವರು ತಮ್ಮದೇ ಆದ ಸಾಮಾಜಿಕ ನಿಯಂತ್ರಣ ಸಂಸ್ಥೆಗಳನ್ನು ಹೊಂದಿದ್ದರು ಅದರ ಸಂಘಟನೆಯಲ್ಲಿ ಕಾರಭಾರಿ ಅಥವಾ ಗ್ರಾಮದ ಮುಖ್ಯಸ್ಥ ಆದ ಪಟೇಲ ಹಾಗೂ ಸಮುದಾಯದ ಮುಖ್ಯಸ್ಥರು, ಇವರ ಅಧಿಕಾರಅನುವಂಶೀಯವಾದದ್ದು ಕಾರಭಾರಿಯು ಗ್ರಾಮದ ಆಗು-ಹೋಗುಗಳನ್ನು ನೋಡಿಕೊಳ್ಳುತ್ತಾನೆ. 1981ರಲ್ಲಿ ಈ ಬುಡಕಟ್ಟು ಜಿಲ್ಲೆಯ ಗಡಿಭಾಗದ ಮೇಲೆ ಕಂಡುಬಂದಿದ್ದು ವರದಿಯಾಗಿದೆ.

1993ರಲ್ಲಿ ಪಂಚಾಯತ ರಾಜ್ ಕಾಯಿದೆಯ ಪ್ರಕಾರ ಈ ಸಮುದಾಯವು ಯಾವದೇ ರೀತಿಯ ಮೀಸಲಾತಿಯ ಸೌಲಭ್ಯವನ್ನು ಪಡೆದುಕೊಂಡಿಲ್ಲ. ಹೊಟ್ಟೆಪಾಡಿಗಾಗಿ ಹೋರಾಟ ಮಾಡುವ ಈ ಸಮುದಾಯ ರಾಜಕೀಯದಲ್ಲಿ ಅಧಿಕಾರಕ್ಕಾಗಿ ಹೋರಾಟಮಾಡುವದು ಕನಸ್ಸೇಸರಿ.ಆರ್ಥಿಕವಾಗಿ ತುಂಬಾ ಬಡವಾಗಿದ್ದ ಈ ಸಮುದಾಯ ರಾಜಕೀಯದಲ್ಲಿ ಭಾಗಬವಹಿಸಲಾರದೆಂದು ತಿಳಿದುಬಂದಿದೆ.

**ಪಾರ್ಧಿ ಸಮುದಾಯ**

ಈ ಸಮುದಾಯವು ಮಹಾರಾಷ್ಟ್ರದ ದೌಲ್ ಮತ್ತು ಜಲಗಾಂವ್ ಜಿಲ್ಲೆಯಲ್ಲಿ ವಾಸಮಾಡುತ್ತವೆ. ಪರ್ಧಿ ಮತ್ತು ಫಾನ್ಸೆ ಪಾರ್ಧಿ, ಹುಟ್ಟಿಕೊಂಡದ್ದು ಮೊದಲು ರಾಜಸ್ಥಾನಿನಲ್ಲಿ.

ತಜಪುತ ಆಡಳಿತಗಾರರಿಂದ ಕಾವಲುಗಾರ ಕೆಲಸವನ್ನು ಈ ಜನ ಮಾಡುತ್ತಿದ್ದರು. ಇವರ ಮಾತೃಭಾಷೆ ಗುಜರಾತ್ ಮತ್ತು ಮರಾಠಿಯನ್ನು ಸಹಿತ ಮಾತಾಡುತ್ತಾರೆ.

ಬರೆಯಲು ದೇವನಾಗರಿ ಲಿಪಿಯನ್ನು ಬಳಸುತ್ತಾರೆ. ಮಹಾರಾಷ್ಟ್ರದಲ್ಲಿ 1981ರ ಜನಗಣತಿಯ ಪ್ರಕಾರ ಈ ಸಮುದಾಯವೆಂದು ಪರಿಗಣಿಸಲ್ಪಟ್ಟಿದ್ದು, ಜನಸಂಖ್ಯೆ 95,115 ಇದೆ. ಈ ಸಮುದಾಯ ಓಡಾಂ, ಸೋನಾಂ, ದಡ್ಬೆ, ಸೋಲಂಕಿ, ಪಾವರ್, ಚವ್ಹಾಣ, ಸಿಂಧೆ, ಸೂರ್ಯವಂಶಿ, ಇತ್ಯಾದಿ ಗೋತ್ರ/ಬೆಡಗನ್ನು ಹೊಂದಿದೆ.ಕಲ್ಲು ಸಂಗ್ರಹಿಸಿ ಮನೆ ಕಟ್ಟುವವರಿಗೆ ಮಾರುತ್ತಾರೆ. ಈಗೀಗ ಈ ಸಮುದಾಯ ವ್ಯಾವಸಾಯದಲ್ಲಿ ನಿರತವಾಗಿದೆ. ಇನ್ನು ಕೆಲವರು ಸರಕಾರಿ ಉದ್ಯೋಗದಲ್ಲಿ ಸೇರಿದ್ದಾರೆ.1981 ಮತ್ತು 1991ರ ಜನಗಣತಿಯ ಪ್ರಕಾರ ಗುಲಬರ್ಗಾ ಜಿಲ್ಲೆಯ ಗಡಿ ಪ್ರದೇಶವಾದ ಅಫಜಲಪುರ ಮತ್ತು ಆಳಂದ ತಾಲೂಕಿನಲ್ಲಿ ಪತ್ತೆಯಾಗಿದೆ. ಹೊಟ್ಟೆಪಾಡಿಗಾಗಿ ಈ ಸಮುದಾಯ ಗುಲಬರ್ಗಾ ಜಿಲ್ಲೆಗೆ ವಲಸೆ ಬಂದಿರಬಹುದೆಂಬ ಪರಿಕಲ್ಪನೆ ಮೂಡಿದೆ. ಈ ಸಮುದಾಯ ರಾಜಕೀಯ ವ್ಯಾಪ್ತಿಯಲ್ಲಿ ಬಂದಿಲ್ಲ ಏಕೆಂದರೆ ಅಲ್ಪ ಜನಸಂಖ್ಯೆ ಮತ್ತು ಹಲವಾರು ಆರ್ಥಿಕ ಅಡಚಣೆ ಇರುವದು ಕಂಡುಬಂದಿದೆ

**ಕೋಯ**

ಈ ಕೋಯ ಸಮುದಾಯವು ತಮ್ಮನ್ನು ತಾವು ಕೊಯ ಎಂದು ಕರೆದುಕೊಂಡಿದ್ದಾರೆ. ಇವರು ಲಕ್ಷದ್ವೀಪದಲ್ಲಿ ವಾಸಿಸುತ್ತಿದ್ದು ಪ್ರಾರಂಭದಲ್ಲಿ ತರವಡಿಸ್ ಅಥವಾ ಕರ್ನವಾನ ಎಂದು ಕರೆಯಲಾಗುತ್ತಿತ್ತು. ಇವರನ್ನು ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸಲು ಉಬಾದುಲ್ಲಾ ಎಂಬ ಸಂಸ್ಥೆಯ ಕ್ರಿ.ಶ. 663ರಲ್ಲಿ ಸಾಕಷ್ಟು ಪ್ರಯತ್ನಮಾಡಿದೆ. 1909ರಲ್ಲಿ ಥರ್ಸ್ಟನ ಎಂಬ ಮಾನವ ಶಾಸ್ತ್ರಜ್ಞರು ಈ ಕೋಯ ಸಮುದಾಯವನ್ನು "the land and boat owning class of Muhammadans in the Laccadive island" ಈಗ ಎಲ್ಲಾ ಕೇಂದ್ರಾಡಳಿತ ಪ್ರದೇಶಗಳಲ್ಲಿ ಈ ಸಮುದಾಯ ಹರಡಿಕೊಂಡಿದೆ. ಈವರು ಉರ್ದು ಭಾಷೆಯಿಂದ ಪ್ರಭಾವಿತಗೊಂಡ ಮತಿಯುಳ್ಳ ಮಾತಾಡುತ್ತಾರೆ. ಮತ್ತು ಅರಬಿಕ್ ಬರವಣಿಗೆಯನ್ನು ಬಳಸುತ್ತಾರೆ. ಈಗ ಓದಲು, ಬರೆಯಲು ಮಲೆಯಾಳಂ ಭಾಷೆಯನ್ನು ಬಳಸುತ್ತಾರೆ. ಈ ಸಮುದಾಯದ ಸಾಮಾಜಿಕ ಬದುಕಿನಲ್ಲಿ ಸಾಕಷ್ಟು ಬದಲಾವಣೆಗಳಿರುವದು ಕಂಡುಬರುತ್ತದೆ.

ತಾಯಿಯ ಸಹೋದರನ ಮಗಳನ್ನು ಮದುವೆಯಾಗುತ್ತಾರೆ. ವಯಸ್ಕರ ಮದುವೆ ಜಾರಿಯಲ್ಲಿದ್ದು ವಧುವಿನ ತಂದೆ-ತಾಯಿಗಳಿಗೆ ವರನು ಹಣ, ಆಭರಣಗಳನ್ನು ನೀಡಬೇಕಾಗುತ್ತದೆ. ಖಾಜಿ ಎಂಬ ವ್ಯಕ್ತಿಯು ಈ ಸಮುದಾಯದ ನ್ಯಾಯಾಧೀಶ ಮತ್ತು ಪೂಜಾರಿಯಾಗಿರುತ್ತಾನೆ. ಇವನ ಒಪ್ಪಿಗೆಯ ಮೇರೆಗೆ ವಿವಾಹ ವಿಚ್ಛೇದನ ಜರುಗುತ್ತವೆ.

ಕೋಯ ಸಮುದಾಯದ ಪ್ರಮುಖ ವೃತ್ತಿ ವ್ಯವಸಾಯ ಈಗೀಗ ಕಾಫಿ ತೋಟಗಳಲ್ಲಿ ಮತ್ತು ಮೀನು ಹಿಡಿಯವದರಲ್ಲಿ ತೋಡಗಿದ್ದಾರೆ. ಈಗ ಕೋಯ ಸಮುದಾಯವು ಕರ್ನಾಟಕದ ಮೈಸೂರು, ಕೊಡಗು ಮತ್ತು ಗುಲಬರ್ಗಾ ಜಿಲ್ಲೆಗಳಲ್ಲಿ ಕಂಡುಬಂದಿದ್ದು ಅಲೆಮಾರಿ ಜೀವನವನ್ನು ಇನ್ನು ಮುಂದುವರಿಸುತ್ತಿರುವದು ಬೆಳಕಿಗೆ ಬಂದಿದೆ. 1981ರ ಜನಗಣತಿಯಲ್ಲಿ ಕೋಯ ಸಮುದಾಯ ಗುಲಬರ್ಗಾ ಜಿಲ್ಲೆಯಲ್ಲಿ ಪತ್ತೆಯಾಗಿದೆ. 1993ರ ಪಂಚಾಯತರಾಜ್ ಚುನಾವಣೆಯಲ್ಲಿ ರಾಜಕೀಯ ಮೀಸಲಾತಿಯನ್ನು ಸದುಪಯೋಗಪಡಿಸಿಕೊಂಡಿರದ್ದಿದ್ದದು ಈ ಸಮೀಕ್ಷೆಯಿಂದ ತಿಳಿದುಬಂದಿದೆ.

**ಗೊಂಡ ಸಮುದಾಯ**

ಗೊಂಡ ಎಂಬ ಪದದ ನಿಷ್ಪತ್ತಿಯನ್ನು ವಿದ್ವಾಂಸರು ಎರಡು ರೀತಿಗಳಲ್ಲಿ ವಿವರಾಸಿದ್ದಾರೆ. 'ಗೊಂಡಾ' ಎಂಬ ಶಬ್ದ ತೆಲುಗು ಭಾಷೆಯ 'ಕೊಂಡ' ಎಂಬ ಶಬ್ದದಿಂದ ಬಂದದ್ದೆಂದು ಭಾಷಾವಿಜ್ಞಾನಿಗಳ ಅಭಿಪ್ರಾಯ. 'ಕೊಂಡ' ಎಂದರೆ ತೆಲುಗಿನಲ್ಲಿ ಗುಡ್ಡ ಅಥವಾ ಪರ್ವತ ಎಂದು ಅರ್ಥ. ಹೇಮಚಂದ್ರನೇ ಮೊದಲಾದ ನಿಘಂಟುಕಾರರು 'ಗೊಂಡಾ' ಶಬ್ದವನ್ನು ನಿಜಜಾತಿ ಸೂಚಕ ಎಂದಿದ್ದಾರೆ. ಜನರಲ್ ಕನ್ನಿಂಗ್‌ಹ್ಯಾಮ್ ಈ ಪದವು ಗೌಡ ಎಂಬ ಶಬ್ದದಿಂದ ಉತ್ಪನ್ನವಾದುದು ಎಂದು ಅಭಿಪ್ರಾಯ ಪಟ್ಟಿದ್ದಾರೆ. ವಿಂಧ್ಯಪರ್ವತದ ಬಳಿ ಇರುವ ಒಂದು ಬುಡಕಟ್ಟು ಸಮುದಾಯ.

ಗೊಂಡರು ಮಧ್ಯಪ್ರದೇಶ, ಆಂಧ್ರಪ್ರದೇಶ ಈ ರಾಜ್ಯಗಳ ಪರ್ವತ ಪ್ರದೇಶಗಳಲ್ಲಿ ವಾಸವಾಗಿರುವ ಒಂದು ಬುಡಕಟ್ಟಿನ ಜನ. ವಿಂಧ್ಯಪರ್ವತದಿಂದ ಗೋದಾವರಿಯವರೆಗೆ ವ್ಯಾಪಿಸಿರುವ ಆ ಬುಡಕಟ್ಟುಗಳ ಜನ ವಾಸವಾಗಿರುವ ಪ್ರದೇಶವನ್ನು 'ಗೊಂಡವನ' ಎಂದು ಕರೆಯುತ್ತಿದ್ದರು. ಈಗೀಗ ಗೊಂಡರು ಕರ್ನಾಟಕದ ಹಲವಾರು ಜಿಲ್ಲೆಗಳಲ್ಲಿ ವಾಸಿಸುತ್ತಾರೆ.

ಗೊಂಡರ ಮೂಲ ವೃತ್ತಿ ವ್ಯವಸಾಯ. ಬಿಡುವಿನ ವೇಳೆಯಲ್ಲಿ ಇನ್ನಿತರ ಹಲವಾರು ಉಪಕಸಬುಗಳನ್ನು ಆಶ್ರಯಿಸುತ್ತಾರೆ. ಪಶುಸಂಗೋಪನೆಯ ಜೊತೆಗೆ ಬಾವಿ ತೋಡುವದರಲ್ಲಿ ತೆಂಗಿನ ಗಿಡಕ್ಕೆ ಕಲ್ಲಿರುವ ಸ್ಥಲದಲ್ಲೂ ಗುಂಡಿ ತೋಡುವದರಲ್ಲಿ ಇವರು ಪ್ರವೀಣರು. ಇವರು ಮಾಂಸಹಾರಿಗಳಾಗಿದ್ದು ಇನ್ನಿತರ ಜೋಳ, ರಾಗಿ, ಅಕ್ಕಿ, ಗೋದಿ, ಕಾಯಿಪಲ್ಲೆಗಳನ್ನು ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಇವರು ಹೆಚ್ಚಾಗಿ ಅವಿಭಕ್ತ ಕುಟುಂಬಗಳಾಗಿರುತ್ತಾರೆ. ತಂದೆಯ ತಂಗಿಯ ಮಗಳು ಹಾಗೂ ತಾಯಿಯ ಅಣ್ಣನ ಮಗಳನ್ನು ಮದುವೆಯಾಗುತ್ತಾರೆ. ಏಕಪತ್ನಿತ್ವ ಮತ್ತು ಬಹುಪತ್ನಿತ್ವ ಪದ್ದತಿಗಳು ಜಾರಿಯಲ್ಲಿದ್ದು ವಿಧವೆಯವರ ಮರುವಿವಾಹಕ್ಕೆ ಅವಕಾಶವಿದೆ. ೧೯೮೧ ಮತ್ತು ೧೯೯೧ರ ಜನಗಣತಿಯ ಪ್ರಕಾರ ಈ ಸಮುದಾಯವು ಗುಲಬರ್ಗಾ ಜಿಲ್ಲೆಯಲ್ಲಿ ಕಂಡುಬಂದಿದೆ. ಆದರೆ ೧೯೯೩ರ ಪಂಚಾಯತ ಚುನಾವಣೆಯ ವ್ಯಾಪ್ತಿಯಲ್ಲಿ ಕಂಡುಬಂದಿರುವದಿಲ್ಲ.

**ಜೇನು ಕುರುಬ ಸಮುದಾಯ**

ಜೇನುಕುರುಬ ಬುಡಕಟ್ಟು ಸಮುದಾಯವು ಕರ್ನಾಟಕ ರಾಜ್ಯದಲ್ಲಿ ಕಂಡುಬರುವ ಒಂದು ಪ್ರಮುಖ ಬುಡಕಟ್ಟು. ಇವರು ಪ್ರಮುಖವಾಗಿ ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ, ಹುಣಸೂರು ತಾಲೂಕುಗಳಲ್ಲೂ, ಕೊಡಗು ಜಿಲ್ಲೆಯ ಕುಶಾನಗರ, ಸೋಮವಾರಪೇಟೆ ಮತ್ತು ಮಡಿಕೇರಿ ತಾಲೂಕುಗಳಲ್ಲೂ ವಾಸಮಾಡವ ಸಮುದಾಯ. ಇವರು ತಮಿಳುನಾಡಿನ ನೀಲಗಿರಿಯ ನಡುಮಲೆ, ಮಸಣಗುಡಿಗಳಲ್ಲೂ, ಕೇರಳದ ಮಾನಂದವಾಡಿಯಲ್ಲೂ ಇದ್ದಾರೆ. ಕರ್ನಾಟಕದಲ್ಲಿ ಇವರ ಜನಸಂಖ್ಯೆ ಇತ್ತೀಚಿನ ಅಂದಾಜಿನ ಪ್ರಕಾರ ೪೩,೦೦೦

೧೯೩೧ರ ಜನಗಣತಿಯ ಪ್ರಕಾರ ಜೇನುಕುರುಬರನ್ನು ಪ್ರತ್ಯೇವಾಗಿ ಗುರುತಿಸಿದ್ದಾರೆ. ಜೇನುಕುರುಬರು ಕಾಡಿನೊಳಗೆ ಕುಮರಿ ಬೇಸಾಯ ಮಾಡಿಕೊಂಡು ತಮಗೆ ಬೇಕಾದ ರಾಗಿ, ಗೆಣಸುಗಳನ್ನು ಕಾಡಿನೊಳಗೆ ಬೆಳೆಯುತ್ತಿದ್ದರು. ಮರಗಳ ನಡುವಿನ ಜಾಗಗಳನ್ನು ತೆರವು ಮಾಡಿಕೊಂಡು ಚೂಪಾದ ಕೋಲಿನಿಂದ ಭೂಮಿಯನ್ನು ಸಡಿಲ ಮಾಡಿ ಮುಂಗಾರಿನಲ್ಲಿ ರಾಗಿ ಬೆಳೆಯನ್ನು ಬೆಳೆಯುತ್ತಾರೆ. ೧೯೯೧ರ ಜನಗಣತಿಯ ಪ್ರಕಾರ ಈ ಸಮುದಾಯವು ಗುಲಬರ್ಗಾ ಜಿಲ್ಲೆಯಲ್ಲಿ ವ್ಯಾಪ್ತಿಯಲ್ಲಿ ಪತ್ತೆಯಾಗಿದೆ.

**ಕಾಡು ಕುರುಬರ ಸಮುದಾಯ**

ಕರ್ನಾಟಕದಲ್ಲಿ ಇರುವ ಕುರುಬ ಸಮುದಾಯವನ್ನು ಅನುಸೂಚಿತ ಅಥವಾ ಪರಿಶಿಷ್ಟ ಬುಡಕಟ್ಟು ಮತ್ತು ಹಿಂದುಳಿದ ವರ್ಗ ಎಂಬ ಎರಡು ವಿಭಾಗಗಳಾಗಿ ವರ್ಗೀಕರಿಸಲಾಗಿದೆ. ಕುರು ಎಂಬ ಪದವು ಕುರಿ ಪ್ರಾಣಿಯನ್ನು ಸೂಚಿಸುತ್ತದೆಯಾಗಿ, ಕುರುಬ ಎಂದರೆ ಕುರಿ ಸಾಕುವವನು ಎಂಬುವದಾಗಿ ಅರ್ಥೈಸಲಾಗಿದೆ. ಆದರೆ ಕ್ಷೇತ್ರ ಕಾರ್ಯ ನಡೆಸಿದಾಗ, ಕಾಡುಕರುಬರು ಈ ಕುರಿಸಾಕುವ ಸಾಂಪ್ರದಾಯವನ್ನು ಅನುಸರಿಸುತ್ತಿದ್ದುದು. ಕಂಡು ಬರಲಿಲ್ಲ. ಸ್ಟುವರ್ಟ ಎಂಬ ವಿದ್ವಾಂಸರೂ ಸಹ ಕುರುಬರು ಸದಾ ಕುರಿ ಪಾಲಕರೆ ಆಗಿರಲಿಲ್ಲ ಎಂಬುವದಾಗಿ ಅಭಿಪ್ರಾಯ ಪಡುತ್ತಾರೆ. ತಮಿಳು ಭಾಷೆಯ ಪಂಡಿತ ಪಿಂಗಳಮುನಿಯ ಪ್ರಕಾರ ಕುರುಬರು ಕುರಿನಿಲಮನ್ನಾರ್, ಅಂದರೆ ಸಣ್ಣಪುಟ್ಟ ದೊರೆಗಳಾಗಿದ್ದರು.

೧೯೬೧ರ ಜನಗಣತಿಯಲ್ಲಿ ಜೇನುಕುರುಬ ಮತ್ತು ಕಾಡುಕುರುಬ ಬುಡಕಟ್ಟುಗಳನ್ನು ಬೇರೆ ಬೇರೆಯಾಗಿ ನಮೂದಿಸಲಾಗಿದ್ದಿತು ಹಾಗೂ ಅವುಗಳನ್ನು ಪರಿಶಿಷ್ಟ ಬುಡಕಟ್ಟುಗಳು ಎಂಬುದಾಗಿ ಗುರುತಿಸಿ ವರ್ಗಿಕರಿಸಲಾಗಿದ್ದಿತು. ಕಾಡುಕುರುಬರ ಮೂಲ ವೃತ್ತಿ ವ್ಯವಸಾಯ ಅದರ ಜೊತೆಗೆ ಪಶುಸಂಗೋಪನೆ ಮೀನುಗಾರಿಕೆ ಇತ್ಯಾದಿ ವೃತ್ತಿಗಳನ್ನು ಅನುಸರಿಸುತ್ತಿದ್ದು ಬಿಡುವಿನ ವೇಳೆಯಲ್ಲಿ ಸಣ್ಣಪುಟ್ಟ ಕೂಲಿ ಕೆಲಸಗಳನ್ನು ಮಾಡುತ್ತಾರೆ. ಇವರು ಮಾಂಸಹಾರಿಗಳಾಗಿದ್ದು ಅಕ್ಕಿ, ರಾಗಿ, ಜೋಳ ಇತ್ಯಾದಿ ದಾನ್ಯಗಳನ್ನು ಊಟ ಮಾಡುತ್ತಾರೆ. ತಂದೆಯ ತಂಗಿಯ ಮಗಳು ಹಾಗೂ ತಾಯಿಯ ಅಣ್ಣನ ಮಗಳನ್ನು ಮದುವೆಯಾಗುತ್ತಾರೆ. ಏಕಪತ್ನಿತ್ವ ಮತ್ತು ಬಹುಪತ್ನಿತ್ವ ಪದ್ದತಿಗಳು ಈ ಸಮುದಾಯದಲ್ಲಿ ಜಾರಿಯಲ್ಲಿದ್ದು ಪುನರವಿವಾಹಕ್ಕೆ ಅವಕಾಶವಿದೆ.

೧೯೯೧ರ ಜನಗಣತಿಯಲ್ಲಿ ಈ ಸಮುದಾಯವು ಗುಲಬರ್ಗಾ ಜಿಲ್ಲೆಯ ವ್ಯಾಪ್ತಿಯಲ್ಲಿ ಪತ್ತೆಯಾಗಿದ್ದು ೧೯೯೫ರ ಪಂಚಾಯತ ಚುನಾವಣೆಯಲ್ಲಿ ಶಹಾಪೂರ ತಾಲೂಕಿನ ಸಗರ ಹೋಬಳಿಯಿಂದ ಜಿಲ್ಲಾ ಪಂಚಾಯತಿಗೆ ಆಯ್ಕೆಯಾಗಿರುವ ಮಾಹಿತಿಗಳನ್ನು ನಮ್ಮ ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಲಾಗಿದೆ.

## ೨.೭.೧.ಬುಡಕಟ್ಟು ರಾಜಕೀಯ ಹಿನ್ನೆಲೆ

### ಬುಡಕಟ್ಟು ರಾಜಕೀಯ ಹಿನ್ನೆಲೆ

ನಾಗರಿಕ ಸಮಾಜಗಳಲ್ಲಿ ನಾವು ಕಾಣುವಂತಹ ವ್ಯವಸ್ಥಿತವಾದ ಹಾಗೂ ಸಂಕೀರ್ಣವಾದ ರಾಜಕೀಯ ಜೀವನವನ್ನು ಆದಿವಾಸಿಗಳ ಕುಲ ಪಂಚಾಯಿತಗಳ ಫಲಿತಾಂಂಶವಾಗಿದೆ. ಏಕೆಂದರೆ ಹಲವಾರು ವರ್ಷಗಳ ಹಿಂದಿನಿಂದಲು ಆದಿವಾಸಿಗಳು ತಾವು ಸಮುದಾಯದ ಸಂರಕ್ಷಣೆಯ ದೃಷ್ಠಿಯಿಂದ, ಅಂದರೆ ಆಂತರಿಕ ಕಲಹ ಹಾಗೂ ಬಾಹ್ಯ ಆಕ್ರಮಣಗಳಿಂದ ರಕ್ಷಿಸಿ ಕೊಳ್ಳಲು ಪ್ರತಿಯೊಂದು ಆದಿವಾಸಿ ಸಮುದಾಯವು ತನ್ನದೇ ಆದ ರಕ್ಷಣಾವ್ಯೂಹ ವೊಂದನ್ನು ಹೊಂದಿರುತ್ತಿತು. ಇಂತಹ ರಕ್ಷಣಾವ್ಯೂಹಕ್ಕೆ ಸಹಜವಾಗಿ ಬಲಿಷ್ಠರಾದವರ ನೇತೃತ್ವ ದಲ್ಲಿರುತ್ತಿತ್ತು. ಪ್ರತಿಯೊಂದು ಸಮುದಾಯವು ತನ್ನದೇ ಆದ ನಾಯಕನನ್ನು ಹೊಂದಿದ್ದು ಆತನ ನೇತೃತ್ವದಲ್ಲಿ ತಮ್ಮ ಸಮುದಾಯವನ್ನು ರಕ್ಷಿಸಿಕೊಳ್ಳಲು ಪ್ರಯತ್ನಿಸುತ್ತಿದ್ದವು.

ಸಮುದಾಯದ ಮುಖಂಡತ್ವವನ್ನು ವಹಿಸಿಕೊಂಡವನು ಸಮುದಾಯದ ಏಳಿಗೆಗಾಗಿ ಶ್ರಮಿಸುತ್ತಿದ್ದನು. ಆಂತರಿಕ ಕಲಹಗಳನ್ನು ಪರಿಹಾರಿಸುತ್ತಾ ಅಪರಾಧಿಗಳನ್ನು ದಂಡಿಸುತಿದ್ದನು. ಸಮುದಾಯದ ಚಟುವಟಿಕೆಗಳಿಗೆ ಚಾಲನೆ ನೀಡುತ್ತಾ, ಕೆಲವೊಮ್ಮೆ ಹಿರಿಯರ ಸಲಹೆ ಸೂಚನೆಗಳಂತೆ ನಡೆದು ಕೊಳ್ಳುತಿದ್ದನು. ಈ ಸಮುದಾಯಗಳು ತಮ್ಮದೇ ಆದ ಪ್ರಜಾಪ್ರಭುತ್ವ ಮಾದರಿಯ ಆಡಳಿತ ವ್ಯವಸ್ಥೆಯನ್ನು ರೂಪಿಸಿಕೊಂಡಿದ್ದವು. ಅದಿವಾಸಿ ಸಮುದಾಯಗಳು ತಮ್ಮದೇ ಆದ ಗ್ರಾಮ ಸಭೆಗಳನ್ನು, ಪಂಚಾಯತಿ ಸಮಿತಿಗಳನ್ನುಹೊಂದಿದ್ದು ಜನರ ಸಲಹೆ ಸೂಚನೆಗಳಿಗೆ ಮತ್ತು ಆಭಿಪ್ರಾಯಕ್ಕೆ ಮನ್ನಣೆ ನೀಡುತ್ತಿದ್ದವು.

ಪ್ರಜಾಪ್ರಭುತ್ವ ಹುಟ್ಟಿದ್ದು ಮೊದಲು ಗ್ರೀಕ್ ದೇಶಗಳಲ್ಲಿ. ಆದರೆ ಅದಕ್ಕಿಂತ ಪೂರ್ವದಲ್ಲಿ ಹಲವಾರು ಬುಡಕಟ್ಟುಗಳು ಭಾರತದಲ್ಲಿ ಪ್ರಜಾಪ್ರಭುತ್ವ ರೀತಿಯ ಪಂಚಾಯತ ವ್ಯವಸ್ಥೆಗಳನ್ನು ಹೊಂದಿದ್ದವು ಎನ್ನುವದಕ್ಕೆ ಹಲವಾರು ಪುರಾವೆಗಳು ಕಂಡು ಬಂದಿವೆ. ಭಾರತ ದೇಶದಲ್ಲಿ ಇಂದಿನ ಪ್ರಜಾಪ್ರಭುತ್ವ ಮಾದರಿಯ ಜಾತಿ ಪಂಚಾಯಿತಿ ಇದ್ದು ಆಯಾ ಬುಡಕಟ್ಟುಗಳು ತಮ್ಮ ನೆಲೆಯ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುವದು ಮತ್ತು ಇತರ ನೆಲೆಗಳ ಆಕ್ರಮಣದಿಂದ

ರಕ್ಷಣೆಪಡೆದು ಕೊಳ್ಳುವದಕ್ಕಾಗಿ ಹಲವಾರು ಬುಡಕಟ್ಟುಗಳು ಈಗೀನ ಗ್ರಾಮ ಪಂಚಾಯತಿಯನ್ನು ಹೋಲುವ ಮಾದರಿಯಲ್ಲಿ ಕುಲ ಪಂಚಾಯತಿ ವ್ಯವಸ್ಥೆ ಅಥವಾ ಕಟ್ಟೆಮನೆಯ ಪಂಚಾಯತಿ ವ್ಯವಸ್ಥೆ ಇದ್ದದ್ದು ತಿಳಿದುಕೊಳ್ಳಬಹುದು. ಅಂದರೆ ಇಂದಿನ ಪಂಚಾಯತಿ ವ್ಯವಸ್ಥೆ ಭಾರತಕ್ಕೆ ಹೊಸದಾಗಿರದೆ ಪ್ರಾಚೀನ ಕಾಲದಿಂದಲೂ ಎಂದರೆ ಕಾಡಿನಲ್ಲಿ ವಾಸಿಸುವ ಮಾನವನು ಇಂತಹ ಪಂಚಾಯತಿ ವ್ಯವಸ್ಥೆಯ ಮಹತ್ವವನ್ನು ತಿಳಿದುಕೊಂಡಿದ್ದನು.

## ಗೊಂಡರ ರಾಜಕೀಯ ಹಿನ್ನೆಲೆ

ಗೊಂಡ ಎಂದರೆ "ಗೌಡ " ಎಂಬ ಸಮನಾರ್ಥಕ ಪದನಾಮವಾಗಿದ್ದು ಗೊಂಡರು ತಮ್ಮ ಸಮುದಾಯದ ಸಮಾಜಿಕ ಆಡಳಿತದಲ್ಲಿ ನೆರೆ ಮತ್ತು ಸೀಮೆ ಎಂಬ ಒಳ ವಿಭಾಗಗಳು ಕಂಡು ಬರುತ್ತವೆ. ಈ ವಿಭಾಗಗಳಿಗೆ ಅನುಕ್ರಮವಾಗಿ "ನೆರೆಗೊಂಡ " , "ಸೀಮೆಗೊಂಡ " ಎಂಬ ಪದನಾಮವುಳ್ಳ ಸಾಮಾಜಿಕ ಅಧಿಕಾರಿಗಳು ಆಡಳಿತ ನಡೆಸುತ್ತಿದ್ದರು.

ಒಂದು "ನೆರೆಯು" ಒಂದು ಅಥವಾ ಹೆಚ್ಚು ಗೊಂಡರ ಊರುಗಳನ್ನು ಹೊಂದಿದ್ದು ಇದರ ವ್ಯಾಪ್ತಿಯಲ್ಲಿ ಗೊಂಡರ ಜಾತಿಯು ಸುಮಾರು ಹದಿನೈದರಿಂದ ಇಪ್ಪತ್ತು ಮನೆಗಳಿರುತ್ತವೆ. ಈ ಊರುಗಳಲ್ಲಿ ಇತರ ಜಾತಿಯವರ ಕೆಲವು ಮನೆಗಳಿರುವದುಂಟು, ಆದರೆ ಗೊಂಡರ ಮನೆಗಳು ಮಾತ್ರ ನೆರೆಯ ವ್ಯಾಪ್ತಿಯಲ್ಲಿ ಬರುತ್ತವೆ. ಆದರೆ ಇತರ ಜಾತಿಯ ಮನೆಗಳು ಗೊಂಡರ ಆಡಳಿತವ್ಯಾಪ್ತಿಗೆ ಒಳಪಡುವದಿಲ್ಲ. ನೆರೆಯ ಮುಖ್ಯಸ್ಥನನ್ನು ಊರುಗೊಂಡನೆಂದು ಮತ್ತು ಕೆಲವುಕಡೆಗೆ ಸೀಮೆಗೊಂಡನೆಂದು ಕರೆಯುತ್ತಾರೆ. ಇವನ ಅಡಳಿತ ವ್ಯಾಪ್ತಿಯಲ್ಲಿ ಬರುವ ಊರುಗಳ ಎಲ್ಲಾರೀತಿಯ ಅಗು-ಹೋಗುಗಳನ್ನು ನೋಡಿಕೊಳ್ಳುತ್ತಾನೆ.

ಸುಮಾರು ಏಳು ನೆರೆ ಅಥವಾ ಊರುಗಳಿಗೆ ಒಬ್ಬ ಸೀಮೆಗೊಂಡನಿರುತ್ತಾನೆ. ಸೀಮೆ ಏಳು ಊರುಗಳ ಒಂದೆ ಅಡಳಿತ ಪ್ರದೇಶವಾಗಿ ಇರುತ್ತದೆ . ನೆರೆಗೊಂಡನಿಂದ ಬಂದ ಎಲ್ಲಾ ರೀತಿಯ ಪಂಚಾಯತ ಸಮಸ್ಯೆಗಳು ಮುಕ್ತವಾಗಿ ಜನರ ಸಮಕ್ಷಮದಲ್ಲಿ ಸೀಮೆಗೊಂಡನು ಬಗೆಹರಿಸುತ್ತಾನೆ.

ನ್ಯಾಯನಿರ್ಣಯಕ್ಕಾಗಿ ಇಂತಹದ್ದೆ ಸ್ಥಳದಲ್ಲಿ ಸಭೆ ಸೇರ ಬೇಕೆಂದಿಲ್ಲ, ಸಮಸ್ಯೆ ಅಥವಾ ದೂರು ಸಾಮೂಹಿಕವಾಗಿದ್ದರೆ ಊರಿನ ದೇವರಿಗೆ ಸಂಬಂಧ ಪಟ್ಟಲ್ಲಿ ಅಥವಾ ಊರಿನ ದೇವಾಲಯದಲ್ಲಿ, ಒಂದು ಕುಟುಂಬಕ್ಕೆ ಸಂಬಂಧಪಟ್ಟಿದ್ದರೆ ಸೀಮೆಗೊಂಡನ ಮನೆಯಲ್ಲಿ ಅಥವಾ ಊರಿನ ಹಿರಿಯ ವ್ಯಕ್ತಿಗಳ ಮನೆಯಲ್ಲಿ ಸಭೆ ಸೇರುತ್ತಾರೆ. ಒಂದು ಸೀಮೆಗೆ ಸಂಬಂಧಪಟ್ಟಲ್ಲಿ ಸಾಮಾನ್ಯವಾಗಿ ಆಯಾ ಸೀಮೆಗೊಂಡನಿರುವ ಊರಿನಲ್ಲಿ ಸಭೆ ಸೇರುತ್ತಾರೆ.

ಜಗಳ, ತಂಟೆ, ತಕರಾರುಗಳನ್ನು ಬಗೆಹರಿಸುವಾಗ ಹಾಗೂ ಅಭಿವೃದ್ದಿ ಕಾರ್ಯಗಳ ಬಗ್ಗೆ ಚರ್ಚೆ ನಡೆಸುವಾಗ ಊರಿನ ಹಿರಿಯರು, ಅನುಭವಿಕರು ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಿದ್ದರು. ಗೊಂಡನ ಅಸಮ್ಮತಿಯಿದ್ದಾಗ ಮಾತ್ರ ಆತನು ನಡುವೆ ಬಾಯಿ ಹಾಕಿ ತನ್ನ ವಿಚಾರಗಳನ್ನು ವ್ಯಕ್ತಪಡಿಸುವ ಮೂಲಕ ಅಂತಿಮ ತೀರ್ಮಾನಕ್ಕೆ ಬರುತ್ತಾನೆ. ಹೀಗೆ ಗೊಂಡನು ಪ್ರಜಾಸತ್ತಾತ್ಮಕ ವಿಧಾನಗಳನ್ನು ಅನುಸರಿಸುವದು ಕಂಡುಬರುತ್ತದೆ.

**ಸೋಲಿಗರ ಕುಲ ಪಂಚಾಯತಿ**

ಯಾವುದೇ ಒಂದು ಸಮಾಜ ಅದು ಆದಿವಾಸಿ ಸಮಾಜವಾಗಿರಲಿ ಅಥವಾ ಮುಂದುವರಿದ ಸಮಾಜವಾಗಿರಲಿ ಬೆಳೆಯುತ್ತ ಹೋದಂತೆ ಅದರ ಮುನ್ನಡೆಗೆ ಬೇಕಾದ ನಿಯಮಗಳು ಹುಟ್ಟಿಕೊಳ್ಳುತ್ತವೆ. ಗುಂಪಿನ ಹಿತರಕ್ಷಣೆಗಾಗಿ ತಾವೇ ಮಾಡಿಕೊಂಡ ನಿಯಮಾವಳಿಗಳನ್ನು ಪ್ರತಿಯೊಬ್ಬ ಸದಸ್ಯನು ತಮಗಾಗಿ, ತಮ್ಮ ಕುಟುಂಬದ ಹಾಗೂ ಗುಂಪಿನ ಕ್ಷೇಮಕ್ಕಾಗಿ ತಾವೇ ಪಾಲಿಸಬೇಕಾಗುತ್ತದೆ. ವಿದ್ಯಾವಂತ ವರ್ಗವಿರುವಂತಹ ಅಥವಾ ರೈತವರ್ಗವಿರುವಂತಹ ಸಮಾಜವಾದರೆ ಜನರ ನಡುವೆ ಉಂಟಾದ ವಿವಾದಗಳನ್ನು ಬಗೆಹರಿಕೊಳ್ಳಲು ನ್ಯಾಯಾಲಯಗಳಿವೆ. ಆದರೆ ಎಷ್ಟೋ ಆದಿವಾಸಿ ಗುಂಪುಗಳಿಗೆ ಈ ಬಗೆಯ ನ್ಯಾಯಾಲಯಗಳ ಕಲ್ಪನೆ ಇಲ್ಲದಿದ್ದರೆ ನಾವು ಆಶ್ಚರ್ಯ ಪಡಬೇಕಾಗಿಲ್ಲ. ಒಂದು ವೇಳೆ ಬುಡಕಟ್ಟುಗಳಿಗೆ ನ್ಯಾಯಾಲಯಬಗ್ಗೆ ತಿಳಿದಿದ್ದರೂ ಅಲ್ಲಿಗೆ ಹೋಗಲು ಹೆದರುತ್ತಿರುವದು ಪ್ರಸ್ತುತ ಸಮೀಕ್ಷೆಯಿಂದ ತಿಳಿದು ಬಂದಿದೆ.

ಈ ಬುಡಕಟ್ಟುಗಳಲ್ಲಿ ಹಲವಾರು ಸಮುದಾಯಗಳಿವೆ. ಅವುಗಳ ನಡುವೆ ಸಣ್ಣ-ಪುಟ್ಟ ಜಗಳವಾಗಬಹುದು ಅಥವಾ ತಮ್ಮ ನೆಲೆಗಳ ಅಕ್ಕಪಕ್ಕದಲ್ಲಿ ವಾಸಿಸುವ ಇತರ ಬುಡಕಟ್ಟು

ಸಮುದಾಯಗಳ ಭೀತಿ ಇರಬಹುದು ಅಂತಹ ವೇಳೆಯಲ್ಲಿ ಇತರ ಸಮುದಾಯಗಳೊಡನೆ ಕಾದಾಡಬೇಕಾಗಬಹುದು ಇದನ್ನು ಪರಿಹರಿಸುವ ಸಲುವಾಗಿ ಅವರಿಗೆ ಒಂದು ಬಲಿಷ್ಠ ಸಂಸ್ಥೆಯ ಅವಶ್ಯಕತೆ ಇತ್ತು. ಅದಕ್ಕಾಗಿಯೆ ಆದಿವಾಸಿ ಗೊಂಪುಗಳು ನ್ಯಾಯ ಮತ್ತು ರಕ್ಷಣೆಯ ಸಲವಾಗಿ ನ್ಯಾಯಲಯಗಳನ್ನು ತಾವೇ ರಚಿಸಿ ಕೊಂಡಿದ್ದಾರೆ. ಅದರ ಮುಖ್ಯಸ್ಥನು ಒಬ್ಬನು ಇರಬಹುದು ಅಥವಾ ಹಲವು ವ್ಯಕ್ತಿಗಳ ಒಂದು ಸಮಿತಿ ಇರಬಹುದು. ಈ ಸ್ಥಾನವು ವಂಶಪರಂಪರವಾಗಿ ಮುಂದುವರಿಯುತ್ತಿರುವದು ಕೆಲವು ಗುಂಪುಗಳಲ್ಲಿ ನೋಡಬಹುದು. ಆದರೆ ಪ್ರಜಾಪ್ರಭುತ್ವದ ಮಾದರಿಯಲ್ಲಿ ಬಹು ಜನಾಭಿಪ್ರಯದ ಪ್ರಕಾರ ಆಯ್ಕೆ ಮಾಡುವದು ಎಲ್ಲಾ ಬುಡಕಟ್ಟು ಸಮುದಾಯಗಳಲ್ಲಿ ಕಂಡುಬಂದಿದೆ.

ಸೋಲಿಗರು ಸದಾ ಬಹು ಜನಾಭಿಪ್ರಾಯದ ಮೇರೆಗೆ ತಮ್ಮ ನಾಯಕನನ್ನು ಆಯ್ಕೆ ಮಾಡಿ ಕೊಳ್ಳುತಿದ್ದರು. ಪ್ರತಿಯೊಂದು ಸೋಲಿಗರ ಪೋಡಿಗೆ ಒಂದು ಕುಲ ಪಂಚಾಯತಿ ವ್ಯವಸ್ಥೆ ಇರುತ್ತದೆ. ಹೀಗೆ ಕುಲದ ಹಿರಿಯರು ನ್ಯಾಯಮಾಡುವಾಗ ಮುಖಂಡನ ಮನೆಯ ಕಟ್ಟೆಯ ಮೇಲೆ ಕುಳಿತು ನ್ಯಾಯ ನಿರ್ಣಹಿಸುತ್ತಿದ್ದರು. ಇದನ್ನು ಕಟ್ಟೆಮನೆಯ ಪಂಚಾಯತಿ ಎಂದು ಕರೆಯುತ್ತಾರೆ. ಈ ರೀತಿಯ ಕುಲಪಂಚಾಯತಿಗಳಿಗೆ ಹಿರಿಯ ವ್ಯಕ್ತಿ ಇರುತ್ತಾನೆ. ಇವನು ಸಮುದಾಯದ ಪ್ರಭಾವಶಾಲಿಯಾದ ವ್ಯಕ್ತಿ ಯಾಗಿರುತ್ತಾನೆ. ಈ ಯಜಮಾನಿಕೆ ಎಂಬುವದು ಅವರಲ್ಲಿ ತಲತಲಾಂತರದಿಂದ ಬಂದದ್ದಲ್ಲ, ಸೋಲಿಗರ ಮುಖಂಡನನ್ನು ಜನರಿಂದ ಮತ್ತು ಜನರ ಒಪ್ಪಿಗೆಯಿಂದ ಆಯ್ಕೆ ಯಾದ ಪ್ರತಿನಿಧಿಯಾಗಿರುತ್ತಾನೆ.

ಈ ಪಂಚಾಯತಿಯ ಯಜಮಾನನ ಸಹಾಯಕ್ಕಾಗಿ ಚೆಲುವಾದಿ ಹಾಗೂ ಕೋಲ್ಕಕಾರರಿರು ತ್ತಾರೆ. ಏಳು ಪೋಡಿಗೆ ಒಬ್ಬ ಪಟ್ಟೇದಾರ, ಇವನ ಸಹಾಯಕ್ಕಾಗಿ ಚೆಲುವಾದಿಗಳು ಇರುತಿದ್ದು ಸೋಲಿಗರ ಸಮಸ್ಯೆಗಳನ್ನು ಮುಕ್ತವಾಗಿ ಬಗೆಹರಿಸುತ್ತಿದರು.

ಯಜಮಾನನು ತನ್ನ ಕುಲದ ನಿಯಮಾವಳಿಗಳಿಗೆ ಅನುಗುಣವಾಗಿ ನ್ಯಾಯವನ್ನು ಮಾಡಿ ಒಂದು ಅಂತಿಮ ತೀರ್ಮಾನಕ್ಕೆ ಬರುತ್ತಾನೆ. ಹೀಗೆ ವಿವಾದವನ್ನು ಬಗೆಹರಿಸುವ ಸಂದರ್ಭದಲ್ಲಿ ಯಜಮಾನನಿಗೆ ಸಹಾಯಕ್ಕಾಗಿ ಪಟ್ಟೇದಾರ, (ಪಟೇಲ) ಮತ್ತು ದಳವಾಯಿಗಳಿರುತ್ತಾರೆ.

**ಜೇನು ಕುರುಬರ ಜಾತಿ ಪಂಚಾಯತಿ**

ಜೇನು ಕುರುಬರು ತಮ್ಮ ಸಮುದಾಯದಲ್ಲಿ ಉದ್ಭವಿಸುವ ಸಮಸ್ಯೆಗಳನ್ನು ಬಗೆಹರಿಸುವಾಗ ಅಗ್ನಿ ಕುಂಡದ ಸುತ್ತಲಿನ ಪ್ರದೇಶವನ್ನು ನ್ಯಾಯ ನಿರ್ಣಯಕ್ಕಾಗಿ ಬಳಸಿ ಕೊಳ್ಳುತಿದ್ದರು. ನ್ಯಾಯ ನಿರ್ಣಯದ ಕಾಲಕ್ಕೆ ಕುಳಿತುಕೊಳ್ಳಲು ಆಸನದ ವ್ಯವಸ್ಥೆಯನ್ನು ಅಗ್ನಿ ಕುಂಡದ ಸುತ್ತ ವೃತ್ತಾಕಾರದಲ್ಲಿ ಮಾಡಿದ್ದರು. ಆಪಾದಕ ಮತ್ತು ಆಪಾದಿತ ಇಬ್ಬರೂ ಈ ವೃತ್ತದೊಳಗೆ ಸಮುದಾಯದ ನೆಲೆಗಳ ಮುಖ್ಯಸ್ಥನಿಗೆ ಅಭಿಮುಖವಾಗಿ ಕುಳಿತಿರುತ್ತಾರೆ. ಅವರು ಒಬ್ಬರನ್ನೊಬ್ಬರಾಗಲಿ ಹಾಗೂ ಗ್ರಾಮಸ್ಥರನ್ನಾಗಲಿ ನೋಡುವಂತಿಲ್ಲ. ಕೇವಲ ಮುಖ್ಯಸ್ಥನನ್ನು ನೋಡತಕ್ಕದ್ದು. ಹೀಗಾಗಿ ವೃತ್ತಾಕಾರದ ಮಧ್ಯದಲ್ಲಿ ತ್ರಿಕೋನ ಏರ್ಪಡುತ್ತದೆ. ಒಬ್ಬರಿಗೊಬ್ಬರು ಗೋಚರಿಸುವಷ್ಟು ಅಂತರದಲ್ಲಿದ್ದು ಅವರು ಮಾತನಾಡಿದ್ದು ಆಲಿಸಲು ಸಾಧ್ಯವಾದಷ್ಟು ಅಂತರವನ್ನು ಕಾಯ್ದಿಕೊಂಡಿರುತ್ತಾರೆ. ಮುಖ್ಯಸ್ಥನಿಗಾಗಿ ಎತ್ತರದ ತಾಣವನ್ನೇನೂ ಮಾಡಿರುವದಿಲ್ಲವಾದರೂ ನ್ಯಾಯನಿರ್ಣಯಕ್ಕೆ ಅವನ ಪಾತ್ರ ಬಹಳ ಮಹತ್ವದ್ದು. ಆಪಾದಿತನಾಗಲೀ, ಕೇಳುಗರಾಗಲೀ ನೇರವಾಗಿ ಮುಖ್ಯಸ್ಥನೊಡನೆ ಮಾತನಾಡಬಹುದು. ಆತನ ತೀರ್ಮಾನ ಅಂತಿಮವಾದದ್ದು.

**ಕಾಡು ಕುರುಬರ ಪಂಚಾಯತಿ**

ಕಾಡು ಕುರುಬ ಸಮುದಾಯವು ತಮ್ಮದೆ ಆದ ಸಂಪ್ರದಾಯಿಕ ಪಂಚಾಯತಿ ವ್ಯವಸ್ಥೆಯನ್ನು ಹೊಂದಿದೆ. ಇವರು ತಮ್ಮ ವಾಸದ ಮುಖಂಡನನ್ನು 'ಯಜಮಾನ' ಎಂಬುವದಾಗಿ ಕರೆಯುತ್ತಾರೆ. ಅವನ ಅಧಿಕಾರ ಮತ್ತು ಸ್ಥಾನಮಾನ ಅನುವಂಶೀಕವಾದುದು. ಇವನ ನಂತರ ಆ ಸ್ಥಾನ ಹಾಗೂ ಅಧಿಕಾರವನ್ನು ಇವನ ಜೇಷ್ಠ ಪುತ್ರ ಪಡೆಯುತ್ತಾನೆ. ಈ ಯಜಮಾನನಿಗೆ ಇನ್ನಿಬ್ಬರು ಕಿರಿಯ ಯಜಮಾನರು ಸಹಾಯಕರಾಗಿ ಇರಬಹುದು ಅಥವಾ ಇಲ್ಲದಿರಬಹುದು. ಕಾಡು ಕುರುಬರ ಬದುಕಿನ ಪ್ರತಿಹಂತದಲ್ಲೂ ಹಾಗೂ ಇವರು ಆಚರಿಸುವ ಪ್ರತಿಯೊಂದು ಕಾರ್ಯಕ್ರಮದಲ್ಲಿ ಇವನ ಪಾತ್ರ ಅನಿವಾರ್ಯ ಹಾಗೂ ಮಹತ್ವವಾದುದು. 'ಹಾಡಿ' (ನೆಲೆ)ಯ ನಿವಾಸಿಗಳ ರಕ್ಷಣೆ ಇವನ ಜವಾಬ್ದಾರಿ. ಇವರ ಬದುಕಿನಲ್ಲಿ ಯಾವ ಸಮಸ್ಯೆಯೂ ತಲೆ ಎತ್ತದ ಹಾಗೆ ಮತ್ತು ಯಾವ ವಿಧವಾದ ಅಡಚಣೆಗಳು ಬರದ ಹಾಗೆ ನೋಡಿ ಕೊಳ್ಳುವನು.

ಕಾಡು ಕುರುಬರ ಬಾಳಿನ ಕೆಲವು ಮುಖ್ಯ ವಿಷಯಗಳನ್ನು ಇತ್ಯಾರ್ಥ ಮಾಡುವಾಗ ಇವನ ನಿರ್ಣಯವೇ ಅಂತಿಮವಾದದು . ಕಲಹಗಳು ಹಾಗೂ ವ್ಯಾಜ್ಯಗಳು ಸಂಭವಿಸಿದಾಗ ಅವುಗಳನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸಿ ಬಗೆಹರಿಸುವದು, ತಪ್ಪು ಮಾಡಿದವನಿಗೆ ಮತ್ತು ಬುಡಕಟ್ಟಿನ ಕಟ್ಟು ಪಾಡುಗಳನ್ನು ಮೀರಿದವನಿಗೆ ಹಾಗೂ ನಿಯಮಗಳನ್ನು ಉಲ್ಲಂಘಿಸಿದವನಿಗೆ ದಂಡ ಶುಲ್ಕ ಅಥವಾ ಬಹಿಷ್ಕಾರ, ಶಿಕ್ಷೆಯನ್ನು ವಿಧಿಸುವದು ಅಥವಾ ಅವನು ಎಲ್ಲರಿಗೂ ಊಟದ ಏರ್ಪಾಡನ್ನು ಮಾಡುವಂತೆ ನಿರ್ಬಂಧಿಸುವದು ಮುಂತಾದ ನ್ಯಾಯಾಂಗ ಕೆಲಸಗಳ ನಿರ್ವಹಣೆಗೆ ಇವನೇ ಜವಾಬ್ದಾರಿಯಾಗಿರುತ್ತಾನೆ. ನ್ಯಾಯ ಪೀಠದ ಮೇಲೆ ಕುಳಿತಿರುವಾಗ ಎಲ್ಲರೂ ಅವನಿಗೆ ಗೌರವಿಸುವದಲ್ಲದೆ ಅವನ ತೀರ್ಮಾನಗಳಿಗೆ ತಲೆ ಬಾಗುತ್ತಾರೆ.

**ಎರವರ ರಾಜಕೀಯ ವ್ಯವಸ್ಥೆ**

"The state came into Existance for the sake of life, and it continues for the sake of good life" ಎನ್ನುವ ಅರಿಸ್ಟಾಟಲರ ಹೇಳಿಕೆಯಂತೆ ಆದಿವಾಸಿ ಸಮುದಾಯಗಳ ಪ್ರಮುಖ ಗುರಿ, ಶಾಂತಿ ಮತ್ತು ರಕ್ಷಣೆಯ ಬದುಕನ್ನು ಸಾಗಿಸುವುದಾಗಿದೆ. ಅದಕ್ಕಾಗಿ ಎಲ್ಲಾ ಸಮುದಾಯಗಳು ಅಗತ್ಯವಾದ ಸಂಘಟನೆಯನ್ನು ರಚಿಸಿಕೊಳ್ಳುತ್ತವೆ. ಈ ಸಂಘಟನೆಯು ಎರವರ ರಾಜಕೀಯ ಜೀವನಕ್ಕೆನಾಂದಿಯಾಯಿತು. ಎರವರು ತಮ್ಮ ಸಂಘಟನೆಯನ್ನು ವಿಕೇಂದ್ರೀಕರಣ ಪದ್ದತಿಯ ಸರಕಾರವನ್ನು ಹೋಲುತ್ತದೆ.

೧. **ಕುಂಜುಗಾರ :** ಊರಿನಿಂದ ಎರವರ ಪ್ರಾಥಮಿಕ ಹಂತ ಪ್ರಾರಂಭವಾಗುತ್ತದೆ. ಎರವರು ವಾಸಿಸುವ ನೆಲೆ ಅಥವಾ ತಾಣವನ್ನು ಹುಟ್ಟು ಹಾಕಿದ ಮೊದಲಿಗನನ್ನು "ಕುಂಜುಗಾರ" ಎನ್ನುವರು. ಈ ಕುಂಜುಗಾರನ ತೀರ್ಪು ಅಂತಿಮವಾದದ್ದು.

೨. **ನಾಡುಕಾರ :** ಎರವರು ವಾಸಿಸುವ ಪ್ರದೇಶವನ್ನು ವಿವಿಧ ನಾಡುಗಳನ್ನಾಗಿ, ಅದರ ಮುಖ್ಯಸ್ಥರನ್ನು ನಾಡುಕಾರನೆಂದು ಕರೆಯುತ್ತಾರೆ.

೩. **ಗ್ರಾಮ ಮಂಡಳಿ :** ಎರವರು ನೆಲೆದಾಣಗಳಲ್ಲಿ ಗ್ರಾಮ ಮಂಡಳಿ ಎಂಬ ಸಭೆಯನ್ನು ರಚಿಸಿಕೊಂಡಿರುತ್ತಾರೆ. ಈ ಮಂಡಳಿಯಲ್ಲಿ ಕರ್ಮಿ, ಕನ್ನಲಾಡಿ, ಕುಂಜುಕಾರ, ನಾಡುಕಾರ

ಮತ್ತು ಚಮ್ಮಾರರು ಇರುತ್ತಾರೆ. ಈ ಗ್ರಾಮ ಮಂಡಳಿಯು ಎರವರ ಊರಿನ ಆಂತರಿಕ ಚಟುವಟಿಕೆಗಳನ್ನು ನೋಡಿಕೊಂಡು ಹೋಗುವದರ ಜೊತೆಗೆ ಸಮುದಾಯದಲ್ಲಿ ಉದ್ಭವಿಸುವ ಎಲ್ಲಾ ಸಮಸ್ಯೆಗಳನ್ನು ಪರಿಹಾರ ಮಾಡುತ್ತದೆ.

**ಬೇಡರ ರಾಜಕೀಯ ವ್ಯವಸ್ಥೆ**

ಬೇಡರ ತಮ್ಮ ಹಟ್ಟಿಗಳಿಗೆ ಅನುಕೂಲಕರವಾದ ರೀತಿಯಲ್ಲಿ ರಾಜಕೀಯ ಸಂಘಟನೆಯನ್ನು ಮಾಡಿಕೊಂಡಿದ್ದರು. ಇವರ ಸಂಘಟನೆ ಮತ್ತು ನಿಯಮಗಳು ಖಡ್ಡಾಯವಾಗಿರದೆ ಕೇವಲ ನಂಬಿಕೆ, ಸಂಪ್ರದಾಯ ಮತ್ತು ರೂಢಿಗಳನ್ನು ಅವಲಂಬಿಸಿದ್ದವು. ಬೇಡರ ಸಂಘಟನೆ ಹಾಗೂ ಪಂಚಾಯತಿ ಪದ್ಧತಿಯು ಕಟ್ಟೆ ಮನೆಗಳೆಂಬ ಹೆಸರಿನಲ್ಲಿ ನಡೆಯುತ್ತಿದ್ದವು(ಭಾವಚಿತ್ರ ೨.೧ ನೋಡಿ).

**ಕಟ್ಟೆ ಮನೆಯ ನ್ಯಾಯ ತೀರ್ಮಾನಗಳು**

"ಒಗ್ಗಟ್ಟಿನಲ್ಲಿ ಬಲವಿದೆ" ಎಂಬ ಗಾದೆಯನ್ನು ಆಧಾರವಾಗಿರುಕೊಂಡು ಬೇಡರು ತಮ್ಮ ನ್ಯಾಯಾ ತೀರ್ಮಾನ ಮಾಡುತ್ತಿದ್ದರು. ಏಕೆಂದರೆ ಒಂದು ಬುಡಕಟ್ಟಿನವರು ಮತ್ತೊಂದು ಬುಡಕಟ್ಟಿನವರ ಜೊತೆಗೆ ಕಾಡಿನಲ್ಲಿ, ಗುಡ್ಡ-ಗಾಡಿನಲ್ಲಿ ವಾಸವಾಗಿರ ಬೇಕಾಗಿದ್ದರಿಂದ ಅವರ ಮಧ್ಯ ವೈಮನಸ್ಸು ಅಥವಾ ಜಗಳವಾಗುವ ಸಂದರ್ಭಗಳು ಇದ್ದವು. ಅದಕ್ಕಾಗಿ ಅವರು ತಮ್ಮ ತಮ್ಮಲ್ಲಿ ಒಗ್ಗಟ್ಟು ಮತ್ತು ಸೌಹಾರ್ದತೆಯನ್ನು ಬೆಳೆಸಿಕೊಂಡು ಬರುತ್ತಿದ್ದರು. ಅವರ ಸಾಮಾಜಿಕ ಮತ್ತು ಗುಂಪು ಜೀವನಕ್ಕೆ ಒಗ್ಗಟ್ಟಿನ ಜೀವನ ಅವಶ್ಯವಾಗಿತ್ತು.

ಬೇಡರ ಮನೆತನಗಳಲ್ಲಿ ಜಗಳ ಅಥವಾ ಯಾವುದಾದರೂ ಸಮಸ್ಯೆಗಳು ಇದ್ದರೆ ಅವುಗಳ ತೀರ್ಮಾನಕ್ಕಾಗಿ ಸಮುದಾಯದಿಂದ ಹೊರಗೆ ಹೋಗುವಂತಿಲ್ಲ. ತಮ್ಮ ಸಮುದಾಯದ ಮುಖಂಡನ ಸಮ್ಮುಖದಲ್ಲಿ ತೀರ್ಮಾನವಾಗುತ್ತಿದ್ದವು. ಬುಡಕಟ್ಟಿನ ಎಲ್ಲಾ ಸದಸ್ಯರು ಪಂಚಾಯತಿ ತೀರ್ಮಾನಗಳಿಗೆ ತಲೆ ಬಾಗಲೇಬೇಕಾಗುತ್ತಿತ್ತು. ನ್ಯಾಯಾಂಗ ವ್ಯವಸ್ಥೆ ಈ ರೀತಿ ಬುಡಕಟ್ಟುಗಳಲ್ಲಿ ಬಿಗಿ ಇದ್ದುದರಿಂದಲೆ ಒಂದೊಂದು ಹಟ್ಟಿ ಅಥವಾ ಗುಂಪುಗಳಲ್ಲಿ ಯಾವದೇ ರೀತಿಯ ಜಗಳ, ವೈಮನಸ್ಸು ಉದ್ಭವಿಸುತ್ತಿರಲಿಲ್ಲ. ಆದ್ದರಿಂದ ಹಟ್ಟಿಯ ಜನಗಳ ನಡುವೆ ಹೆಚ್ಚು ಸೌಹಾರ್ದಯುತ ವಾತಾವರಣ ಇರುವದು ಕಂಡುಬರುತ್ತಿತ್ತು.

ಬೇಡರ ಹಟ್ಟಿಯಲ್ಲಿ ಸಣ್ಣ-ಪುಟ್ಟ ಜಗಳವಾದರೆ ನಾಯಕನೇ ಬಗೆಹರಿಸುತ್ತಿದ್ದನು. ಆದರೆ ದೊಡ್ಡ ಸ್ವರೂಪದ ಸಮಸ್ಯೆ ಇದ್ದರೆ ಕಟ್ಟೆ ಮನೆಗಳಿಗೆ ಹೋಗ ಬೇಕಾಗುತಿತ್ತು. ಈ ಕಟ್ಟೆ ಮನೆಗಳು ಆರೇಳು ಹಟ್ಟಿಗಳಿಗೆ ಒಂದರಂತೆ ಇರುತ್ತಿದ್ದವು . ಇವು ಮುಖ್ಯವಾಗಿ ನ್ಯಾಯ ನಡೆಯುವ ಸ್ಥಳಗಳೇ ಆಗಿರುತ್ತಿದ್ದವು. ಬುಡಕಟ್ಟಿನ ಸದಸ್ಯರಿಂದ ನಿಯಮಿಸಲ್ಪಟ್ಟ, ಗೌರವಿಸಲ್ಪಿಟ್ಟ, ಯಜಮಾನರು ಇರುತ್ತಿದ್ದರು. ಈ ಕಟ್ಟೆ ಮನೆಗಳು ಸಾಮಾನ್ಯವಾಗಿ ದೇವರುಗಳು ನೆಲೆಸಿದ ಗುಡಿಸಲು ಅಥವಾ ಗುಡಿಯ ಮುಂಭಾಗದಲ್ಲಿ ಇರುತ್ತದೆ.

ಆಧುನಿಕ ಕಾಲದಲ್ಲೂ ಸಹಿತ ಗುಲಬರ್ಗಾ ಜಿಲ್ಲೆಯ ಕೆಲವು ಭಾಗದಲ್ಲಿ ಬೇಡ ಸಮುದಾಯವು ಕಟ್ಟೆಮನೆಯ ಪಂಚಾಯತಿ ಮುಂದುವರಿಸಿಕೊಂಡು ಬಂದಿರುವದು ಕಂಡುಬರುತ್ತಿದೆ. ಆದರೆ ಈ ಕಟ್ಟೆಮನೆಯ ಪಂಚಾಯತಿ ಮೊದಲಿನಷ್ಟು ಬಲಯುತವಾಗಿಲ್ಲ.

## ೨.೭.೨. ಬುಡಕಟ್ಟು ರಾಜಕೀಯ ಮತ್ತು ಅಧುನಿಕ ರಾಜಕೀಯ

ಪ್ರತಿಯೊಂದು ಬುಡಕಟ್ಟು ಸಮುದಾಯವು ತನ್ನ ನೆಲೆಗೆ ಅನುಕೂಲವಾದ ರೀತಿಯಲ್ಲಿ ರಾಜಕೀಯ ವಿಧಿ-ವಿದಾನಗಳನ್ನು ಅನುಸರಿಸುತ್ತಿದ್ದು ಅಧುನಿಕ ಸರಕಾರಿ ವ್ಯವಸ್ಥೆಗಳಿಗೆ ಮಾದರಿಯಾಗಿವೆ.

ಗೊಂಡರ ಪಂಚಾಯತಿ ಮತ್ತು ಅಡಳಿತ ಪದ್ದತಿಯು ಅಧುನಿಕ ಪದ್ದತಿಯ ವಿಕೇಂದ್ರೀಕರಣ ಆಡಳಿತದ ಸ್ವರೂಪವನ್ನು ಹೋಲುತ್ತದೆ. ಅವರು ಬಳಸುವ ಜಾತಿ ಪಂಚಾಯತಿ ಇಂದು ಮಂಡಲ ಅಥವಾ ಗ್ರಾಮ ಪಂಚಾಯತಿಗಳಲ್ಲಿ ಅನುಸರಿಸಲಾಗುತ್ತದೆ.

ಗೊಂಡರು ವಾಸಿಸುವ ಭೂಪ್ರದೇಶವನ್ನು ಅನುಕೂಲಕ್ಕಾಗಿ ಗೊಂಡ ಪಂಚಾಯಿತಿ ಏಳುಗ್ರಾಮ ಪಂಚಾಯಿತಿ ಮತ್ತು ಜಾತಿ ಪಂಚಾಯಿತಿ ಎಂದು ವರ್ಗೀಕರಿಸಿದ್ದರು. ಅದೇ ರೀತಿ ನಾವು ಇಂದು ಅಡಳಿತದ ಅನುಕುಲಕ್ಕಾಗಿ ಕೇಂದ್ರ ಸರಕಾರ, ರಾಜ್ಯ ಸರಕಾರ, ಜಿಲ್ಲಾ ಮತ್ತು ತಾಲೂಕ ಪಂಚಾಯತಿ, ಗ್ರಾಮಪಂಚಾಯಿತಿ ಎಂದು ವಿಂಗಡಿಸಿ ಅಡಳಿತ ನಡೆಸುತ್ತೆವೆ.

ಬುಡಕಟ್ಟು ಸಮುದಾಯದ ಕಾನೂನು ವ್ಯವಸ್ಥೆಯು ಇಂಗ್ಲೆಂಡ ಸಂವಿಧಾನವನ್ನು ಹೋಲುತ್ತದೆ. ಏಕೆಂದರೆ ಹಲವಾರು ಬುಡಕಟ್ಟುಗಳ, ರೂಢಿಗಳ, ಪದ್ದತಿಗಳ, ಸಂಪ್ರಾದಾಯಗಳ ಮೇಲೆ ಹೆಚ್ಚಿನ ನಂಬಿಕೆಯನ್ನು ಇಟ್ಟಿದ್ದವು.

ಬುಡಕಟ್ಟು ಸಮುದಾಯಗಳು ತಮ್ಮ ಮುಖಂಡನನ್ನು ಆಯ್ಕೆ ಮಾಡಿಕೊಳ್ಳುವಾಗ ಪ್ರಾಚೀನ ಗ್ರೀಕ್ ಮಾದರಿಯಂತೆ ಪ್ರತ್ಯಕ್ಷ ಪ್ರಜಾಪ್ರಭುತ್ವ ರೀತಿಯಲ್ಲಿ ಆಯ್ಕೆ ಮಾಡಿಕೊಳ್ಳುತ್ತಿದ್ದವು. ಆವರ ಮುಖಂಡನನ್ನು ಪ್ರಧಾನ ಮತ್ತು ಗೌಡ ಎಂದು ಕರೆಯಲಾಗುತ್ತದೆ. ಈ ಪದಗಳು ಈಗ ರಾಜಕೀಯದಲ್ಲಿ ಚಿರಪರಿಚಿತವಾಗಿವೆ.

ಸಿಂದ ಮಾದಿಗರು ತಮ್ಮ ಹಟ್ಟಿಯ ಮುಖಂಡನ ಸ್ಥಾನಕ್ಕೆ ವಂಶಪರಂಪರೆಯನ್ನು ಅನುಸರಿಸುತ್ತಿದ್ದರು. ಈ ವಿಧಾನವು ಇಂಗ್ಲೆಂಡ್ ರಾಣಿಯನ್ನು ಅಧಿಕಾರಕ್ಕೆತರುವ ನೀತಿಯನ್ನು ಹೋಲುತ್ತದೆ.

ಅದೇ ಸೋಲಿಗರ ಸಮುದಾಯ ತಮ್ಮ ಮುಖಂಡನನ್ನು ಆಯ್ಕೆ ಮಾಡುವಾಗ ಅರ್ಹತೆಯನ್ನು ಅನುಸರಿಸಲಾಗುತ್ತಿತ್ತು. ಈ ವಿಧಾನ ಇಂದು ಭಾರತದಲ್ಲಿ ಎಂ.ಎಲ್.ಎ. ಮತ್ತು ಎಂ.ಪಿ.ಗಳನ್ನು ಆಯ್ಕೆ ಮಾಡುವಾಗ ಅನುಸರಿಸಲಾಗುತ್ತದೆ.

ಕೆಲವು ಬುಡಕಟ್ಟು ಸಮುದಾಯಗಳಲ್ಲಿ ಯಜಮಾನನ ಸ್ಥಾನಕ್ಕೆ ಬರುವುದಕಿಂತ ಮುಂಚೆ ಇಳೆ ಸ್ವೀಕರಿಸಬೇಕಾಗುತ್ತದೆ. ಈ ವಿಧಾನ ನಮ್ಮ ರಾಷ್ಟ್ರಪತಿ, ವಿಧಾನಸಭೆ ಸದಸ್ಯರು, ಲೋಕಸಭಾ ಸದಸ್ಯರು ಅಧಿಕಾರ ಸ್ವೀಕರಿಸುವಾಗ ಪ್ರಮಾಣ ವಚನವನ್ನು ನೆನಪಿಗೆ ತರುತ್ತದೆ.

ಏನೇ ಆಗಲಿ ಈ ಬುಡಕಟ್ಟು ಸಮುದಾಯಗಳು ರಾಜಕೀಯ ವಿಧಿ-ವಿಧಾನಗಳು ಸಂಪೂರ್ಣ ವಾಗಿರದಿದ್ದರೂ, ಸ್ವಲ್ಪ ಮಟ್ಟಿಗಾದರೂ ಮಾದರಿಯಾಗಿದ್ದು ಕೆಲವು ವಿಷಯಗಳಲ್ಲಿ ಈ ಸಮುದಾಯದ ರಾಜಕೀಯ ಪದ್ದತಿಯು ಅಧುನಿಕ ರಾಜಕೀಯ ಪದ್ದತಿಗಿಂತ ಶ್ರೇಷ್ಠವಾಗಿದೆ.

ಅಧಿಕಾರದ ವ್ಯಾಮೋಹವಾಗಲೀ, ಅಧಿಕಾರಕ್ಕಾಗಿ ಕಚ್ಚಾಟವಾಗಲೀ ಈ ಬುಡಕಟ್ಟು ಸಮುದಾಯಗಲ್ಲಿ ಇರಲಿಲ್ಲ. ಪ್ರಮಾಣಿಕವಾಗಿ ಆಯಾ ಸಮುದಾಯದ ಕುಲದೇವರ ಮೇಲೆ ಪ್ರಮಾಣ ಮಾಡಿ ನಿಷ್ಠೆಯಿಂದ ಅಧಿಕಾರ ಚಲಾಯಿಸುತ್ತಿದ್ದರು.

**ಉಪಸಂಹಾರ**

ಈ ಮೇಲಿನ ಎಲ್ಲಾ ಪದಗಳು ಮತ್ತು ಅನುಸರಿಸುವ ವಿಧಾನಗಳನ್ನು ಅಧ್ಯಯನ ಮಾಡಿದಾಗ ಅಥವಾ ಸಂಶೋಧಿಸಿದಾಗ ಬುಡಕಟ್ಟು ರಾಜಕೀಯವು ಅಧುನಿಕ ರಾಜಕೀಯ ಮತ್ತು ಸರಕಾರಿ

ವ್ಯವಸ್ಥೆಗಳಿಗೆ ಮಾದರಿಯಾಗಿ ಕಂಡುಬರುತ್ತದೆ. ಏಕೆಂದರೆ ನಾಗರಿಕತೆಯನ್ನೇ ಅರಿಯದೆ ಇರುವ ಈ ಬುಡಕಟ್ಟುಗಳು ಇಂತಹ ವ್ಯವಸ್ಥಿತವಾದ ನಡವಳಿಕೆಗಳನ್ನು ಅನುಸರಿಸುತ್ತಿದ್ದರು. ನಿಜವಾಗಲು ಈ ಸಮುದಾಯದ ರಾಜಕೀಯ ಆಡಳಿತ, ನ್ಯಾಯಪದ್ದತಿ ಮತ್ತು ಶಿಕ್ಷೆ, ರಕ್ಷಣೆ ಇತ್ಯಾದಿ ವಿಷಯಗಳ ಬಗ್ಗೆ ಹೆಚ್ಚಿನ ಆಸಕ್ತಿ ಹೊಂದಿದ್ದು ಕುತುಹಲದಿಂದ ಭಾಗವಹಿಸುತ್ತಿದ್ದರು.

ಏನೇ ಆಗಲಿ ಬುಡಕಟ್ಟುಗಳು ಶಾಂತಿ ಶಿಸ್ತು ಮತ್ತು ನೆಮ್ಮದಿಯ ಜೀವನ ನಡೆಸುವದರ ಜೊತೆಗೆ ಇವುಗಳಿಗೆ ಧಕ್ಕೆಯಾಗದೆ, ನ್ಯಾಯ ತೀರ್ಮಾನ ಪಂಚಾಯತಿ ಮತ್ತು ಶಿಕ್ಷೆ ಹಾಗೂ ಬಹಿಷ್ಕಾರ ಇತ್ಯಾದಿಗಳಿಂದ ದೂರ ಇರುತ್ತಿದ್ದರು.

ಆದಿವಾಸಿಗಳು ಅನುಕೂಲಕ್ಕಾಗಿ ಮಾಡಿಕೊಂಡ ಒಂದು ಪುಟ್ಟ-ಸಂಘಟನೆಯು ಇಂದಿನ ಸಂಕೀರ್ಣ ರಾಜಕೀಯ ವ್ಯವಸ್ಥೆಗೆ ಮಾದರಿಯಾಗಿದೆ ಎಂದು ಹೇಳಲು ಹೆಮ್ಮೆ ಎನಿಸುತದೆ, ಏಕೆಂದರೆ ಶಾಂತಿಯತವಾದ ಸಹಬಾಳ್ವೆಯು ಮನಷ್ಯನ ಮನೋಧರ್ಮವಾಗಿದೆ. ಅದಕ್ಕಾಗಿ ಕಾಡಿನಲ್ಲಿದ್ದ ಪರಸ್ಥಿತಿಗೆ ಅನುಗುಣವಾಗಿ ಸಂಘಟನೆಯು ರೂಢಿಸಿಕೊಂಡು ಶಾಂತಿ ಸ್ಥಾಪನೆಯ ಮಾರ್ಗವನ್ನ ಕಂಡುಹಿಡಿದನು. ತಮ್ಮ ನೆಲೆಯ ಮುಖ್ಯಸ್ಥನನ್ನು ಎಲ್ಲರ ಒಪ್ಪಿಗೆಯ ಮೇರೆಗೆ ಆಯ್ಕೆ ಮಾಡಿಕೊಳ್ಳುತ್ತಿದ್ದರು. ಈ ರೀತಿ ಆಯ್ಕೆ ಮಾಡುವ ಪದ್ಧತಿಯು ಇಂದಿನ ಪ್ರಜಾಪ್ರಭುತ್ವ ದಲ್ಲಿ ಕಾಣುತ್ತೇವೆ.

"ಪಂಚಾಯಿತಿ" ಎಂದರೆ ಐದು ಜನರಿಂದ ಕೂಡಿದ ಸಮಿತಿ ಎಂದು ಹೇಳಬಹುದು. ಆದರೆ ಇಂದು ಗ್ರಾಮ ಪಂಚಾಯಿತಿ ಮತ್ತು ತಾಲೂಕ ಪಂಚಾಯತಿಗಳು ಅದೇ ಮಾದರಿಯಲ್ಲಿ ರಚಿಸಿರುವದನ್ನು ಕಾಣುತ್ತೆವೆ. ಆದಿವಾಸಿ ನೆಲೆಗಳಲ್ಲಿ ೧೫ ರಿಂದ ೨೦ ಮನೆಗಳು ಇರುತ್ತಿದ್ದವು. ಈ ಮನೆಗಳಲ್ಲಿ ಅನುಭವವಿರುವ ಐದುಜನ ಹಿರಿಯರನ್ನು ಈ ಪಂಚಾಯತಿಯಲ್ಲಿ ತೀರ್ಪುಗಳನ್ನು ನೀಡಲು ಆಯ್ಕೆ ಮಾಡುತ್ತಿದ್ದರು. ಅದೇ ರೀತಿ ಇಂದು ಸ್ಥಳೀಯ ಸಂಸ್ಥೆಗಳಲ್ಲಿ ಗ್ರಾಮದ ಮತದಾರರಿಂದ ಆಯ್ಕೆಯಾದ ಸದಸ್ಯರು ಪಂಚಾಯತಿಯಲ್ಲಿ ಕುಳಿತು ಊರಿನ ಸಮಸ್ಯೆಗಳನ್ನು ಬಗೆಹರಿಸುತ್ತಾರೆ. ಆದಿವಾಸಿಗಳು ತಮ್ಮ ಪ್ರಾಣ ಕೊಡಲು ಸಿದ್ದರಿರುತ್ತಾರೆ ವಿನಃ ತಮ್ಮ ರೂಢಿ ಸಂಪ್ರದಾಯಗಳನ್ನು ಆಚಾರ ವಿಚಾರಗಳನ್ನು ಬಿಟ್ಟು ನಡೆಯುವದಿಲ್ಲ. ಅದೇ ರೀತಿಯಾಗಿ ತಮ್ಮ ಪಂಚಾಯತಿಯ ಮುಖಂಡರನ್ನು ಆಯ್ಕೆ ಮಾಡುವಾಗ ಕೆಲವು

ಬುಡಕಟ್ಟುಗಳು ಅನುವಂಶೀಯತೆಯ ತತ್ವವನ್ನು ಅನುಸರಿಸುತ್ತವೆ. ಈ ಅನುವಂಶೀಕತೆಯ ತತ್ವವು ಇಂದು ಮುಂದುವರಿದ ರಾಷ್ಟ್ರ ಇಂಗ್ಲೆಂಡಿನ ರಾಣಿಯನ್ನು ಅಧಿಕಾರಕ್ಕೆ ತರುವಲ್ಲಿ ಅನುಸರಿಸುತ್ತಾರೆ.

ಕೆಲವು ಆದಿವಾಸಿ ಸಮುದಾಯಗಳು ತಮ್ಮ ಪಂಚಾಯಿತಿಯ ಮುಖಂಡರನ್ನು ನೇಮಿಸುವಾಗಿ ಪ್ರಜಾಪ್ರಭುತ್ವ ನೀತಿಯನ್ನು ಅನುಸರಿಸುವದು ಕಂಡುಬರುತ್ತದೆ. ಸೋಲಿಗರ ರಾಜಕೀಯ ವ್ಯವಸ್ಥೆಯಲ್ಲಿ ಈ ವಿಧಾನವನ್ನು ಈಗಲೂ ಕಾಣುತ್ತೇವೆ.

ಪಂಚಾಯತಿಗೆ ಆಯ್ಕೆಯಾಗಿರುವ ಮುಖಂಡರು ಸಂದರ್ಭಕ್ಕೆ ಅನುಸಾರವಾಗಿ ತಮ್ಮ ತೀರ್ಪುಗಳನ್ನು ನೀಡುತ್ತಾರೆ, ಇವರ ಪ್ರಮುಖವಾದ ಗುರಿ ತಮ್ಮ ನಿವಾಸಗಳಲ್ಲಿ ಶಾಂತಿ, ಶಿಸ್ತು, ಸೌಹಾರ್ದತೆಯನ್ನು ಕಾಪಾಡುವದು. ತೀರ್ಪು ನೀಡುವಾಗ ಮುಖಂಡರು ಕೆಲವು ಸಲ ಸರ್ವಾಧಿಕಾರಿಯಂತೆ ಎಂದರೆ ಪ್ರಧಾನ ಮಂತ್ರಿಯಂತೆ ಧೋರಣೆಗಳನ್ನು ನಿರ್ಣಯಿಸುತ್ತಾನೆ. ಮತ್ತು ಕೆಲವು ಸಲ ನಿವಾಸದ ಜನಗಳ ಅಭಿಪ್ರಾಯವನ್ನು ಕೇಳುತ್ತಾನೆ.

## ಅಡಿಟಿಪ್ಪಣಿ

1. ಶಂಕರರಾವ್ ಚ.ನ., ಭಾರತೀಯ ಸಮಾಜ,೧೯೯೫, ಪುಟ ೩೮೩
2. ಅದೇ
3. ಅದೇ
4. ಪಾಟೀಲ್ ಎಂ. ಬಿ.(ಸಂ), *ಗುಲಬರ್ಗಾ ಜಿಲ್ಲೆಯ ಗಜೇಟಿಯರ್*, ೧೯೯೭, ಪುಟ ೧
5. ಅದೇ
6. ಅದೇ
7. ಅದೇ
8. ಅದೇ, ಪುಟ ೩೪
9. ಅದೇ, ಪುಟ ೩೪
10. ಅದೇ
11. ಅದೇ
12. ಅದೇ, ಪುಟ ೩೫

13. ಅದೇ, ಪುಟ ೪೪

14. ಅದೇ, ಪುಟ ೪೭

15. ಅದೇ, ಪುಟ ೪೮

16. ಅದೇ

17. ಅದೇ, ಪುಟ ೫೮

18. ಅದೇ, ಪುಟ ೬೪

19. ಅದೇ, ಪುಟ ೮೨

20. ಅದೇ, ಪುಟ ೮೩

21. ಅದೇ, ಪುಟ ೮೭

## ಅಧ್ಯಾಯ ೩

# ಸ್ವತಂತ್ರ ಪೂರ್ವದ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ

(ಸುರಪುರ ಸಂಸ್ಥಾನದ ವಿಶೇಷ ಅಧ್ಯಯನ)

# ಸ್ವತಂತ್ರ ಪೂರ್ವದ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ(ಸುರಪುರ ಸಂಸ್ಥಾನದ ವಿಶೇಷ ಅಧ್ಯಯನ)

## ೩.೧ ಸುರಪುರ ಸಂಸ್ಥಾನ

ಭಾರತಾಂಬೆಯ ಭವ್ಯಪರಂಪರೆಗೆ ಕನ್ನಡನಾಡಿನ ಹಲವಾರು ಅರಸು ಮನೆತನಗಳು ನೀಡಿದ ಉನ್ನತ ಸಾಂಸ್ಕೃತಿಕ ಕೊಡುಗೆಗಳಲ್ಲಿ ಸುರುಪುರ ದೊರೆಗಳ ಕೊಡುಗೆ ಮಹತ್ವದ್ದು ಹಾಗೂ ಚಿರಸ್ಮರಣೆಯವಾದದ್ದು. ಸಾಮಾನ್ಯ ಸೈನಿಕರಾಗಿ ಸೇವೆ ಸಲ್ಲಿಸಿದ ಸುರಪುರ ದೊರೆಗಳು ಸ್ವಂತ ಸಂಸ್ಥಾನವನ್ನು ರಚಿಸಿ ಸುಮಾರು ೨೫೦ ವರ್ಷಗಳವರೆಗೆ ಅದರ ಆಡಳಿತ ನೋಡಿಕೊಂಡು ಪ್ರಜೆಗಳ ಅಭಿವೃದ್ಧಿಗಾಗಿ ನಿರಂತರವಾಗಿ ಶ್ರಮಿಸಿದ್ದಾರೆ. ಭಾರತದಲ್ಲಿ ಹಿಂದೂ ಸಂಸ್ಕೃತಿ ಉಸಿರಾಡಲು ಛತ್ರಪತಿ ಶಿವಾಜಿ ಮಹಾರಾಜನು ಹೇಗೆ ಪ್ರಮುಖ ಪಾತ್ರವಹಿಸಿದನೋ ಅದರಂತೆಯೇ ಅಥವಾ ಅದಕ್ಕಿಂತಲೂ ಒಂದು ಕೈ ಮೇಲಾಗಿ ಇಲ್ಲಿನ ದೊರೆಗಳು ಹಿಂದೂ ಸಂಸ್ಕೃತಿಯ ರಕ್ಷಕರಾಗಿಯೂ ಸರ್ವ ಧರ್ಮ ಸಹಿಷ್ಣುಗಳಾಗಿಯೂ ಈ ನಾಡನ್ನು ಪಾಲಿಸಿಕೊಂಡು ಬಂದಿದ್ದಾರೆ.

**ಸುರಪುರ ಸಂಸ್ಥಾನದ ಉದಯ**

ಮೆಡೋಸ್ ಟೇಲರನ ಪ್ರಕಾರ ಈ ಮನೆತನವು ಮೊದಲು ಮೈಸೂರು ದೇಶದ ರತ್ನಗಿರಿಯಿಂದ ಬಂದದ್ದಾಗಿದೆ [1]. ಅಲ್ಲಿ ದೊಡ್ಡ ಪಾಳೆಗಾರರಿದ್ದು, ಮುಸಲ್ಮಾನರ ಪ್ರಾರಂಭದ ದಾಳಿಯನ್ನು ಎದುರಿಸುತ್ತ, ತಮ್ಮ ಒಡೆಯರಿಗೆ ಸಹಾಯಕರಾಗಿದ್ದರು. ಮುಸಲ್ಮಾನರು ಗುಲಬರ್ಗಾದಲ್ಲಿ ಸ್ವಾತಂತ್ರ್ಯರಾದಾಗ, ವಿಜಯನಗರದ ಅರಸರು ತಮ್ಮ ಸಿಮೇಯ ರಕ್ಷಣೆಗಾಗಿ ಕೃಷ್ಣ ಮತ್ತು ತಂಗಭದ್ರಾ ನಡುವಿನ ಪ್ರದೇಶದಲ್ಲಿ ಈ ಬೇಡರನ್ನು ನೆಲೆಗೊಳಿಸಿದರು. ಅದರಲ್ಲಿ ರತ್ನಗಿರಿಯ ಬೇಡರು ಇದ್ದರು.

ಹಳೆಯ ಕೈಫಿಯತ್ತು ಪ್ರಕಾರ "ಸುರುಪುರ ಅರಸರು ಸಗರ ನಾಡಿನಲ್ಲಿ ಆಳುತ್ತಿದ್ದು ಅನಂತರ ದಕ್ಷಿಣಕ್ಕೆ ಹೋಗಿ ಪುನಃ ಕಲ್ಲಪ್ಪ ನಾಯಕನು ಮುದಗಲ್ಲಿಗೆ ಬಂದನೆಂದು ಹೇಳಿದೆ. ಆಗ ಮುದಗಲ್ಲಿನ ಕಿಲ್ಲೇದಾರನಾದ ಮುಸ್ತಾಫ ಖಾನ ಎಂಬುವನು ಕಲ್ಲಪ್ಪ ನಾಯಕನನ್ನು ಮುದಗಲ್ಲಿಗೆ ಬಂದು ನೆಲೆಸುವಂತೆ ಮಾಡಿನೆಂದು ಐತಿಹ್ಯವಿದೆ.

ಅದು ಏನೇ ಇರಲಿ ಸುರುಪುರದ ಅರಸರು 'ಗೋಸಲ' ವಂಶದವರೆಂದು ಕರೆಯುವದು ರೂಢಿಯಲ್ಲಿದೆ. ಇವರು ಗೋವುಗಳನ್ನು ಸಂರಕ್ಷಿಸುವದರಿಂದ ವಿಜಯನಗರ, ಬೀದರ, ಬಹುಮನಿ, ವಿಜಾಪುರ, ಗೋವಳಕೊಂಡ, ಮೊಗಲ, ನಿಜಾಮ, ಟಿಪ್ಪು ಸುಲ್ತಾನ, ಮತ್ತು ಇಂಗ್ರೇಜರು ಹೀಗೆ ಹಲವಾರು ರಾಜರರ ಸಂಬಂಧ ಇರುವದನ್ನು ಗಮನಿಸಿದಾಗ ಇವರ ಘನತೆ, ಗೌರವಗಳು ಎದ್ದು ಕಾಣುತ್ತವೆ.

ಕಲ್ಲಪ್ಪ ನಾಯಕನಿಗೆ ಏಳು ಜನ ಮಕ್ಕಳು, ತಂದೆಯ ಮರಣದನಂತರ ಬೇರೆ ಬೇರೆ ಕಡೆ ಚದುರಿ ಹೋದರು. ಚಿನ್ನ ಹಣಮಪ್ಪ ನಾಯಕನು ಕಲ್ಲಪ್ಪ ನಾಯಕನ ಕಿರಿಯ ಮಗನು ಕಕ್ಕೇರಿಯ ಪ್ರಾಂತ್ಯದ ಪಾಳೆಗಾರನಾಗಿದ್ದನು. ಅವನ ಸಹೋದರರು ಕೊಡೇಕಲ್ ಮತ್ತು ಕೋಸಗಿ ಹಾಗೂ ಅರಿಕೇರಿಗಳ ಪಾಳೆಗಾರರಗಾಗಿದ್ದರು. ನಂತರ ಆರು ತಲೆಮಾರಿನವರೆಗೆ ಎಂದರೆ. ಗಡ್ಡಿ ಪಿಡ್ಡ ನಾಯಕನು ಪ್ರಸಿದ್ದಿಯನ್ನು ಪಡೆಯುವವರೆಗೆ ಯಾವದೇ ಮಾಹಿತಿ ದೊರೆತಿಲ್ಲ.

# ಸುರಪುರ ನಾಯಕ (ಗೋಸಲ) ದೊರೆಗಳ ವಂಶವೃಕ್ಷ

- ನರಸಿಂಹ ನಾಯಕ
- ವೀರಬೊಮ್ಮ ನಾಯಕ
- ನಿಂಗಪ್ಪನಾಯಕ
- ಒಡೇರ ನಾಯಕ

ಸಾರಂಗಕೊಳದಲ್ಲಿದ್ದವರು

- ಕಲ್ಲಪ್ಪ ನಾಯಕ ---- ಹಿರಿತುಂಬುಳದಲ್ಲಿದ್ದ (ಈತನಿಗೆ ಬಸವಶಂಕರನೆಂಬಬಿರುದು)
  - ಹಿರೇಹನುಮಪ್ಪನಾಯಕ
  - ಇಮ್ಮಡಿಹನುಮಪ್ಪನಾಯಕ
  - ಸೌಜಂಗನಾಯಕ
  - ಕರಿಹನುಮನಾಯಕ
  - ಬಿಲ್ಲಹನುಮನಾಯಕ
  - ಚಿನ್ನಹನುಮನಾಯಕ (ಇವನ ತರುವಾಯ ಆರುತಲೆಮಾರುಗಳು)
    - ಹಾವಿನಾಯಕ
    - ಪೆದ್ದಸೋಮನಾಯಕ
    - ಎರ್ರಸಿಂಗನಾಯಕ
    - ಮದರಿನಾಯಕ
    - ವೀರಝಂಪನಾಯಕ
    - ಬಲಿಸೋಮನಾಯಕ
    - ಪೆದ್ದ (ಹಿರೇ) ಪಾಮನಾಯಕ (ಈತ ಕಕ್ಕೇರಿಗೆ ಬಂದ)
      - ಜಕ್ಕಪ್ಪದೇಸಾಯಿ
        - ಗಡ್ಡಿಪಿಡ್ಡನಾಯಕ (ಸುರಪುರ) (೧೬೩೬-೧೬೬೬)
          - ಅನ್ನದಾನಿಸೋಮನಾಯಕ (ಇತನ ಅರುಜನ ಮಕ್ಕಳಲ್ಲಿ)
            - ಪೀತಾಂಬರಬಹರಿಪಿಡ್ಡನಾಯಕ - II (೧೬೮೭-೧೭೨೭)
              - ಪಾಮನಾಯಕ - II (೧೭೨೭-೧೭೪೧)
                - ಪಿಡ್ಡನಾಯಕ (೧೭೪೨-೧೭೪೬)
                - ಮೊಂಡಗೈವೆಮಕಟಪ್ಪನಾಯಕ (೧೭೪೭-೧೭೬೨)
              - ರಮಣಭೂಪಾಲ
                - ರಾಘವಪಾಮನಾಯಕ (೧೭೫೨-೧೭೭೩) ಭಾರ್ಗವಪುರಾಣ ಕರ್ತೃ
                  - ವೆಂಕಟಪ್ಪನಾಯಕ - II (೧೭೭೩-೧೮೦೨)
              - ಕೃಷ್ಣಪ್ಪನಾಯಕ
                - ಮದನಗೋಪಾಲನಾಯಕ
                  - ಪಡ್ಡನಾಯಕ -IV (೧೮೦೨-೧೮೧೮)
              - ವಾಸುದೇವನಾಯಕ (ಮುಂಡಗಿ)
              - ಹನುಮಪ್ಪನಾಯಕ
          - ಜಕ್ಕಪ್ಪನಾಯಕ
          - ಜಡಿಸೋಮನಾಯಕ
        - ಗಡ್ಡಿಲಿಂಗ ನಾಯಕ (ಗುಡುಗುಂಟಿ ಪಜಾರ್)
          - ಹುಚ್ಚಸೋಮನಾಯಕ
          - ಹಸರಂಗಿಪಾಮನಾಯಕ (೧೬೬೬-೧೬೮೭)
      - ಸೋಮನಾಯಕ

ಪುಟ ಮುಂದವರಿಸಿದೆ .. ೨..

.. ೨ ..




ವಕ್ತಾರು
ಶ್ರೀ ಕೃಷ್ಣಮಚಾರಿ
ಸಂಸ್ಥಾನದ ಗುರುಗಳು

೧೬೩೬ರಿಂದ ೧೬೬೬ರಲ್ಲಿ ಸುರುಪುರದ ಗಡ್ಡಿ ಪಿಡ್ಡನಾಯಕನು ಈ ವಂಶದ ಪ್ರಥಮ, ಪ್ರಮುಖ ಅರಸು ಎಂದು ತಿಳಿದುಬರುತ್ತದೆ. ಇವರಿಗೆ ತಿರುಪತಿ ವೆಂಕಟರಮಣ ಮನೆ ದೇವರಾಗಿದ್ದು, ಗುಡಗುಂಟಿಯ ನಾಯಕರು ಶೈವಾಚಾರ ಸಂಪ್ರದಾಯದವರಾಗಿದ್ದರು. ಆದರೆ ಸುರುಪುರ ಅರಸರು ವೈಷ್ಣವ ಮತಾವಲಂಬಿಗಳಾಗಿರುವುದು ತಿಳಿದುಬರುತ್ತದೆ.

ಇಲ್ಲಿಯವರೆಗೆ ತಿರುಪತಿಯಲ್ಲಿ ಸುರುಪುರ ಅರಸರ ಹೆಸರಿನಲ್ಲಿ ವಿಶೇಷ ಪೂಜೆ ನಡೆಯುತ್ತದೆ ಮತ್ತು ಎಲ್ಲಾ ಗೋಸಲ ವಂಶದವರು ವೆಂಕಟರಮಣನನ್ನು ಮನೆದೇವರೆಂದು ನಡೆದು ಕೊಳ್ಳುತ್ತಾರೆ.

## ೩.೨. ಸುರುಪುರು ಅರಸರ ರಾಜಕೀಯ ಸಾಧನೆಗಳು

### ಗಡ್ಡಿ ಪಿಡ್ಡ ನಾಯಕ (೧೬೩೬ರಿಂದ ೧೬೬೬)

ಸುರುಪುರ ದೊರೆಗಳಲ್ಲಿ ಗಡ್ಡಿ ಪಿಡ್ಡ ನಾಯಕನೇ ಮೂಲ ಪುರುಷ ಹಾಗೂ ಶ್ರೇಷ್ಠ ದೊರೆ ಎಂದು ಹೇಳಲಾಗಿದೆ. ಜಕ್ಕಪ್ಪ ದೇಸಾಯಿಗೆ ಇಬ್ಬರು ಮಕ್ಕಳು ಗಡ್ಡಿ ಪಿಡ್ಡ ನಾಯಕ ಮತ್ತು ಲಿಂಗನಾಯಕ. ಈ ಗಡ್ಡಿ ಲಿಂಗ ನಾಯಕನೇ ಗುಡಗುಂಟೆಯ ಮೂಲ ಪುರುಷ.

ಕೈಫಿಯತ್ತು ಪ್ರಕಾರ ಗಡ್ಡಿ ಪಿಡ್ಡ ನಾಯಕನು ೧೬೬೬ರಲ್ಲಿ ಜೀವಿಸಿದ್ದು ತಾಳಿಕೋಟೆ ಮತ್ತು ಕೊಡೇಕಲ್ಲಿನ ಸರದೇಶಗಡಿಯನ್ನು ಆದಿಲ್ ಶಾನಿಂದ ಹಳ್ಳಿಗಳನ್ನು ಇನಾಮು ಪಡೆದಿದ್ದನೆಂದು ಕೈಫಿಯತ್ತುಗಳಲ್ಲಿ ಹೇಳಿದೆ. ಆತನ ತಂದೆಯಾದ ಜಕ್ಕಪ್ಪ ನಾಯಕನಿಂದ ಬೇರೆಯಾಗಿ ತಾನೇ ಸ್ವತಃ ತನ್ನ ಹೆಸರಿನಿಂದ ಇನಾಮು ಸನದುಗಳನ್ನು ಸಂಪಾದನೆ ಮಾಡಿದ್ದಿರ ಬಹುದೆಂದು ತಿಳಿದುಬರುತ್ತದೆ.

### ಗಡ್ಡಿ ಪಿಡ್ಡನಾಯಕ ಮತ್ತು ಮೊಗಲರೊಡನೆ ಸಂಬಂಧ

ಬಿಜಾಪುರ ಸುಲ್ತಾನರ ಮೇಲೆ ಪಶ್ಚಿಮದಿಂದ ಮತ್ತು ಪೂರ್ವದಿಂದ ಮೊಗಲರ ಸರದಾರರು ದಾಳಿ ಮಾಡಿ ಬೀದರ, ಗುಲಬರ್ಗಾ ಮತ್ತು ಕಲ್ಯಾಣ ನಗರಗಳನ್ನು ಧ್ವಂಸಮಾಡಿ ದೋಣಿ ನದಿಯ ಪ್ರದೇಶವನ್ನು ಲೂಟಿ ಮಾಡಲು ಪ್ರಾರಂಭಿಸಿದರು. ಆಗ ಗಡ್ಡಿ-ಪಿಡ್ಡ ನಾಯಕನು ಸುಲ್ತಾನರಿಗೆ ಸಹಾಯ ಮಾಡಿ ಮೊಗಲರನ್ನು ಶೆಳ್ಳಗಿ, ಹುಲಕಲ್ ಮುಂತಾದ

ಸ್ಥಳಗಳಲ್ಲಿ ಸೋಲಿಸಿದ್ದರ ಬಗ್ಗೆ ಕೈಫಿಯತ್ತುಗಳಿಂದ ತಿಳಿದು ಬರುತ್ತದೆ. ಮೊಗಲರು ಮತ್ತು ಬಿಜಾಪುರ ಸುಲ್ತಾನನ ನಡೆವೆ ಒಪ್ಪಂದವಾದ ನಂತರ ಗೋಸಲರಾಯನ ಬಾಬತ್ತು ಪರಗಣೆ, ತಾಳಿಕೋಟೆಯ ಸರದೇಶ ಗತಿ, ಕೊಡೇಕಲ್, ಹಗರಟಗಿ, ಹೇರೂರು ಇತ್ಯಾದಿ ಹಳ್ಳಿಗಳನ್ನು ಗಡ್ಡಿ ಪಿಡ್ಡ ನಾಯಕನಿಗೆ ಕೊಡಲ್ಪಟ್ಟಿತು ಎಂದು ತಿಳಿದು ಬರುತ್ತದೆ.

**ಗಡ್ಡಿ ಪಿಡ್ಡನಾಯಕ ಮತ್ತು ಸಗರ ನಾಡು**

ಗುಲಬರ್ಗಾ ಜಿಲ್ಲೆಯ ಕೃಷ್ಣಾ ಮತ್ತು ಭೀಮಾ ನದಿಯ ನಡುವಿನ ಪ್ರದೇಶಕ್ಕೆ ಸಗರನಾಡು ಅಥವಾ ಸಗರ ಗಡ್ಡೆ ಎಂದು ಕರೆಯುವದು ಸಾಮಾನ್ಯವಾಗಿ ರೂಢಿಯಲ್ಲಿದೆ. ಈಗಿನ ಶಹಾಪುರ ತಾಲೂಕು ಕೇಂದ್ರಕ್ಕೆ ಹೊಂದಿಕೊಂಡಂತೆ ಉನ್ನತವಾದ ಬಿಟ್ಟದ ಮೇಲೆ ಒಂದು ದುರ್ಗವಿದೆ. ಮೊಗಲರು ಈ ನಾಡಿನ ಮೇಲೆ ದಾಳಿ ಮಾಡುತ್ತಿದ್ದರು. ಇಂತಹ ಅವ್ಯವಸ್ಥೆಯ ಕಾಲದಲ್ಲಿ ಗಡ್ಡಿ ಪಿಡ್ಡ ನಾಯಕನು ಈ ನಾಡಿನಲ್ಲಿ ಪ್ರಬಲನಾಗಿ ತಲೆ ಎತ್ತಿದನು. (ಭಾವಚಿತ್ರ ೩.೧,೨,೩,೪ ನೋಡಿ) ಕೈಫಿಯತ್ತು ಪ್ರಕಾರ ವಾಗಿಣಿಗೇರಿಯಲ್ಲಿ ಇರುವಾಗ ಪಿಡ್ಡ ನಾಯಕ ಮತ್ತು ಅವನ ಮಗ ಪಾಮನಾಯಕನು ಶಾಹಾಪೂರ ಕಿಲ್ಲೆಯ ಮೇಲೆ ದಾಳಿಮಾಡಿ ವಶಪಡಿಸಿಕೊಂಡರು ಎಂದು ವ್ಯಕ್ತವಾಗುತ್ತದೆ. ಬಿಜಾಪುರ ಸುಲ್ತಾನ ಫತ್ತೆಖಾನ, ಮತ್ತು ಹಮಿದಖಾನರ ನೇತೃತ್ವದಲ್ಲಿ ಒಂದು ದೊಡ್ಡ ಸೈನ್ಯವನ್ನು ಕಳುಹಿಸಿದರು. ಹೋರಾಟದಲ್ಲಿ ಬಿಜಾಪುರ ಸುಲ್ತಾನರ ಸೈನ್ಯ ಸೋತು ಹೋಯಿತು. ಗಡ್ಡಿ ಪಿಡ್ಡನಾಯಕನ ಮಗನಾದ ಪಾಮನಾಯಕನನ್ನು ವಿಜಾಪುರಕ್ಕೆ ಕರೊದೊಯ್ಯಲಾಯಿತು. ಫಾಮನಾಯಕನು ಆನೆಯ ಜೊತೆಯಲ್ಲಿ ಹೋರಾಟಮಾಡಿ ಜಯಶೀಲನಾಗಲು ಬಿಜಾಪುರ ಸುಲ್ತಾನನು ಸಗರ ನಾಡಿನ ಎಲ್ಲಾ ಪ್ರಾಂತ್ಯಗಳನ್ನು ಇವನಿಗೆ ಇನಾಮಾಗಿ ನೀಡಿದನೆಂದು ಕೈಫಿಯತ್ತು ತಿಳಿಸುತ್ತದೆ.

ಗಡ್ಡಿ ಪಿಡ್ಡನಾಯಕನ ಪ್ರಮುಖ ಸಾಧನೆಯೆಂದರೆ ಮೊಗಲರೊಡನೆ ಸಂಬಂಧ. ಮೊಗಲರಿಗೂ ಮತ್ತು ಬಿಜಾಪುರ ಸುಲ್ತಾನರಿಗೂ ಯುದ್ಧ ನಡೆದ ಕಾಲದಲ್ಲಿ ಔರಂಗ ಜೇಬನು ಗಡ್ಡಿ ಪಿಡ್ಡ ನಾಯಕನ ಆಶ್ವಾಸನೆ ಕೊಡುವುದಕ್ಕಾಗಿ ಮೊಗಲ ಬಾದಶಾಹನ ಹಸ್ತದ ಮುದ್ರೆಯುಳ್ಳ ಪತ್ರವನ್ನು ಕಳುಹಿಸಿದನು ಪಟ್ಟದಲ್ಲಿ ಒದಿಸಿದಂತೆ "ನೀನು ಮುಸಲ್ಮಾನನಾಗಿದ್ದರೆ ನಮ್ಮ ಧರ್ಮ ಬಂಧು ಆಗಿರುತ್ತಿದ್ದಿ. ಸುರಕ್ಷತವಾಗಿರುತ್ತಿದ್ದ, ಸಂಕಟದಿಂದ ಮತ್ತು ಅನೇಕ ಶತ್ರುಗಳಿಂದ

ಸಂರಕ್ಷಿಸಲ್ಪಡುತ್ತಿದ್ದಿ. ಆದರೆ ನೀನು ಮುಸಲ್ಮಾನನಾಗಿಲ್ಲವೆಂಬುವುದು ಖೇದ ಸಂಗತಿಯಾಗಿದೆ"[2]. ಈ ಮಾತನ್ನು ಔರಂಗಜೇಬನು ಸುರುಪುರ ಬೇಡ ಅರಸರನ್ನು ಕುರಿತು ಹೇಳಿದ್ದಾನೆ(ಭಾವಚಿತ್ರ ೩.೫.ನೋಡಿ).

## ಗಡ್ಡಿ ಪಿಡ್ಡನಾಯಕನು ಮರಾಠರಿಗೆ ಸಹಾಯ ಮಾಡಿರುವುದು

೧೬೯೮ರಲ್ಲಿ ಔರಂಗಜೇಬನ ನಿಯಂತ್ರಣದಲ್ಲಿದ್ದ ರಾಜರಾಮನು ತಪ್ಪಿಸಿಕೊಂಡು ಹೋಗಿರುವುದರಿಂದ ಸಿಟ್ಟಿಗೆದ್ದ ಔರಂಗ ಜೇಬನು ತನ್ನ ಮೊಮ್ಮಗನಾದ ಬಿದರಬಖ್ತನನ್ನು ಪನಳಗಢಕ್ಕೆ ಕಳುಹಿಸಿದನು ಮತ್ತು ಫಿರೋಜ ಜಂಗನನ್ನು ಸಗರನಾಡಿನ ಬೇಡರನ್ನು ತಡೆಯುವದಕ್ಕೆ ಕಳುಹಿಸಿದನು. ಇಂತಹ ಸಂಕಟ ಸಮಯದಲ್ಲಿ ಮರಾಠರಿಗೆ ತಮ್ಮ ಕುಟುಂಬಗಳನ್ನು ರಕ್ಷಣೆ ಮಾಡುವುದು ಬಲು ಕಠಿಣವಾಗಿತ್ತು. ರಾಜಾರಾಮನ ಕಾಲದಲ್ಲಿ ರಾಮಚಂದ್ರ ಸಂತ ಅಮಾತ್ಯನ್ನು ಚಾತುರ್ಯದಿಂದ ಮರಾಠ ಸರದಾರರ ಕುಟುಂಬಗಳನ್ನು ರಕ್ಷಣೆ ಜವಾಬ್ದಾರಿ ಸಗರನಾಡಿನ ಪಿಡ್ಡನಾಯಕನಿಗೆ ಒಪ್ಪಿಸಿದರು. ಮರಾಠ ಸರದಾರರು ಕುಟುಂಬಗಳನ್ನು ಪಿಡ್ಡನಾಯಕನು ಸಂರಕ್ಷಿಸುವ ಭಾರವನ್ನು ವಹಿಸಿಕೊಂಡಿದ್ದು ಸಾಮಾನ್ಯ ಮಾತಲ್ಲ. ಆತನ ಸಾಮರ್ಥ್ಯವು ಮತ್ತು ಆತ್ಮವಿಶ್ವಾಸವು ಎಷ್ಟಿತ್ತೆಂಬುವದು ಅರ್ಥವಾಗುತ್ತದೆ.

## ಸುರುಪುರ ಅರಸರಿಗೆ ಮತ್ತು ಕನಕಗಿರಿ ಅರಸರಿಗೆ ಯುದ್ಧ

೧೭೨೭ರಲ್ಲಿ ಆನೆಗುಂದಿಯ ಅರಸನು ಮುದುಗಲ್ಲಿನ ಲೊದ್ದಪ್ಪರೆಡ್ಡಿಯನ್ನು ಸೋಲಿಸಿ ಸೆರೆಹಿಡಿದಿದ್ದನು. ಲೊದ್ದಪ್ಪರೆಡ್ಡಿ ನಿಜಾಮನ ಆಡಳಿತಕ್ಕೊಳಪಟ್ಟಿದ್ದನು. ಆಗ ಆನೆಗುಂದಿಯ ಅರಸನನ್ನು ದಂಡಿಸುವುದ್ಕಾಗಿ ಪಾಮನಾಯಕನಿಗೆ ಬರೆದುಕೊಂಡನು. ಪಾಮನಾಯಕನು ತನ್ನ ಸೈನ್ಯದೊಡನೆ ೨೧ ದಿನಗಳವರೆಗೆ ಕಾಳಗ ಮಾಡಿ ಮುದಗಲ್ಲು ಕಿಲ್ಲೆಯನ್ನು ಗೆದ್ದು, ತಿರುಮಲರಾಯನನ್ನು ಸೆರೆಹಿಡಿದು ಹೈದರಾಬಾದಿಗೆ ಕಳಿಸಿದನು. ನಿಜಾಮನು ಪಾಮನಾಯಕನನ್ನು ಗೌರವಿಸಿದನು. ಆನೆಗುಂದಿಯ ಅರಸನ ವಶದಲ್ಲಿದ್ದ ಗಂಗಾವತಿ ಮತ್ತು ಯಲಬುರ್ಗಾ ಪ್ರದೇಶಗಳನ್ನು ಬಿಡುಗಡೆಮಾಡಿ ಪಾಮನಾಯಕನಿಗೆ ವಹಿಸಿದನು.

ಕನಕಗಿರಿಯ ಅರಸನಾಗಿದ್ದ ರಂಗಪ್ಪನಾಯಕನ ಮಗನಾದ ಹಿರೇನಾಯಕನು ಬಹಳ ಕ್ರೂರಿಯಾಗಿದ್ದು ಕುಷ್ಟಗಿ, ಸಿಂಧನೂರು ಗಂಗಾವತಿ, ಮತ್ತು ಹರಿಹರ ಹಾಗೂ ದಾವಣಗೇರಿ

ಪ್ರಾಂತ್ಯದ ಒಡೆತನ ಹೊಂದಿದ್ದನು. ಇವನ ಬಲತ್ಕಾರದಿಂದ ರೈತರು ಬೇಸತ್ತಿದ್ದರು. ನಿಜಾಮನ ಮುಖ್ಯಮಂತ್ರಿಯು ಕನಕಗಿರಿಯ ಅರಸನನ್ನು ಹಿಡಿದು ತರುವಂತೆ ಪಾಮನಾಯಕನಿಗೆ ಕೇಳಿಕೊಂಡನು. ಕೂಡಲೇ ಪಾಮನಾಯಕನು ತನ್ನ ಫೌಜಿನೊಡನೆ ಕನಕಗಿರಿಯ ಮೇಲೆ ದಾಳಿಗೈದನು. ೩ ತಿಂಗಳವರೆಗೆ ಕಾಳಗ ನಡೆಸಿದನು. ಕೊನೆಗೆ ಕನಕಗಿರಿಯ ಅರಸನು ತಪ್ಪಿಸಿಕೊಂಡನು, ಕೂಡಲೆ ಕೊಟಗಾರರು ರಾತ್ರಿಯಲ್ಲಿ ಮಲಗಿದ್ದಾಗ ಹಿಡಿದು ತಂದರು.ಪಾಮನಾಯಕನು ಕನಕಗಿರಿಯನ್ನು ಲೂಟಿಗೈದನು.

ಈ ಎರಡು ಯುದ್ಧದಲ್ಲಿ ಜಯಿಸಿದ ಪಾಮನಾಯಕನ ಮತ್ತು ಬೇಡ ಸೈನಿಕರ ಧೈರ್ಯ ಸಹಾಸಗಳನ್ನು ಮೆಚ್ಚಿ ಹೈದರಾಬಾದ ನಿಜಾಮನು ಗೌರವಿಸಿದನು. ಪಾಮನಾಯಕನು ಹೈದ್ರಾಬಾದಿಗೆ ಬಂದರೆ ಹೋಗಿ ಬರುವ ಖರ್ಚನ್ನು ಕೊಡಬೇಕೆಂದು ನಿಜಾಮ ಸರಕಾರದಿಂದ ನಿರ್ಣಯವಾಯಿತು. ಈ ರೀತಿ ಹೈದಾರಾಬಾದ ನಿಜಾಮ ಮತ್ತು ಸುರುಪುರ ಅರಸರಿಗೆ ಉತ್ತಮ ಸಂಬಂಧವಿತ್ತು.

**ಮೊಂಡಗೈ ವೆಂಕಟಪ್ಪನಾಯಕ(೧೭೨೭ ರಿಂದ ೧೭೫೨)ಮತ್ತು ಪುಲಚೇರಿ ಯುದ್ಧ**

ಮುಮ್ಮಡಿ ಪಿಡ್ಡಿ ನಾಯಕನಿಗೆ ಮಕ್ಕಳಿರಲಿಲ್ಲ ಆದ್ದರಿಂದ ಅವನ ತಮ್ಮ ಮೊಂಡಗೈ ವೆಂಕಟಪ್ಪ ನಾಯಕನು ಸಂಸ್ಥಾನದ ಗಾದೆಯ ಮೇಲೆ ಕುಳಿತನು. ನಾಸಿರಜಂಗನು, ಮುಜಾಫರಜಂಗ, ಚಂದಾಸಾಹೇಬ ಮತ್ತು ಫ್ರೆಂಚರ ವಿರುದ್ಧ ಕಾದುವದಕ್ಕಾಗಿ ಸುರುಪುರದ ಸಂಸ್ಥಾನದ ಅಧಿಪತಿಯಾದ ಮೊಂಡಗೈ ವೆಂಕಟಪ್ಪ ನಾಯಕನ ಸಹಾಯಕ್ಕಾಗಿ ಕರೆಕಳುಹಿಸಿದನು. ಇದಕ್ಕೆ ಒಪ್ಪಿಕೊಂಡ ವೆಂಕಟಪ್ಪ ನಾಯಕ ಎರಡು ಮಾತಿನ ಕರಾರು ಮಾಡಿಕೊಂಡನು(ಭಾವಚಿತ್ರ ೩.೬.ನೋಡಿ).

೧. ಸುರುಪುರ ಬಿಟ್ಟಂದಿನಿಂದ ತಿರುಗಿ ಸುರುಪುರಕ್ಕೆ ಬರುವವರೆಗೆ ವೆಂಕಟಪ್ಪ ನಾಯಕನ ಮತ್ತು ಅವನ ಸೈನಿಕರ ಖರ್ಚುಗಳನ್ನು ನಾಸಿರಜಂಗನು ವಹಿಸತಕ್ಕದ್ದು.

೨. ಸುರುಪುರದವರು ಏಕಾಂಗಿಯಾಗಿ ಯುದ್ಧ ಮಾಡುವವರು, ಇತರರು ಯುದ್ಧದಲ್ಲಿ ಸೇರಬಾರದು.

ಈ ಷರತ್ತಿಗೆ ನಾಸಿರಜಂಗನು ಒಪ್ಪಿಕೊಂಡ ನಂತರ ೧೨ ಸಾವಿರ ಬೇಡ ಸೈನ್ಯವನ್ನು ತೆಗೆದುಕೊಂಡು ಪುಲಚೇರಿಯನ್ನು ದಾವಿಸಿದನು. ೯ ದಿನಗಳವರೆಗೆ ನಾಸಿರಜಂಗನ ಸೈನಿಕರು ಹೋರಾಟಮಾಡಿದರು. ಪುಲಚೇರಿಯ ಕಿಲ್ಲಿಯನ್ನು ವಶಪಡಿಸಿಕೊಳ್ಳಲಾಗಲಿಲ್ಲ. ಆದರೆ ಮರುದಿನ ನಾಸಿರಜಂಗನು ವೆಂಕಟಪ್ಪನಾಯಕನಿಗೆ ನಾಳಿನಿಂದ ನೀವು ಯುದ್ಧ ಮಾಡಬೇಕೆಂದು ಕೇಳಿಕೊಂಡನು.

"ವೆಂಕಟಪ್ಪ ನಾಯಕ ಸಂತೋಷದಿಂದ ಯುದ್ಧ ಮಾಡಲು ಒಪ್ಪಿಕೊಂಡು ಹೇಳಿದನು". ನಾವು ನಮ್ಮ ಯುದ್ಧವನ್ನು ಒಂದೇ ದಿವಸ ಮುಗಿಸುವೆವು, ಕಿಲ್ಲಿಯನ್ನು ಪಡೆಯುವೆವು, ಇಲ್ಲದಿದ್ದರೆ ನಾವು ಸಾಯುವೆವು ಎಂದು ನುಡಿದನು"[3].

ವೆಂಕಟಪ್ಪ ನಾಯಕನ ಆದೇಶವನ್ನು ಪಾಲಿಸುತ್ತ ಬೇಡರ ಸೈನ್ಯವು "ವೆಂಕಟರಮಣ ಗೋವಿಂದಾ ಗೋವಿಂದ"[4] ಎಂಬ ಜಯ ಘೋಷ ಪ್ರಾಂಭವಾಯಿತು. ಬೇಡರು ತೋಪುಗಳನ್ನು ಲೆಕ್ಕಿಸದೆ ಮುನ್ನುಗ್ಗಿ ಶತ್ರುಗಳನ್ನು ಜೋಳದ ದಂಟ್ಟುಗಳನ್ನು ಕೊಯ್ದು ಕತ್ತರಿಸಿಹಾಕಿದಂತೆ ಕತ್ತರಿಸಿ ಹಾಕಿದರು. ವೆಂಕಟಪ್ಪ ನಾಯಕನು ತನ್ನ ಹನುಮ ಧ್ವಜವನ್ನು ಕಿಲ್ಲೆಯ ಮೇಲೆ ಎರಿಸಿದನು. ಇದನ್ನು ಕಂಡು ನಾಸಿರಜಂಗನು ವೆಂಕಟಪ್ಪ ನಾಯಕನನ್ನು ಅತ್ಯಂತ ಸಂತೋಷದಿಂದ ಅಪ್ಪಿಕೊಂಡು ಗೌರವಿಸಿದನು.

## ಹರಪನಹಳ್ಳಿ ಮತ್ತು ಸುರುಪುರದ ಅರಸರ ಮಧ್ಯೆ ವಿದ್ವಜನರ ಸ್ಪರ್ಧೆ

ಈ ವೆಂಕಟಪ್ಪನಾಯಕನ ಕಾಲದಲ್ಲಿ ಹರಪನಹಳ್ಳಿ ದೊರೆಯು ಸುರುಪುರದ ಸಂಸ್ಥಾನದ ವಿದ್ವಜನರ ಪರೀಕ್ಷೆ ಮಾಡಬೇಕೆಂದು, ತನ್ನ ಆಸ್ಥಾನದ ಪಂಡಿತರನ್ನು ಮತ್ತು ತಂಜಾವೂರು ಮುಂತಾದ ಪಂಡಿತರನ್ನು ಕರೆಯಿಸಿಕೊಂಡು ಸುರುಪುರಕ್ಕೆ ಬರುವೆನೆಂದು ಹೇಳಿ ಕಳುಹಿಸಿದನು. ವೆಂಕಟಪ್ಪನಾಯಕನು ತನ್ನಲ್ಲಿಯ ಪಂಡಿತರಿಗೆ ವಿಷಯ ತಿಳಿಸಿ ಹರಪನಹಳ್ಳಿಯ ಅರಸನಿಗೆ ಬರಲು ತಿಳಿಸಿದನು. ಹರಪನ ಹಳ್ಳಿಯ ರಾಜನ ಸಂಗಡ ಗಾಯಕರು, ವೀಣೆ, ಪೀಟಿಲು, ಸಾರಂಗ ಬಾರಿಸುವವರು ಮತ್ತು ಕವಿಗಳು, ಚಿತ್ರಗಾರರು, ಶಿಲ್ಪಿಗಳು, ವೈದ್ಯರು, ಜ್ಯೋತಿಷ್ಯರು ಮತ್ತು ಮಲ್ಲಯುದ್ಧದಲ್ಲಿ ನಿಪುಣರಾದ ರಾಜ ಜೆಟ್ಟಿಗಳು, ಪಟ್ಟೆ, ಕತ್ತಿ ಭಲ್ಲೆಗಳನ್ನು ನಡೆಯಿಸುವ ಯುದ್ಧಕಲೆಗಳ ನಿಪುಣರು,ನಟರು, ಹಾಸ್ಯಗಾರರು ಮತ್ತು ಬೇಟೆಯಾಡುವವರು ಈ ರೀತಿ

ಎಲ್ಲರೂ ಸ್ಪರ್ಧೆಯಲ್ಲಿ ಭಾಗವಹಿಸಿದ್ದರು. ಸುರುಪುದಲ್ಲಿ ಈ ತರಹದ ವಿದ್ವಜನರು ಮೊದಲಿನಿಂದಲೂ ಆಶ್ರಯ ಪಡೆದಿದ್ದರು.

ಸಿದ್ದನ ತೋಟದಲ್ಲಿ ಮೂರು ತಿಂಗಳುಗಳವರೆಗೆ ಈ ಸ್ಪರ್ಧೆ ನಡೆಯಿತು. ಈ ಸ್ಪರ್ಧೆಯಲ್ಲಿ ಸುರುಪುರವು ಎಲ್ಲಾ ವಿಷಯದಲ್ಲಿ ಮೀಗೆಲೆನಿಸಿ ತನ್ನ ಮರ್ಯಾದೆಯನ್ನು ಕಾಯಿದುಕೊಂಡಿತು. ಹರಪನಹಳ್ಳಿಯ ಪಂಡಿತರು ಸುರುಪುರದವರನ್ನು ಪರಾಭವಗೊಳಿಸಲು ಹವಣಿಸಿದರು. ಆದರೆ ಅವರ ವರ್ಚಸ್ಸು ಸುರುಪುರದರ ಮುಂದೆ ನಡೆಯಲಿಲ್ಲ, ಸೋತು ವಾಪಸ್ಸಾದರು.

ಸುರಪುರದ ಅರಸರು ಉತ್ತಮ ಆಡಳಿತಗಾರರು ಮತ್ತು ಸೈನಿಕ ಭದ್ರತೆಗೆ ಹೆಚ್ಚು ಮಹತ್ವ ಕೊಡುವುದರ ಜೊತೆಗೆ ಕಲೆ, ಸಾಹಿತ್ಯ ಸಾಂಸ್ಕೃತಿಕ ಬೆಳವಣಿಗೆಗೆ ಹೆಚ್ಚು ಮಹತ್ವಕೊಡುತ್ತಿದರು ಎಂಬುವುದು ನಮಗೆ ತಿಳಿದು ಬರುತ್ತದೆ.

**ರಾಜಾ ನಾಲ್ವಡಿ ವೆಂಕಟಪ್ಪನಾಯಕ**

ಬ್ರಿಟೀಷರ ವಿರುದ್ದ ಸುರುಪುರ ಸಂಸ್ಥಾನದಲ್ಲಿ ಬಂಡಾಯವಾಗದಂತೆ ಬ್ರಿಟಿಷರು ರಾಜಕೀಯ ಏಜಂಟರನ್ನು ನೇಮಕ ಮಾಡಿದ್ದ ಮೊದಲಿಗನೆಂದರೆ ಗ್ರಿಸ್ಲ ಕ್ಯಾಪ್ಟನ್, ಇವನು ಸುರುಪುರ ಸಂಸ್ಥಾನದಲ್ಲಿ ಇರುವಾಗಲೇ ಕೃಷ್ಣಪ್ಪ ನಾಯಕನು ತೀರಿಕೊಂಡನು. ಇವನಿಗೆ ವೆಂಕಟಪ್ಪ ನಾಯಕನೆಂಬ ಏಳು ವರ್ಷದ ಮಗನಿದ್ದನು. ಕೃಷ್ಣಪ್ಪ ನಾಯಕನ ಹೆಂಡತಿ ರಾಣಿ ಈಶ್ವರಮ್ಮ ತನ್ನ ಮಗನ ಹೆಸರಿನಿಂದ ರಾಜ್ಯಭಾರ ಮಾಡುತ್ತಿದ್ದಳು. ರಾಣಿ ಈಶ್ವರಮ್ಮನ ಆಡಳಿತದಿಂದ ಬೇಸತ್ತ ಕೃಷ್ಣಪ್ಪ ನಾಯಕನ ಸಂಬಂಧಿಕರು ಕೂಡಿ ಅವನ ತಮ್ಮ ಗಡ್ಡಿ ಪಿಡ್ಡ ನಾಯಕನನ್ನು ವೆಂಕಟಪ್ಪನಾಯಕನ ಪಾಲಕ ನೆಂದು ಮತ್ತು ರಾಜ್ಯಭಾರ ಮಾಡ ಬೇಕೆಂದು ಠರಾವು ಮಾಡಿದರು. ಈ ಠರಾವಿಗೆ ಬ್ರಿಟೀಷ್ ಸರಕಾರ ಒಪ್ಪಿಗೆ ಸೂಚಿಸಿತು. ಇದೇ ಸಮಯದಲ್ಲಿ ದೇಶದ ಎಲ್ಲಾ ಕಡೆ ಬ್ರಿಟೀಷರ ವಿರುದ್ಧ ಬಂಡಾಯ ಪ್ರಾರಂಭವಾಗಿತ್ತು ಮತ್ತು ಸುರುಪುರದ ರಾಣಿ ಈಶ್ವರಮ್ಮನ ಸಾಮರ್ಥ್ಯ ಹೆಚ್ಚಾಯಿತು. ಇದನ್ನು ತಿಳಿದ ಕ್ಯಾಪ್ಟನ್ ಗ್ರಿಸ್ಲೆ ಹೈದ್ರಾಬಾದಿಗೆ ವಾಪಸ್ಸು ಹೋದನು. ಲಾರ್ಡ ಡಾಲ್ ಹೌಸಿಯು ಸುರುಪುರದಲ್ಲಿ ಪೊಲಿಟಿಕಲ್ ಏಜಂಟನನ್ನಾಗಿ ಮೆಡೋಸ್ ಟೇಲರನನ್ನು ನೇಮಕಮಾಡಿದನು.(ಇವರ ಬಗ್ಗೆ ಹೆಚ್ಚಿನ ವಿವರಗಳನ್ನು ಮುಂದಿನ ಭಾಗದಲ್ಲಿ ಕೊಡಲಾಗಿದೆ.)

## ೩.೩. ಸುರಪುರು ಅರಸರ ಸಾಂಸ್ಕೃತಿಕ ಕೊಡುಗೆಗಳು

### ನ್ಯಾಯ ಪದ್ದತಿ

ಸುರುಪುರ ದೊರೆಗಳ ಕಾಲದಲ್ಲಿ ನ್ಯಾಯಾಲಯಗಳು ಇರಲಿಲ್ಲ. ಕುಲಾಚಾರಿಕೆಯಿಂದಲೆ ಎಲ್ಲಾ ನ್ಯಾಯಗಳ ನಿರ್ಣಯಗಳಾಗುತ್ತಿದ್ದವು. ಈ ಕುಲಾಚಾರಿಕೆಯ ಎಲ್ಲಾ ಮೇಲಾಧಿಕಾರವು ರಾಜನದು. ರಾಜನು ಪ್ರತಿನಿಧಿಯನ್ನು ನೇಮಿಸುತ್ತಿದ್ದನು. ಗುರಿಕಾರನೆಂಬ ಸರದಾರನಿಗೆ ಈ ಅಧಿಕಾರವನ್ನು ನೀಡಲಾಗಿತ್ತು. ಈ ಗುರಿಕಾರನು ಅರಸನ ಕೈಕೆಳಗಿನ ಬೇಡ ಸರದಾರನು ಮತ್ತು ಸೈನ್ಯದ ಮುಖ್ಯಾಧಿಕಾರಿಯು ಆಗಿರುತ್ತಿದ್ದನು. ಗುರಿಕಾರನು ಆಯಾ ಜಾತಿಯ ಪ್ರಮುಖ ಮನೆತನದವರಿಂದ ಜಗಳಗಳನ್ನು ತೀರ್ಪು ಮಾಡುತ್ತಿದ್ದರು. ಈ ಪ್ರಮುಖ ಮನೆತನದವರಿಗೆ ಕಟ್ಟೆ ಮನೆಯವರೆಂದು ಕರೆಯಲಾಗುತ್ತಿತ್ತು. ಎಲ್ಲಾ ಕುಲದ ಜಗಳಗಳು ಒಂದೇ ರೀತಿಯಾಗಿ ಇರುತ್ತದ್ದವು. ಇವು ಅಲ್ಲದೇ ಸಣ್ಣ ಪುಟ್ಟ ಹೊಡೆದಾಟ, ಹೊಲ ಮನೆಯ ಜಗಳಗಳನ್ನು ಊರ ಪಂಚರು ನಿರ್ಣಯಿಸುತ್ತಿದ್ದರು. ಯಾವದೇ ಸಮಸ್ಯೆ ಪರಿಹಾರವಾಗದಿದ್ದರೆ ಅರಸನು ಸಾಕ್ಷಾಧಾರಗಳ ಮೇಲೆ ಯಾರಿಗೂ ಅನ್ಯಾಯವಾಗದಂತೆ ಅಂತಿಮ ತೀರ್ಮಾನವನ್ನು ನೀಡುತ್ತಿದ್ದನು(ಭಾವಚಿತ್ರ ೩.೭,೮ ನೋಡಿ)

### ಸೈನಿಕ ವ್ಯವಸ್ಥೆ

ಸುರುಪುರ ಸೈನ್ಯವು ಬಹಳ ಅಚ್ಚುಕಟ್ಟಾಗಿ ಮತ್ತು ಬಲಿಷ್ಠವಾಗಿತ್ತು. ಈ ಸೈನ್ಯದಲ್ಲಿ ಸುರುಪುರ ಮತ್ತು ಸಗರ ನಾಡಿನ ಬೇಡರಿಗೆ ಖಡ್ಡಾಯವಿತ್ತು. ಈ ಪದ್ದತಿಯು ಹಿಂದೂಸ್ತಾನ ದಲ್ಲಿ ಬೇರೆ ಎಲ್ಲಿಯೂ ಇರಲಿಲ್ಲ. ಈ ರೀತಿಯ ಯೋಜನೆಯು ಕೇವಲ ಬೇಡರಿಗೆ ಮಾತ್ರ ಸಂಬಂಧಿಸಿತ್ತು. ಸುರುಪುರ ಅರಸರ ಸೈನ್ಯದಲ್ಲಿ 50,000 ಸೈನಿಕರಿದ್ದು, ಅದರಲ್ಲಿ ಬೇಡರು, ಮರಾಠರು, ಮುಸಲ್ಮಾನರು, ಕೋಟೆಗಾರರು ಇದ್ದರು. ಗುರಿಕಾರನು ಸೇನಾಧಿಪತಿಯಾಗಿದ್ದು, ಸರ್ ಹವಾಲ್ದಾರನು ಕಾಲಾಳುಗಳ ಮೇಲಾಧಿಕಾರಿಯಾಗಿದ್ದನು. ಈ ಎಲ್ಲಾ ಸೈನಿಕರು ಅರಸನಿಗೆ ದ್ರೋಹವನ್ನು ಎಂದು ಮಾಡುತ್ತಿರಲಿಲ್ಲ. ಯುದ್ಧಭೂಮಿಯಲ್ಲಿ ಜೀವನದ ಮೇಲೆ ಆಸೆ ಇಲ್ಲದೆ ಹೋರಾಟ ಮಾಡುತ್ತಿದ್ದರು. ಇಂತಹ ಸುಸಜ್ಜಿತವಾದ ಸೈನ್ಯವನ್ನು ಸುರುಪುರದ ಅರಸರು ಹೊಂದಿದ್ದರು.

**ಧಾರ್ಮಿಕ ಪದ್ಧತಿ**

ಸುರುಪುರ ಅರಸರು ವೈಷ್ಣವ ಮತಾವಲಂಬಿಗಳಾಗಿದ್ದು ಎಲ್ಲಾ ಧರ್ಮಗಳನ್ನು ಸಮಾನ ದೃಷ್ಠಿಯಿಂದ ಕಾಣುತ್ತಿದ್ದರು. ದೊರೆಗಳು ಹಿಂದುಗಳಾಗಿದ್ದು, ಸರ್ವಧರ್ಮ ಸಮನ್ವಯ ವನ್ನು ಸಾಧಿಸಿ, ಸರ್ವ ಮತೀಯರಿಗೂ ಸಮಾನಾವಕಾಶಗಳನ್ನಿತ್ತು ಸಮಾನತೆಯ ತತ್ವವನ್ನು ಪಾಲಿಸಿಕೊಂಡು ಬಂದಿದ್ದಾರೆ. ಅರಸರಿಂದ ಇನಾಮು ಪಡೆದ ಎಷ್ಟು ಮಂದಿರಗಳಿವೆಯೋ ಅಷ್ಟೇ ಪ್ರಮಾಣದ ಮಸೀದಿಗಳು ಸಹ ಸುರುಪುರ ಸಂಸ್ಥಾನಗಳಲ್ಲಿ ಕಾಣಬಹುದು. ಮತೀಯ ತಾರತಮ್ಯವಿಲ್ಲದಂತೆ ರಾಜರುಗಳು ಎಲ್ಲಾರಿಗೂ ರಾಜ ಮರ್ಯಾದೆಗಳನ್ನು ಸಮರ್ಪಿಸುತ್ತಿರು ವುದು, ಅರಸರ ಔದಾರ್ಯ ವನ್ನು ಎತ್ತಿ ತೋರಿಸುತ್ತದೆ. ಸುರುಪುರ ಅರಸರ ಕುಲದೇವರುಗಳಾದ ತಿರುಪತಿ ವೆಂಕಟರಮಣ ಮತ್ತು ಗೋಪಾಲಸ್ವಾಮಿಯ ದೇವಾಲಯಗಳಲ್ಲಿ ನಿತ್ಯ ಪೂಜೆ, ಉತ್ಸವ ಮುಂತಾದವುಗಳಿಗೆ ಜಾಗೀರು ಇನಾಮು ಭೂಮಿಗಳನ್ನು ಕೊಟ್ಟಿದ್ದಾರೆ.

**೪. ಸುರುಪುರ ಅರಸರ ಆಡಳಿತ ವಿಧಾನ**

ಸುರುಪುರ ಅರಸರು ಕೇವಲ ತಮ್ಮ ಸಂಸ್ಥಾನವನ್ನು ಮಾತ್ರ ವಿಸ್ತರಣೆ ಮಾಡದೇ ಇನ್ನಿತರ ಹಲಾವರು ಸಾರ್ವಜನಿಕ ಕಾರ್ಯಗಳನ್ನು ಮಾಡಿದ್ದಾರೆ. ಆಡಳಿತದ ರಚನೆ ಮತ್ತು ಅಭಿವೃದ್ಧಿಗೆ ತಮ್ಮದೇ ಆದ ವಿಶೇಷ ಯೋಜನೆಯನ್ನು ರೂಪಿಸಿದ್ದರು. ಸಂಸ್ಥಾನದಲ್ಲಿ ಪ್ರಜೆಗಳು ಸುಖಕರವಾಗಿರುವಂತೆ ಮತ್ತು ಉತ್ತಮ ಬೆಳೆಯನ್ನು ಬೆಳೆಯಲು ಅನುಕೂಲವಾಗುವಂತೆ ಹಲವಾರು ಕೆರೆಗಳನ್ನು ನಿರ್ಮಿಸಿದ್ದಾರೆ, ಜನರಿಗೆ ಕುಡಿಯಲು ನೀರಿನ ಸೌಕರ್ಯಗಳನ್ನು, ರಸ್ತೆಗಳ ಎರಡು ಬದಿಗಳಲ್ಲಿ ಅಲ್ಲಲ್ಲಿ ಬಾವಿಗಳನ್ನು ತೊಡಿಸಿದ್ದಾರೆ. ಹಲವಾರು ದೇವಾಲಯ ಗಳು, ಹೂಡೆಗಳನ್ನು ಮತ್ತು ಕಿಲ್ಲಿಗಳನ್ನು ನಿರ್ಮಿಸಲು ಸುರುಪುರದ ಅರಸರು ವಿಶೇಷ ಆಸಕ್ತಿಯನ್ನು ತೋರಿಸುತ್ತಿದ್ದಾರೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಸುರುಪುರ ಅರಸರ ಸಂಸ್ಥಾನದಲ್ಲಿ ಜನರು ನೆಮ್ಮದಿಯಿಂದ ಜೀವಿಸುತ್ತಿದ್ದರೆಂದು ಹೇಳಬಹುದು.

**ಸುರುಪುರ ಅರಸರು ಸಾಹಿತ್ಯಕ್ಕೆ ನೀಡಿದ ಪ್ರೋತ್ಸಾಹ**

ಸುರುಪುರ ಅರಸರು ಹಲವಾರು ಕವಿಗಳಿಗೆ, ಕಲಾಕಾರರಿಗೆ ಮತ್ತು ಪಂಡಿತರಿಗೆ ಆಶ್ರಯ ಕೊಟ್ಟಿದ್ದರು. 1752ರಿಂದ 1773ರವರೆಗೆ ಎಂದರೆ 21 ವರ್ಷಗಳ ರಾಜ್ಯವಾಳಿದ ಮುಮ್ಮಡಿ

ಪಾಮನಾಯಕನ ಕಾಲವನ್ನು ಸ್ವರ್ಣಯುಗವೆಂದು ಹೆಸರಿಸಲಾಗಿದೆ. ಈ ಕಾಲದಲ್ಲಿ ಸಗರ ನಾಡು ಸಾರಸ್ವತ ಹಿರಿಮೆಯನ್ನು ಮೆರೆದು "ಭೂಸುರುಪುರ ಗೀರ್ವಾಣ ಪುರ" ಎಂದು ಪ್ರಸಿದ್ಧ ಪಡೆಯಿತು. ಈ ಕಾಲದಲ್ಲಿಪ್ರಸಿದ್ಧ ಪಂಡಿತರು ಮತ್ತು ಸಾಹಿತಿಗಳಾದ ರಾಘವ ಪಾಮನಾಯಕನು ಅಲಂಕಾರ ಶಾಸ್ತ್ರ ಪರಿಣಿತನಾಗಿದ್ದನು. ಈತನು ತೆಲುಗು ಭಾಷೆಯಲ್ಲಿ ಭಾರ್ಗವ ಪುರಾಣವನ್ನು ಬರೆದಿದ್ದಾನೆ. ಈ ಗ್ರಂಥವು ಚಂಪು ಕಾವ್ಯವಾಗಿದ್ದು, ಕೃಷ್ಣ ದೇವರಾಯನು ಬರೆದ ಅಮುಕ್ತ ಮೂಲ್ಯದ ಗ್ರಂಥವನ್ನು ಹೋಲುತ್ತದೆ.

ಅಣ್ಣಯ್ಯಚಾರ್ಯರು ಮತ್ತು ಶ್ರೀನಿವಾಸಾಚಾರ್ಯರು ಮಹಾ ಪಂಡಿತರು ಮತ್ತು ಕವಿಗಳಾಗಿದ್ದು ಇಂತಹ ಹಲವಾರು ಕವಿಗಳಿಗೆ ಪಂಡಿತರಿಗೆ, ಸುರುಪುರು ಅರಸರು ಆಶ್ರಯ ಕೊಟಿದ್ದರು.

ಸುರುಪುರು ಅರಸರ ಕಾಲದ ಪ್ರಸಿದ್ಧ ಪಂಡಿತನೆಂದರೆ ಕಿರೀಟ ವೆಂಕಟಾಚಾರ್ಯನಾಗಿದ್ದನು, ಇವನ ಗ್ರಂಥಗಳು

1. ಗಜ ಸೂತ್ರಾರ್ಥ ವಾದಮ್ ವ್ಯಾಕರಣ ಗ್ರಂಥ
2. ಶೃಂಗಾರ ತರಂಗಿಣಿ ನಾಟಕ
3. ಭಾವಶತಕಂ ಇದು ಅಲಂಕಾರ ಗ್ರಂಥ
4. ಅಜಲಾತ್ಮಕ ಪರಿಣಯ

**ಸುರುಪುರ ಬೇಡರ ಸ್ವಭಾವ ಮತ್ತು ಅವರ ಸಂಸ್ಕೃತಿ**

ಸುರುಪುರ ಬೇಡರ ಸಂಸ್ಕೃತಿ ಮತ್ತು ಅವರ ಸ್ವಭಾವವನ್ನು ಕುರಿತು ಮೆಡೋಸ್ ಟೇಲರ್ ಈ ರೀತಿ ವರ್ಣಿಸಿದ್ದಾನೆ. "ಸುರುಪುರದ ಬೇಡರು ಫೌಜದಾರಿ ಅಪರಾಧಗಳಿಂದ ಆಲಿಪ್ತರಾಗಿದ್ದು, ಇವರು ಅಪ್ರಮಾಣಿಕರಲ್ಲ. ಇವರಲ್ಲಿ ಕಳ್ಳತನ ಮೊದಲಾದ ಹೀನ ಕೆಲಸಗಳಿರಲ್ಲಿಲ್ಲ. ಇಂತಹ ಕೆಲಸಗಳನ್ನು ಮಾಡುವದು ತಮ್ಮ ಮರ್ಯಾದೆಗೆ ಸಲ್ಲದ ಮಾತೆಂದು ನಂಬಿದ್ದರು. ಇವರು ಮಾದಕ ಪದಾರ್ಥಗಳನ್ನು ಸೇವಿಸುವದಿಲ್ಲ ನಾನು ಸುರುಪುರದಲ್ಲಿ ಇದ್ದಾಗ ಎರಡೇ ಎರಡು ಕೊಲೆಗಳಾಗಿದ್ದವು."[5]

ಸುರುಪುರದ ಬೇಡರು ಅಪರಾಧಿಯನ್ನು ತಾತ್ಕಾಲಿಕ ನ್ಯಾಯಾಧೀಶನ ಸ್ವಾಧಿನ ಮಾಡುತ್ತಿದ್ದರು. ಈ ಜನರು ದಿವಾಣಿಗಳನ್ನು ತಮ್ಮ ರೀತಿ, ರಿವಾಜು, ಕುಲಾಚಾರ ಪದ್ದತಿಗೆ ಅನುಸರಿಸಿ

ತಾವೇ ನಿರ್ಣಯಿಸಿಕೊಳ್ಳುತ್ತಿದ್ದರು. ನ್ಯಾಯ ತೀರ್ಮಾನಿಸುವ ಪಂಚರು ಅನ್ಯಾಯ ಗೈದರೆಂದು ನನ್ನಲ್ಲಿಯಾರು ದೂರು ಸಲ್ಲಿಸಿಲ್ಲವೆಂದು ಹೇಳಿದ್ದಾರೆ. ಪಂಚರು ಬೇವಿನ ಮರದ ಕೆಳಗೆ ಕುಳಿತು ನ್ಯಾಯ ಮಾಡುವರು. ಈ ಪಂಚರ ಮೇಲೆ ಗುರಿಕಾರನೆಂಬ ಅಧಿಕಾರಿಯಿದ್ದು ಅವನು ಎಂದು ಅಧಿಕಾರದ ದುರುಪಯೋಗವನ್ನು ಮಾಡುತ್ತಿರಲ್ಲಿಲ್ಲ.

ಬೇಡರು ಮರ್ಯಾದಸ್ಥರು, ಪ್ರಾಮಾಣಿಕರಾಗಿರುವವರು, ಮಾತು ಕೊಟ್ಟಾಗ ಎಂದು ತಪ್ಪಿದವರಲ್ಲ. ರಾಜನು ಇವರನ್ನು ವಚನ ಬ್ರಷ್ಟರನ್ನಾಗಿ ಮಾಡಲು ಪ್ರಯತ್ನಿಸಿದರು ಇದು ಶಕ್ಯವಿರಲಿಲ್ಲ. ಈ ಬೇಡ ಜನರು ಸಾಮಾನ್ಯವಾಗಿ ಜಟ್ಟಿಗಳಂತೆ ಅಂಗಸಾಧನೆ ಅಂದರೆ ಗರಡಿ ಮುಂತಾದವುಗಳನ್ನು ಮಾಡುತ್ತಿದ್ದರು. ಇವರು ಶಸ್ತ್ರಾಸ್ತ್ರಗಳನ್ನು ಉಪಯೋಗಿಸುವುದರಲ್ಲಿ ನಿಪುಣರು, ಬೇಟೆ ಯಾಡದೆ ವಿನಃ ಮಾಂಸವನ್ನು ತಿನ್ನುತ್ತಿರಲಿಲ್ಲ.

**ಉಪಸಂಹಾರ**

ಸುರುಪುರ ಸಂಸ್ಥಾನ ಭಾರತವನ್ನು ಆಳಿದ ಸಂಸ್ಥಾನಗಳಲ್ಲಿಯೇ ವಿಶೇಷ ಸ್ಥಾನ ಹೊಂದಿದೆ. ಏಕೆಂದರೆ ಯಾವದೇ ರಾಜಕೀಯ ಮತ್ತು ಹಣಕಾಸು ಬೆಂಬಲವಿಲ್ಲದೆ ಒಂದು ಸ್ಥಾನವನ್ನು ಕಟ್ಟಿ ಅದನ್ನು ಆಳುವುದೆಂದರೆ ಅತ್ಯಂತ ಮಹತ್ವದ ಸಾಧನೆಯೇ ಸರಿ. ಇದಕ್ಕೆ ಪೂರಕವಾಗಿ ಬೇಡ ಸಮುದಾಯದ ಸಾಹಸ, ಧೈರ್ಯ ಮತ್ತು ಸ್ವಾಮಿ ನಿಷ್ಟೆ. ಈ ಸಂಸ್ಥಾನದ ಪುರೋಭಿವೃದ್ಧಿಗೆ ಬೇಡರ ಶೂರತನ, ಆತ್ಮಭಲ ಮತ್ತು ತೋಳಬಲಗಳಿಂದಲೇ ಸುರುಪುರ ಸಂಸ್ಥಾನದ ಹೆಗ್ಗಳಿಕೆಗೆ ಕಾರಣವಾಗಿ ಹಲವಾರು ವರ್ಷಗಳವರೆಗೆ ಆಡಳಿತ ನಡೆಸಿದ್ದಾರೆ. ಈ ಅರಸರನ್ನು ಸೋಲರಿಯದ ಶೂರರು, ವಿಜಯ ಹನುಮಧ್ವಜವನ್ನು ಹೊಂದಿದ ಗೋಪಾಲ ವಂಶದ ದೊರೆಗಳು, ಶ್ರೀ ವೇಣುಗೋಪಾಲನ ಕೃಪೆಯಿಂದ ವಿಜಯ ಶಾಲಿಗಳಾಗಿ ಬಾಳಿಬೆಳಗಿದ್ದಾರೆ. 14ನೇ ಶತಮಾನದ ಆರಂಭದಲ್ಲಿ ದಕ್ಷಿಣಭಾರತದಲ್ಲಿ ವಿಜಯನಗರ ಸಾಮ್ರಾಜ್ಯ 17 ಶತಮಾನದಲ್ಲಿ ಮರಾಠರ ರಾಜ್ಯಗಳು ಹಿಂದು ಧರ್ಮದ ರಕ್ಷಣೆಗಾಗಿ ಉದಯಿಸಿದವು ಮತ್ತು ಕಾರ್ಯದ ಸಾಧನೆಗಾಗಿ ಶ್ರಮಿಸಿದವು ಎಂಬುದನ್ನು ಇತಿಹಾಸದ ದಾಖಲೆಗಳು ಸ್ಪಷ್ಟಪಡಿಸುತ್ತವೆ. ಅದೇ ತೆರನಾಗಿ 17ನೇ ಶತಮಾನದಲ್ಲಿ ಬರುವ ಮತ್ತೊಂದು ದಕ್ಷಿಣ ಭಾರತದ ಪಾಳೆಯ ರಾಜ್ಯ ಸುರುಪುರ ಸಂಸ್ಥಾನವೆಂಬುದನ್ನು ನಾವು ಮರೆಯುವಂತಿಲ್ಲ ಏಕೆಂದರೆ ವಿಜಾಪುರದ ಸುಲ್ತಾನರು,

ಮೊಗಲರು, ಗೋವಳಕೊಂಡ, ಬೀದರ, ಗುಲಬರ್ಗಾ ಇತ್ಯಾದಿ ಭಾಗಗಳಲ್ಲಿ ಆಳುತ್ತಿದ್ದ ಸುಲ್ತಾನರು ಮೇಲಿಂದ ಮೇಲೆ ಸುರುಪುರ ಸಂಸ್ಥಾನದ ಮೇಲೆ ದಾಳಿ ಮಾಡಿ ಸೋಲನ್ನು ಅನುಭವಿಸಿದ್ದಾರೆ.

ಮೊಗಲರ ಸಾಮ್ರಾಟ ಔರಂಗಜೇಬನು ಸುರುಪುರದ ನಾಯಕರ ವಿರುದ್ಧ ಹೋರಾಟ ಮಾಡಿ ಗಮನಾರ್ಹ ಗೆಲವು ಸಾಧಿಸಲಿಲ್ಲ. ಆದ್ದರಿಂದ ಔರಂಗಜೇಬನು ಸುರುಪುರ ಸೈನ್ಯವನ್ನು ಕುರಿತು ಈ ರೀತಿ ಹೇಳುತ್ತಾನೆ. "ಬೇಡ ಸೈನ್ಯವನ್ನು ಕೆಣಕಬಾರದು ಕೆಣಕಿ ತಿಣುಕಬಾರದು" ಏನೇ ಆಗಲಿ ಬೇಡ ದೊರೆಗಳು ಇತರ ದೊರೆಗಳ ಶೌರ್ಯಕ್ಕಿಂತ ಕಡಿಮೆ ಇಲ್ಲ ಎಂಬುದನ್ನು ಹೇಳಬಹುದು.

ಸುರಪುರ ಬೇಡ ದೊರೆಗಳ ಆಡಳಿತ ನೀತಿ ಹಾಗೂ ರಾಜಕೀಯ ವ್ಯವಸ್ಥೆ ತುಂಬ ಸರಳ ವಾಗಿದೆ. ಇವರು ತಮ್ಮ ಸಂಸ್ಕೃತಿ ಮತ್ತು ಸಂಪ್ರದಾಯದಂತೆ ಜಾತಿ ಪಂಚಾಯತಿಯನ್ನೆ ಆಡಳಿತದಲ್ಲಿ ಅನುಸರಿಸಿರುವದು ಕಂಡುಬರುತ್ತದೆ. ದೊರೆಯು ಸರಕಾರದ ಮೂರು ಅಂಗಗಳನ್ನು ಎಂದರೆ ಶಾಸನಾಂಗ, ಕಾರ್ಯಾಂಗ, ಮತ್ತು ನ್ಯಾಯಾಂಗವನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತಿದ್ದನು ಆಗಾಗ ಸಂಸ್ಥಾನದ ಹಿರಿಯ ವ್ಯಕ್ತಿಗಳ ಸಲಹೆಗಳನ್ನು ಪಾಲಿಸುತ್ತಿದ್ದನು.

ಈ ಸುರಪುರ ದೊರೆಗಳ ಆಡಳಿತ ವ್ಯವಸ್ಥೆ ಇತರ ವಿಜಯನಗರ ಅರಸರ ಹಾಗೂ ವಿಜಾಪುರ ಸುಲ್ತಾನರ ಆಡಳಿತ ವ್ಯವಸ್ಥೆಯು ಮಹತ್ವದ ಅಂಶಗಳನ್ನು ಅಳವಡಿಸಿಕೊಂಡು ತಮ್ಮದೇ ವಿಶಿಷ್ಟ ರಾಜಕೀಯ ವ್ಯವಸ್ಥೆಯನ್ನು ಅಳವಡಿಸಿಕೊಂಡಿದ್ದಾರೆ.

## ೩.೪. ವ್ಯಕ್ತಿ ಅಧ್ಯಯನ

### ೩.೪.೧. ಸುರುಪುರ ಸಂಸ್ಥಾನದ ವೀರ ರಾಣಿ ಈಶ್ವರಮ್ಮ

ಭರತ ಖಂಡದಲ್ಲಿ ಕನ್ನಡ ನಾಡು- ಪುಣ್ಯ ಭೂಮಿ ಎಂದು ಪ್ರಖ್ಯಾತಿ ಪಡೆದಿದೆ. ಈ ನಾಡು ಹಲವಾರು ಸಾಧು- ಸಂತರಿಗೆ, ಕವಿ ಸಾಹಿತಿಗಳಿಗೆ, ಪಂಡಿತ-ಪಾಮರಿಗೆ ಜನ್ಮನೀಡಿದಂತೆ, ವೀರ ಶೂರರಿಗೆ, ದೇಶ ಪ್ರೇಮಿಗಳಿಗೆ ಮತ್ತು ನಾಡ ಭಕ್ತರಿಗೆ ಜನ್ಮ ಕೊಟ್ಟಿದೆ. ಅಂತಹ ಅಪ್ರತಿಮ

ದೇಶ ಪ್ರೇಮಿಗಳ ಸಾಲಿನಲ್ಲಿ ಸುರುಪುರ ಸಂಸ್ಥಾನದ ರಾಣಿ ಈಶ್ವರಮ್ಮ ಒಬ್ಬರು ಎನ್ನುವದು ಗಮನಾರ್ಹವಾದ ಸಂಗತಿ, ಕಿತ್ತೂರಿನ ರಾಣಿ ಚೆನ್ನಮ್ಮನಂತೆ, ಬೆಳವಡಿ ಮಲ್ಲಮ್ಮನಂತೆ, ಪರಕೀಯರ ವಿರುದ್ಧ ಖಡ್ಗ ಹಿಡಿದು ಹೋರಾಟ ಮಾಡದಿದ್ದರೂ, ಬ್ರಿಟಿಷರ ಆಡಳಿತವನ್ನು ಒಪ್ಪಿಕೊಳ್ಳದೆ, ಸಂಸ್ಥಾನದಿಂದ ಹೊರ ಹಾಕಲು ರಾಣಿ ಈಶ್ವರಮ್ಮ ಮಾಡಿದ ಪ್ರಯತ್ನ ಹಾಗೂ ಸುರುಪುರದ ಬೇಡರಲ್ಲಿ ಒಗ್ಗಟ್ಟು ಮೂಡಿಸಿ, ಆಂಗ್ಲರ ವಿರುದ್ಧ ಶೀತಲ ಯುದ್ಧವನ್ನು ಪ್ರಪ್ರಥಮವಾಗಿ ಸೃಷ್ಠಿ ಮಾಡಿದ ಕೀರ್ತಿ ಸುರುಪುರದ ರಾಣಿ ಈಶ್ವರಮ್ಮನಿಗೆ ಸಲ್ಲುತ್ತದೆ.

**ರಾಜಾ ಕೃಷ್ಣಪ್ಪ ನಾಯಕನ ಕಾಲದಲ್ಲಿ ಸುರುಪುರ ಸಂಸ್ಥಾನದ ಸ್ಥಿತಿ-ಗತಿ**

ಸುರುಪುರದ ಅರಸ ರಾಜಾ ಕೃಷ್ಣಪ್ಪನಾಯಕ ಮತ್ತು ಅವನ ಮಲತಮ್ಮ ಹಣಮಪ್ಪ ನಾಯನಿಗೆ ಆಂತರಿಕ ಕಲಹ ನಡೆಯಿತು. ಈ ಇಬ್ಬರು ಸಹೋದರರು ಹೈದರಾಬಾದ ನಿಜಾಮನಿಗೆ ಮೊರೆ ಹೋದರು. ಈ ಸಮಯವನ್ನು ಸಾಧಿಸಿ ನಿಜಾಮನು ಪ್ರತಿಯೊಂದು ವರ್ಷದ ಖಂಡಣಿ ಚೌಥ ಕೂಡಿ 1,75,000 ನಿಗಧಿ ಪಡಿಸಲಾಯಿತು. ಇದಕ್ಕೆ ಸಂಪೂರ್ಣ ಬ್ರಿಟಿಷರ ಬೆಂಬಲವಿದ್ದಿತು. ಆದರೆ ಇವರ ಒಳ ಮರ್ಮ ಬ್ರಿಟಿಷರಿಗೆ ಗೊತ್ತಿರಲಿಲ್ಲ. 1830ರಲ್ಲಿ ನಿಜಾಮನಿಗೆ ಸುರುಪುರ ಸಂಸ್ಥಾನದ ರಕಮು (ಹಣ) ಬಾರದಿದ್ದರೆ ಬ್ರಿಟಿಷರ ಬೆಂಬಲ ಕೋರಿದನು. ಮತ್ತು ಬ್ರಿಟೀಷ್ ಅಧಿಕಾರಿಯನ್ನು ಸುರುಪುರದ ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಯಿತು. ಮೋತಿ ಗೀರಿ ಗೋಸಾಯಿ ಎಂಬ ಸಾಹುಕಾರನು ಸುರುಪುರದ ಅರಸನ ಕಡೆಯಿಂದ ನಿಜಾಮ ಸರಕಾರಕ್ಕೆ ಹಣವನ್ನು ಕೊಡುತ್ತಿದ್ದನು. ಈ ಹಣವನ್ನು ಸುರಪುರದ ರಾಜನಿಂದ ಅವನಿಗೆ ಹಣ ಕೊಡಿಸಲು ಬ್ರಿಟಿಷರು ಹೊಣೆಯನ್ನು ಹೊತ್ತರು. ರಾಜ್ಯದ ಆದಾಯ ಕಡಿಮೆಯಾಯಿತು, ಮತ್ತೊಂದು ಕಡೆ ನಿಜಾಮನು ತನಗೆ ಸಲ್ಲಬೇಕಾದ ರಕಮು ಸಲ್ಲದಿದ್ದರೆ ಹಣಮಪ್ಪ ನಾಯಕನನ್ನು ಅಧಿಕಾರಕ್ಕೆ ತರುವದಾಗಿ ಬ್ರಿಟಿಷರು ಹೆದರಿಸಿ ಹಿಂಡಿ ಹಿಪ್ಪಿಯನ್ನಾಗಿ ಮಾಡುತ್ತಿದ್ದರು. ಇದರಿಂದ ಅಸಹಾಯಕನಾದ ರಾಜಾ ಕೃಷ್ಣಪ್ಪ ನಾಯಕ ಆ ಕೊರಗಿನಲ್ಲಿಯೇ ತೀರಿಕೊಂಡನು. ಕೃಷ್ಣಪ್ಪ ನಾಯಕನಿಗೆ ವೆಂಕಟಪ್ಪ ನಾಯಕನೆಂಬ ಏಳು ವರ್ಷದ ಮಗನಿದ್ದನು. ಕೃಷ್ಣಪ್ಪ ನಾಯಕನ ಹೆಂಡತಿ ರಾಣಿ ಈಶ್ವರಮ್ಮ ಪ್ರಜೆಗಳ ಬಗ್ಗೆ ಕಳಕಳಿಯುಳ್ಳವಳಾಗಿದ್ದು ಅವರ ಏಳಿಗೆಗಾಗಿ ನಿರಂತರ ಶ್ರಮಿಸುತ್ತಿದ್ದಳು.

ರಾಣಿ ಈಶ್ವರಮ್ಮ ತನ್ನ ಬುದ್ಧಿವಂತಿಕೆಯಿಂದ ಸುತ್ತ ಮುತ್ತಲಿನ ಸಂಸ್ಥಾನದ ನಾಯಕರೊಂದಿಗೆ ಉತ್ತಮ ಸಂಪರ್ಕವನ್ನು ಇರಿಸಿಕೊಂಡು 12000 ಬೇಡ ನಾಯಕರನ್ನು ಒಳಗೊಂಡ ಸುಸಜ್ಜಿತ ಸೈನ್ಯವನ್ನು ತಯಾರಿಸಿದಳು. ಆದರೆ ರಾಣಿಯು ಯಾರಿಗೂ ಪಕ್ಷಪಾತ ಮಾಡುತ್ತಿರಲಿಲ್ಲ. ಇದನ್ನು ಸಹಿಸದ ರಾಣಿಯ ಸಂಬಂಧಿಕರು ಕೃಷ್ಣಪ್ಪ ನಾಯಕನ ತಮ್ಮನಾದ ಪಿಡ್ಡ ನಾಯಕನನ್ನು ವೆಂಕಟಪ್ಪ ನಾಯಕನ ಪಾಲಕನೆಂದು, ರಾಜ್ಯಭಾರವಹಿಸಬೇಕೆಂದು ಠರಾವು ಮಾಡಿದರು. ಈ ಠರಾವಿಗೆ (ಗೊತ್ತುವಳಿ)ಬ್ರಿಟೀಷ ಸರಕಾರ ಒಪ್ಪಿಕೊಂಡಿತು. ಆದರೆ ರಾಣಿ ಈಶ್ವರಮ್ಮ ಇದಕ್ಕೆ ಒಪ್ಪಿಕೊಳ್ಳದೆ ಪಿಡ್ಡನಾಯಕನನ್ನು ಮತ್ತು ಬ್ರಿಟಿಷರನ್ನು ವಿರೋಧಿಸ ತೊಡಗಿದಳು.

ಬ್ರಿಟಿಷ ಸರಕಾರ ಸುರುಪುರದ ಆಂತರಿಕ ಆಡಳಿತದಲ್ಲಿ ಭಾಗವಹಿಸಬಾರದು, ಮತ್ತು ಸ್ವಾತಂತ್ರ್ಯವಾಗಿ ಸಂಸ್ಥಾನವನ್ನು ನೋಡಿಕೊಂಡು ಮನೆತನದ ಘನತೆ ಗೌರವಗಳನ್ನು ಮತ್ತು ಸಂಸ್ಥಾನದ ಕೀರ್ತಿ ಉಳಿಸಿ ಬೆಳಸಬೇಕೆಂಬುವುದು ಈ ರಾಣಿ ಈಶ್ವರಮ್ಮನ ಮಹಾತ್ವಾಕಾಂಕ್ಷೆಯಾಗಿತ್ತು. ವೀರ ರಾಣಿ ಈಶ್ವರಮ್ಮನ ಪ್ರಾಬಲ್ಯ ಮತ್ತು ಸಾಮರ್ಥ್ಯಗಳು ದಿನೇ ದಿನೇ ಹೆಚ್ಚುತ್ತಲಿದೆ ಎಂದು ಆರಬ ಮತ್ತು ರೋಹಿಲೇ ಜನರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡಳು. ಬ್ರಿಟೀಷ್ ಅಧಿಕಾರಿ ಗ್ರಿಸ್ಲೆಯು ಇದನ್ನು ಕಂಡು ಬೆರಗಾದನು. ಈ ಎಲ್ಲಾ ಪರಸ್ಥಿಯು ಭಯಂಕರ ಯುದ್ಧದಲ್ಲಿ ಪರಿಣಮಿಸಬಾರದೆಂಬ ಭಯದಿಂದಲೆ ಬ್ರಿಟೀಷ್ಅಧಿಕಾರಿ ಭೀಮಾ ಮತ್ತು ಕೃಷ್ಣಾ ನದಿಗಳನ್ನು ದಾಟುವ ಹರಿಗೋಲುಗಳನ್ನು ಹಿಡಿದಿಟ್ಟನು. ಆದರೆ ಈ ಹೊಳೆಗಳು ಕಾಲು ಹೊಳೆಯಾಗಿರುವುದರಿಂದ ಈ ಅರಬ ಮತ್ತು ರೋಹಿಲೆ ಜನರು ಬರುವದನ್ನು ತಡೆಗಟ್ಟಲು ಸಾಧ್ಯವಿಲ್ಲವೆಂದು ಭಾವಿಸಿ ಸುರುಪುರವನ್ನು ಬಿಟ್ಟು ತೆರಳಿದನು.

### ಸುರುಪುರ ಸಂಸ್ಥಾನಕ್ಕೆ 1843ರಲ್ಲಿ ಕರ್ನಲ್ ಮೆಡೋಸ್ ಟೇಲರನ ಆಗಮನ

ಹೈದರಾಬಾದಿನ ಪ್ರಸಿಡೆಂಟನು ಗ್ರಿಸ್ಲೆಯನ್ನು ಹಿಂದಕ್ಕೆ ಕರೆಸಿಕೊಂಡು ಆ ಜಾಗಕ್ಕೆ ಮೆಡೋಸ್ ಟೇಲರನನ್ನು ಕಳುಹಿಸಿದನು ಟೇಲರನು ಗ್ರಿಸ್ಲೆಯಿಂದ ಎಲ್ಲಾ ವಿಷಯವನ್ನು ಅರಿತುಕೊಂಡನು. ರಾಣಿ ಈಶ್ವರಮ್ಮನ ದುರ್ನಡತೆಯನ್ನು ಮತ್ತು ಸುರುಪುರದ ಜನರ ಮೇಲೆ ನಂಬಿಕೆ ಇಡಬಾರದೆಂದು, ಟೇಲರನಿಗೆ ಉಪದೇಶಿಸಿದನು. ಟೇಲರನು ಸುರುಪುರಕ್ಕೆ ತಲುಪಿ ಊರ ಹೊರಗಡೆ ಇಳಿದುಕೊಂಡನು.ಪಿಡ್ಡನಾಯಕನನ್ನು ಮತ್ತು ಅವನ ಸಂಗಡ ಬಂದಿದ್ದ ರಾಜಕುಮಾರನನ್ನು

ಹಾಗೂ ರಾಜಮನೆ ತನದವರನ್ನು ಭೇಟಿಯಾಗಿ, ರಾಜ್ಯದ ಹಿತಕ್ಕಾಗಿ ತಮ್ಮ ತಮ್ಮ ಒಳ ಜಗಳ ಗಳನ್ನು ಬಿಟ್ಟು ಕೊಡಬೇಕೆಂದು, ಎಲ್ಲರಿಗೂ ಉಪದೇಶ ಮಾಡಿದನು. ಇಂಗ್ಲೀಷ್ ಸರಕಾರದ ವಿರುದ್ಧವಾಗಿ ಆಚರಿಸಿದರೆ, ಅವರ ಕಣ್ಣೆದುರಿಗೆ ಅನೇಕ ಸಂಸ್ಥಾನಗಳು ನಾಶವಾದಂತೆ, ಈ ಸಂಸ್ಥಾನವು ಉಳಿಯಲಿಕ್ಕಿಲ್ಲೆಂದು, ನೀವೆ ಅದನ್ನು ಕಳೆದುಕೊಳ್ಳುವಿರೆಂದು ನುಡಿದನು. ಈ ಸಮಯದಲ್ಲಿ ರಾಣಿಯ ಸಂಬಂಧಿಕರು ಅಲ್ಲಿಇದ್ದು ಗಮನವಿಟ್ಟು ಕೇಳುತ್ತಿದ್ದರು. ಪಿಡ್ಡನಾಯಕನನ್ನು ಸರಕಾರದಿಂದ ಪಾಲಕನನ್ನಾಗಿ ನೇಮಿಸಲಾಗಿದೆ. ಇದಕ್ಕೆ ಯಾರಾದರೂ ವಿರೋಧಗೈದರೆ ಅವರನ್ನು ಸರಕಾರದ ವಿರುದ್ಧ ಬಂಡುಗಾರರೆಂದು ಪರಿಗಣಿಸಲ್ಪಡುವದೆಂದು ಹೇಳಿದರು. ಸೈನಿಕ ಸರದಾರರೆಲ್ಲರನ್ನು ಕರೆಯಿಸಿದನು. ಸುಮಾರು 100 ಜನ ಬೇಡರು, ಭವ್ಯಸ್ವರೂಪ ಉಳ್ಳ ಈ ತರಹ ಶೂರ ಜನರನ್ನು ಟೇಲರನು ಹಿಂದೆ ಎಲ್ಲಿಯೂ ನೋಡಿರಲಿಲ್ಲ. ಈ ಸರದಾರರ ಜೊತೆ ಮಾತನಾಡಿ ಟೇಲರನು ಅವರಿಗೆ ತಿಳಿಹೇಳಿದನು ಅದರಲಿ ಕೆಲವರು ಸಿಟ್ಟಿಗೆದ್ದರು. "ನಾವು ರಾಣಿ ಮತ್ತು ಚನ್ನಬಸಪ್ಪನ ವಿನಃ ಅನ್ಯರ ಮಾತನ್ನು ಮನ್ನಿಸುವದಿಲ್ಲೆಂದು"[6]. ಖಡಾ ಖಂಡಿತವಾಗಿ ನುಡಿದರು. ಚೆನ್ನಬಸಪ್ಪನು ರಾಣಿಯ ಮುಖ್ಯ ಕಾರಭಾರಿಯಾಗಿದ್ದನು. ಆ ನಂತರ ಟೇಲರನು ಎಲ್ಲರಿಗೂ ಎಲೆ ಅಡಿಕೆ, ಹೂವಿನ ಹಾರಗಳನ್ನರ್ಪಿಸಿ ಗೌರವಿಸಿದನು. ಈ ರೀತಿ ಮಾರ್ಯದೆಯಿಂದ ತಮ್ಮೊಡನೆ ವರ್ತಿಸಿದುದು ಎಲ್ಲರಿಗೂ ಆಶ್ಚರ್ಯವಾಯಿತು ಮತ್ತು ಸಂತೋಷ ಗೊಂಡು ತಿರುಗಿ ಹೋದರು.

**ಟೇಲರ ಮತ್ತು ರಾಣಿ ಈಶ್ವರಮ್ಮನ ಭೇಟಿ**

ರಾಜನ ಭೇಟಿಗಾಗಿ ಟೇಲರನು ಊರೊಳಗೆ ಬಂದನು. ಟೇಲರನ್ನನ್ನು ಎಲ್ಲರೂ ಆದರದಿಂದ ಎದುರುಗೊಂಡರು, ರಾಜ ದರ್ಬಾರ ಹೊರಪಟಾಂಗಣವು ಜನ ಸಂದಣಿಯಿಂದ ಕಿಕ್ಕಿರಿದಿತ್ತು. ಈ ಜನ ಸಂದಣಿಯೊಳಗಿಂದ ಅವನನ್ನು ಕನಬಾಬು, ಮುಖಮಲಗಳಿಂದ ಅಲಂಕರಿಸಲ್ಪಟ್ಟ ಒಳ ಪಟಾಂಗಣದಲ್ಲಿ ಕರೆದ್ಯೊಯ್ದರು. ಅಲ್ಲಿ ಚಿಕ್ಕ ಬಾಲಕನಾದ ರಾಜನು, ಅವನ ಹಿಂದಿನ ಭಾಗ ದಲ್ಲಿ ಗೋಡೆಯಲ್ಲಿ ರಾಣಿಯು ಕುಳಿತಿದ್ದಳು. ಸಾಮೋಪಚಾರದ ಮಾತುಳಗಾದ ನಂತಸರದಲ್ಲಿ ಕೊನೆಗೆ ಟೇಲರನು ತನ್ನಲ್ಲಿ ಇದ್ದ ಕಾಗದವನ್ನು ರಾಣಿಯ ಮುಂದಿಸಿದನು.

೧. ಹಿಂದಿನ ಮೂರು ವರ್ಷಗಳ ಲೆಕ್ಕವನ್ನು ಕೊಡವದು.

೨. ರಾಜನ ರಾಜ್ಯಾಧಿಕಾರದ ಮುದ್ರೆ(ಲಾಂಛನೆ)ಯನ್ನು ಕೊಡುವದು.

೩.ಎಲ್ಲಾ ಸೈನಿಕರನ್ನು ಪಿಡ್ಡನಾಯಕನ ಸ್ವಾಧೀನ ಗೊಳಿಸುವದು.

ಇವುಗಳನ್ನು ರಾಣಿ ಈಶ್ವರಮ್ಮ ನೋಡಿ ಗಾಬರಿಗೊಂಡು, ಹೇಗಾದರು ಮಾಡಿ ತಪ್ಪಿಸಿಕೊಳ್ಳ ಬೇಕೆಂದು ಯತ್ನಿಸಿದಳು. ಆದರೆ ಟೇಲರನು ತನ್ನ ಕಾರ್ಯವನ್ನು ಮುಗಿಸಿಕೊಳ್ಳದೆ ಅಲ್ಲಿಂದ ಏಳಬಾರದೆಂದು ಧೈರ್ಯದಿಂದ ಕುಳಿತುಕೊಂಡನು. ಪರಕೀಯರು ತಮ್ಮ ಸಂಸ್ಥಾನಕ್ಕೆ ಬಂದು ಮಣಿಸಿ ಮಾತಾಡುವದು ರಾಣಿ ಈಶ್ವರಮ್ಮನಿಗೆ ಸಹಿಸಲಾಗಲಿಲ್ಲ. ಟೇಲರನ ಪ್ರತಿಯೊಂದು ಪ್ರಶ್ನೆಗೆ ಧೈರ್ಯದಿಂದ ತಕ್ಕ ಉತ್ತರ ಕೊಟ್ಟಳು. ಕೊನೆಗೆ ಎಲ್ಲಾ ಸಲಹೆಗಳನ್ನು ಒಪ್ಪಿಕೊಂಡಳು. ರಾಜ ಮುದ್ರೆಯ ವಿಷಯದಲ್ಲಿ ಮಾತ್ರ ರಾಣಿಯ ಆಕ್ಷೇಪವು ನ್ಯಾಯಯುತವಾಗಿತ್ತು. ರಾಜನ ಮುದ್ರಿಕೆಯನ್ನು ಅನ್ಯರು ಉಪಯೋಗಿಸುವದು ಹೇಗೆಂದು ಕೇಳಿದುದಲ್ಲದೆ, ಪಿಡ್ಡನಾಯಕನು ಮಂತ್ರಿತ್ವವನ್ನು ಸೂಚಿಸುವ ಬೇರೊಂದು ಮೊಹರನ್ನು ತನಗಾಗಿ ಮಾಡಿಕೊಳ್ಳಲು ಹೇಳಿದಳು.

ಪರಕೀಯರ ನಿಯಂತ್ರಣಕ್ಕೆ ತಾಯ್ನಾಡನ್ನು ಒಪ್ಪಿಸುವ ಪರಸ್ಥಿತಿ ಬಂದದ್ದು ಕಂಡು ರಾಣಿ ಈಶ್ವರಮ್ಮನಿಗೆ ಅತೀವ ದುಃಖವಾಯಿತು.ತನ್ನ ಸಂಬಂಧಿಕರೇ ಬ್ರಿಟಿಷರಿಗೆ ಎಲ್ಲಾ ರೀತಿಯ ಬೆಂಬಲ ನೀಡಿದ್ದರು. ರಾಣಿಯ ಬೆಂಬಲಿಗರಾದ ಬೇಡ ಸೈನಿಕರು ಟೇಲರನ ಮತ್ತು ಪಿಡ್ಡನಾಯಕನ ಆಡಳಿತವನ್ನು ಒಪ್ಪಿಕೊಳ್ಳಲಿಲ್ಲ. ಟೇಲರನು ತನ್ನ ಚಾಣಾಕ್ಷತನದಿಂದ ಸೈನಿಕರನ್ನು ಒಪ್ಪಿಸಿದನು. ಪಿಡ್ಡನಾಯಕನು ಬರೇ ಮಂತ್ರಿಯಲ್ಲದೆ, ಎಂದಿಗೂ ರಾಜನಾಗಲಾರನೆಂದು, ಆಣೆ ಪ್ರಮಾಣದ ನಂತರ ಬೇಡ ಸೈನಿಕರು ಟೇಲರನ ಮಾತಿಗೆ ಒಪ್ಪಿಕೊಂಡನಂತರ, ಚಿಕ್ಕ ನೆಪವನ್ನು ಮುಂದೆ ಮಾಡಿಕೊಂಡ ಚೆನ್ನಬಸಪ್ಪನನ್ನು ಬಂಧಿಸಿದರು.

ಹೈದರಾಬಾದಿನ ರೆಸಿಡೆಂಟನು, ಮತ್ತು ಗವರ್ನರ್ ಜನರಲ್‌ರು ಟೇಲರನ ಪ್ರಯತ್ನವನ್ನು ಶ್ಲಾಘಿಸಿದರು. ಆದರೆ ಟೇಲರನ ಕೆಲಸ ಇಷ್ಟಕ್ಕೆ ಮುಗಿಯಲಿಲ್ಲ. ಏಕೆಂದರೆ ರಾಣಿಯ ಪಕ್ಷದ ಜನರು ಪುನಃ ಭೀಕರ ಸ್ವರೂಪವನ್ನು ತಾಳಲಾರಂಭಿಸಿದರು. ಟೇಲರನಲ್ಲಿ ಸೈನ್ಯವಿರಲಿಲ್ಲ ಅವನು ಏನು ಮಾಡಲಾರನೆಂದು ರಾಣಿ ಈಶ್ವರಮ್ಮನಿಗೆ ಚೆನ್ನಬಸಪ್ಪ ಒಳಗಿಂದೊಳಗೆ ಹೇಳಿ ಕಳುಹಿಸುತ್ತಿದ್ದನು. ಚನ್ನಬಸಪ್ಪನನ್ನು ಬಿಡುಗಡೆಯಾದರೆ ಲೆಕ್ಕ ದೊರೆಯುವದು, ಇಲ್ಲವಾದರೆ ದೊರೆಯ ಲಾರದೆಂದು ಗೋಸಾಯಿಯೊಡನೆ ರಾಣಿಯು ಟೇಲರನಿಗೆ ಹೇಳಿ ಕಳುಹಿಸಿದಳು. ಚನ್ನಬಸಪ್ಪನು ಸುರುಪುರದಲ್ಲಿರುವವರೆಗೆ ಈ ತರಹದ ಒಳಸಂಚುಗಳು ನಡೆಯುವವೆಂದು ಟೇಲರನು ಭಾವಿಸಿದನು. ಚನ್ನಬಸಪ್ಪನನ್ನು ಬಿಡಿಸಿಕೊಳ್ಳಲು 12000 ಬೇಡಕಿಯವರೊಂದಿಗೆ

ರಾತ್ರಿಯಲ್ಲಿ ಟೇಲರನಿರುವ ಕ್ಯಾಂಪಿನ ಮೇಲೆ ಧಾಳಿ ಮಾಡಿಸಬೇಕೆಂದು ರಾಣಿಯು ಪ್ರಯತ್ನ ಮಾಡತೊಡಗಿದಳು(ಭಾವಚಿತ್ರ ೩.೯,೧೦,೧೧ ನೋಡಿ). ಗುಡ್ಡದಲ್ಲಿ ಅಲ್ಲಲ್ಲಿ ಬೇಡರು ನಿಂತಿದ್ದನ್ನು ಟೇಲರನ ಆಳುಗಳು ನೋಡಿದರು. ಚನ್ನಬಸಪ್ಪನನ್ನು ಸ್ಥಳಾಂತರಗೊಳಿಸಬೇಕೆಂದು ಆಲೋಚಸಿ, ಟೇಲರನು ಅವನಿದ್ದೆಡೆಗೆ ಹೋಗಿ ಈಗಿಂದಿಗೆ ನೀನು ಲಿಂಗಸೂಗೂರಿಗೆ ಹೋರಡಬೇಕೆಂದು ಹೇಳಿದನು. ಅದೇ ರಾತ್ರಿ ಚನ್ನಬಸಪ್ಪನನ್ನು 25 ಕುದುರೆ ಸವಾರರೊಡನೆ ಲಿಂಗಸೂಗೂರಿಗೆ ಕಳುಹಿಸಿದನು. ಈ ಸುದ್ದಿಯನ್ನು ರಾಣಿಯು ಬೆಳಿಗ್ಗೆ ಕೇಳಿದಳು, ಅವಳ ಕ್ರೋಧವು ಮೇರೆದಪ್ಪಿತು. ಹಣೆಹಣೆ ಬಡೆದುಕೊಳ್ಳುವದು, ಗೋಡೆಗೆ ಹಾಯುವದು, ಒದರುವದು, ಚೀರುವುದು, ಗೋಷೆಯ ಪರವೆ ಇಲ್ಲದೆ ಹೊರಗೆಬಂದು ಚನ್ನಬಸಪ್ಪನನ್ನು ತಿರುಗಿ ತರುವದಕ್ಕಾಗಿ ತನ್ನ ಜನರನ್ನು ಕೇಳಿಕೊಳ್ಳುವದು, ಇವೆ ಮುಂತಾದ ರಾದ್ಧಾಂತ ನಡೆಸಿದಳು. ಈ ಪ್ರಸಂಗವು ಈ ರೀತಿ ರೂಪವನ್ನು ತಾಳುವದೆಂದು ಟೇಲರನು ಮೊದಲೇ ಬಗೆದಿದ್ದನು. ಈ ಘಟನೆಯ ಮೇಲೆ ಎಲ್ಲವೂ ಅವಲಂಬಿಸಿತ್ತು. ಆದರೆ ಸುದೈವದಿಂದ ಯಾರು ಅವಳ ಮಾತಿಗೆ ಕಿವಿಗೊಡಲಿಲ್ಲ. ಐದಾರು ಸಿದ್ಧಿ ಜನರು ಮಾತ್ರ ತಮ್ಮ ತುಪಾಕಿಗಳನ್ನು ಮದ್ದುಗುಂಡಿನಿಂದ ಬಾರುಮಾಡಿದರು. ಆದರೆ ಇತರರು ಬೆದರಿಸಿದ್ದರಿಂದ ಅವರು ತಣ್ಣಗಾದರು.

ರಾಣಿ ಈಶ್ವರಮ್ಮನಿಗೆ ತನ್ನ ಸಂಸ್ಥಾನದ ಪ್ರಜೆಗಳು, ಸೈನಿಕರು, ಸಂಬಂಧಿಕರು ಮತ್ತು ಮಂತ್ರಿಗಳು ಪರಕೀಯರ ಮಾಂತ್ರಿಕ ಮಾತಿಗೆ ಮರುಳಾಗಿ ಮತೀಹೀನರಂತೆ ವರ್ತಿಸುವದನ್ನು ಕಂಡು ಬಹಳ ದುಃಖವಾಯಿತು. ಆದ್ದರಿಂದ ಆಕೆಯು ತನ್ನ ಸ್ವಭಾವವನ್ನು ಬದಲಿಸಿಕೊಂಡು ಟೇಲರನೊಂದಿಗೆ ಒಪ್ಪಂದ ಮಾಡಿಕೊಳ್ಳುವದನ್ನು ವರತುಪಡಿಸಿದರೆ ಬೇರೆ ಮಾರ್ಗವಿರಲಿಲ್ಲ. ರಾಣಿ ಈಶ್ವರಮ್ಮ ಟೇಲರನನ್ನು ಕಾಣುವದಕ್ಕಾಗಿ ಹೇಳಿ ಕಳುಹಿಸಿದಳು ಆದರೆ ಟೇಲರನು ಈ ಮಾತಿಗೆ ಒಪ್ಪಲಿಲ್ಲ, ಬೆಲೆಯುಳ್ಳ ಕಾಣಿಕೆಗಳನ್ನು ಕಳಿಸುತ್ತ ಪತ್ರಗಳನ್ನು ಬರೆಯಲು ಪ್ರರಿಶ್ರಮಿಸಿದಳು, ಇಷ್ಟೆಲ್ಲ ಮಾಡಿದರು ಟೇಲರನನ್ನು 10 ಲಕ್ಷ ರೂಪಾಯಿಗಳ ವಿನಃ ಬೇರೆ ಯಾವುದೇ ಮಾತಾಡಲಿಲ್ಲ. ಎರಡು ದಿನಗಳು ಕಳೆದ ನಂತರದಲ್ಲಿ ಕೊನೆಗೆ ಲೆಕ್ಕದ ಕಾಗದಗಳು ಬಂದವು ಅವುಗಳನ್ನು ರೆಸಿಡೆಂಟನಿಗೆ ಕಳುಹಿಸಬೇಕಾಯಿತು.

ರಾಣಿ ಈಶ್ವರಮ್ಮನನ್ನು ಎಲ್ಲರಿಂದ ಬೇರ್ಪಡಿಸಿ ಒಬ್ಬಂಟಿಗಳನ್ನಾಗಿ ಮಾಡಿ ಬ್ರಿಟೀಷ್ ಆಡಳಿತಕ್ಕೆ ಶರಣಾಗುವಂತೆ ಮತ್ತು ತನ್ನ ಒಳಸಂಚಿನ ಕೆಲಸಗಳನ್ನು ಬಿಡುವಂತೆ ಎಲ್ಲಾ ರೀತಿಯ ವ್ಯವಸ್ಥೆಯನ್ನು ಟೇಲರನು ಮಾಡಿದ್ದನು. ಅವಳ ಪರಸ್ಥಿತಿಯನ್ನು ಕಂಡುಕೊಂಡು ಟೇಲರನು ರಾಣಿಯ ಕಡೆಯಿಂದ ಹಿಂದಿನ ವಸೂಲಿಯನ್ನು ಕೇಳ ತೊಡಗಿದನು. ತನ್ನಲ್ಲಿ ಹಣ ವಿಲ್ಲೆಂದು ರಾಣಿಯು ಹೇಳಹತ್ತಿದಳು. ಟೇಲರನು ಅನ್ಯಮಾರ್ಗವಿಲ್ಲದೆ ರಾಣಿಯ ಜಾಗೀರುಗಳನ್ನು ಜಪ್ತಿ ಮಾಡಿದನು. ಇದರಿಂದ ಅವಳ ಬೆನ್ನೆಲುಬು ಮುರಿದಾಂತಾಯಿತು. ಟೇಲರನ ಎಲ್ಲಾ ಮಾತುಗಳನ್ನು ಒಪ್ಪಿಕೊಂಡು ಅವನಿದ್ದೆಡೆಗೆ ಹೋಗಿ, ಅವನೆದುರು ಅಡ್ಡಬೀಳ ಹತ್ತಿದಳು, ಅವಳ ಜಾಗೀರಿಯ ಜಪ್ತಿಯು ಸರಕಾರದ ಅಪ್ಪಣೆಯಂತೆ ಮಾಡಲ್ಪಟ್ಟಿತ್ತು. ರಾಣಿಯು ತನ್ನ ಮರ್ಯಾದೆ ಮತ್ತು ಗೋಷೆಯ ಪರವೆಯಿಲ್ಲದೆ ಟೇಲರನಲ್ಲಿಗೆ ಹೋಗಿ ಅಳಹತ್ತಿದಳು ಮತ್ತು ಅವನ ಹೆಂಡತಿಗೆ ಪರಿಪರಿಯಿಂದ ಹೇಳಿಕೊಳ್ಳುತ್ತಿದ್ದಳು. ಆದರೆ ಟೇಲರನು ಏನು ಮಾಡುವಂತ್ತಿದ್ದಿಲ್ಲ.

**ರಾಣಿ ಈಶ್ವರಮ್ಮನ ಕೊನೆಯ ದಿನಗಳು**

ಬ್ರಿಟೀಷರ ಹೊಡೆದು ಆಳುವ ನೀತಿಯಿಂದ ರಾಣಿ ಈಶ್ವರಮ್ಮ ಮತ್ತು ಸುರುಪುರ ಸಂಸ್ಥಾನದ ಪ್ರಮುಖರು ಅಸಂತುಷ್ಟರಾಗಿದ್ದರು. 1846ರಲ್ಲಿ ಟೇಲರನ್ನು ಹೈದರಾಬಾದಿಗೆ ಹೋದಾಗ, ಇತ್ತ ರಾಣಿಯು ತನ್ನ ಪೂರ್ವದ ಧೋರಣೆಗಳನ್ನು ಸ್ವೀಕರಿಸಿದಳು. ರಾಣಿಯು ದುರಾಚರಣೆಯು ಮಿತಿಮೀರಿತು "ಒಂದು ದಿನ ಟೇಲರನ ಒಬ್ಬ ಮನುಷ್ಯನು ಇನ್ನೊಬ್ಬ ಬೇಡನಿಗೆ ದುಡ್ಡಿನ ಆಸೆ ತೋರಿಸಿ ಅವನಿಂದ ರಾಣಿಯು ಕೊಟ್ಟ ಪತ್ರವನ್ನು ಕೊಂಡು ಅದನ್ನು ತನ್ನ ಯಜಮಾನನಿಗೆ ತೋರಿಸಿದನು"[7]

ಈ ಪತ್ರವನ್ನು ನಿಜಾಮನ ವಿಶ್ವಾಸಕ್ಕೆ ಪಾತ್ರನಾದ ಸೇವಕನೊಬ್ಬನಿಗೆ ಬರೆಯಲಾಗಿತ್ತು. ಬರೆದವನು ರಾಣಿಯ ಮುಖ್ಯ ಕಾರಕೂನನು. ಆ ಪತ್ರದ ಮೇಲೆ ರಾಣಿಯ ಮೊಹರು ಇತ್ತು. ಅರಬ್ ಮತ್ತು ರೋಹಿಲೇ ಜನರನ್ನು ಕಳಿಸಬೇಕೆಂದು, ಆ ಪತ್ರದಲ್ಲಿ ಬರೆದುಕೊಳ್ಳಲಾಗಿತ್ತು. ಟೇಲರನ ಅಧಿಕಾರವನ್ನು ಕಿತ್ತಿ ಹಾಕುಬೇಕೆಂದು ರಾಣಿ ಈಶ್ವರಮ್ಮನು ಒಳಸಂಚು ನಡೆಸಿದ್ದಳು. ಆದರೆ ಟೇಲರನು ಮುಂದಾಲೋಚನೆ ಉಳ್ಳವನಾಗಿದ್ದು, ಆಗಿಂದಾಗೆ ಜಾಗರೂಕತೆಯಿಂದ ಅವರನ್ನು ತಲೆ ಎತ್ತದಂತೆ ಮಾಡಿದನು.

ಸುರಪುರದಲ್ಲಿ ಟೇಲರನು ಇಲ್ಲದಿರುವ ಸಮಯನೋಡಿ ರಾಣಿಯು ಗದ್ದಲವೆಬ್ಬಿಸಿದಳು. ಕಾಸಿ ಮನೆಂಬ ರಾಣಿಯ ಸ್ನೇಹಿತನು ಟೇಲರನನ್ನು ಇನ್ನು ಮುಂದೆ ತಿರುಗಿ ಸುರುಪುರಕ್ಕೆ ಬರುವದಿಲ್ಲವೆಂದು, ಸಂಸ್ಥಾನದ ಎಲ್ಲಾ ಕಾರಭಾರಗಳು ರಾಣಿಗೆ ಸಿಕ್ಕುವುದೆಂದು, ಅವಳಿಗೆ ಉಪದೇಶಗೈಯ್ಯುತ್ತಿದ್ದನು. ವೆಂಕಟಪ್ಪ ನಾಯಕ ಟೇಲರನಿಗೆ ಪತ್ರವನ್ನು ಕೂಡ ಬರೆಯದಂತೆ ರಾಣಿ ಈಶ್ವರಮ್ಮ ನಿರ್ಬಂಧಿಸಿದ್ದಳು. ಹೈದರಾಬಾದನಿಂದ ಬಂದ ಟಪಾಲನ್ನು ಬಲತ್ಕಾರದಿಂದ ಕಸಿದು ತನ್ನ ಸಂಬಂಧವಾಗಿ ಏನಾದರೂ ಚರ್ಚೆ ನಡೆದಿದೆಯೋ ಏನೋ ಎಂದು ಸಂಶಯ ಪಟ್ಟು ಅದನ್ನು ನೋಡ ತೊಡಗಿದಳು. ರಾಣಿಯು ಎಲ್ಲಾ ಬೇಡ ಜನರಿಗೆ ಊಟ, ಉಡಿಗೆ, ತೊಡಿಗೆ, ಇನಾಮಕೊಟ್ಟು ತನ್ನ ಅಪ್ಪಣೆ ಪಾಲಿಸುವಂತೆ ಅವರ ಮನವೊಲಿಸಿದಳು. ೩ ತಿಂಗಳ ನಂತರ ಟೇಲರನು ಸುರುಪುರಕ್ಕೆ ಹಿಂತಿರುಗಿದಾಗ ರಾಜನು ಅವನನ್ನು ಎದರುಕೊಂಡು ಕರೆತಂದನು. ಎರಡನೇ ದಿನ ಟೇಲರನು ರೆಸಿಡೆಂಟನ ಪತ್ರದ ಭಾಷ್ಯಾಂತರ ಮಾಡಿಸಿ ರಾಣಿಗೆ ಕಳಿಸಿದನು. ಟೇಲರನ ಪತ್ರವು ರಾಣಿಗೆ ತಲುಪಿದಾಗ ಅರಮನೆಯಲ್ಲಿ ರಾಣಿಯ ೫೦೦ ಬೇಡ ಸೈನಿಕರು ತಿರುಗಾಡುತ್ತಿದ್ದರು. ಎರಡು ಪಕ್ಷಗಳ ನಡವೆ ಕಲಹವಾಗಬಹುದುದೆಂದು ತಿಳಿದಿದ್ದ ಟೇಲರ ಮತ್ತು ಸ್ವತಃ ಅರಸನು ಪರಿ ಪರಿಯಾಗಿ ಹೇಳಿ ಕಳಿಸಿದರೂ. ಆ ಜನರು ಈ ರೀತಿ ಗರ್ಜಿಸಿದರು "ನಾವು ರಾಣಿಯ ಮಾತಿನ ವಿನಃ ಅನ್ಯರ ಮಾತನ್ನು ಕೇಳುವದಿಲ್ಲೆಂದು ಸ್ಪಷ್ಟವಾಗಿ ನುಡಿದರು"[8] ಈ ಎಲ್ಲಾ ಪರಸ್ಥಿತಿಗೆ ತನ್ನ ತಾಯಿ ರಾಣಿ ಈಶ್ವರಮ್ಮನೇ ಕಾರಣವೆಂದು ಟೇಲರನ ಮಾತನ್ನು ಕೇಳಿ ವೆಂಕಟಪ್ಪ ನಾಯಕನು ತನ್ನ ತಾಯಿಯು ಸಂಸ್ಥಾನ ಬಿಟ್ಟು ಹೋಗುವಂತೆ ಆದೇಶಿಸಿದನು. ಆದರಂತೆ ರಾಣಿ ಈಶ್ವರಮ್ಮ ತನ್ನ ತವರುರಾದ ರತ್ನಗಿರಿಗೆ ಹೋದಳು. ೧೮೫೦ರಲ್ಲಿ ಸುರುಪುರು ಸಂಸ್ಥಾನಕ್ಕೆ ಹಿಂದಿರುಗಿದ ರಾಣಿ ಈಶ್ವರಮ್ಮನಿಗೆ ಖರ್ಚಿನ ಸಲುವಾಗಿ ತಿಂಗಳಿಗೆ ೧೦೦೦ ರೂ ಸರಕಾರ ನಿಗದಿಪಡಿಸಿರುವದನ್ನು ಕಂಡು ಮತ್ತಷ್ಟು ಅಸಂತೃಪ್ತಳಾದಳು, ಆದರೆ ರಾಣಿಯ ಆಟ- ಸಾಗುವಂತಿರಲಿಲ್ಲ.

ರಾಣಿ ಈಶ್ವರಮ್ಮನಿಗೆ ಅರ್ಧಾಂಗವಾಯಿಗೆ ಬಲಿಯಾದಳು. ಅವಳು ದಿನೇದಿನೇ ಕ್ಷೀಣವಾಗ ಹತ್ತಿದ್ದಳು. ಯಾತ್ರೆಗೆ ಹೋಗಬೇಕೆಂದು ಲಿಂಗಸೂಗೂರ ಮಾರ್ಗವಾಗಿ ತೆರಳಿದಳು, ಪುನಃ ಅರ್ಧಾಂಗವಾಯುವಿನಿಂದ ಪೀಡಿತಳಾಗಿ ಅಲ್ಲಿಯೇ ಮೇ 27ನೇ ತಾರೀಖು 1853ರಲ್ಲಿ ಮೃತಪಟ್ಟಳು.

ರಾಣಿ ಈಶ್ವರಮ್ಮ ದುರಾಚಾರಿಯಾಗಿದ್ದರೂ, ಬಡವರ ಬಗ್ಗೆ, ಪ್ರಜೆಗಳ ಬಗ್ಗೆ ಕನಿಕರವಿತ್ತು. ಅವಳು ಪ್ರಜೆಗಳ ಏಳಿಗೆಗಾಗಿ ಶ್ರಮಿಸುವುದು ಮತ್ತು ಔದಾರ್ಯ, ಸದ್ಗುಣಗಳನ್ನು ಮರೆಯುವಂತಿರಲಿಲ್ಲ. ಅವಳು ಹಿರಿಯರ, ಹಾಗೂ ಮನೆತನದ ಗೌರವ, ಘನತೆ ಮತ್ತು ಸ್ವಾತಂತ್ರ್ಯ ಉಳಿಸಿಕೊಳ್ಳಲು ಮಾಡಿದ ಪ್ರಯತ್ನ ಯಾವದೇ ಶೂರನಿಗಿಂತ ಕಡಿಮೆ ಯಾಗಿರಲಿಲ್ಲ.

ರಾಣಿ ಈಶ್ವರಮ್ಮನ ಸಂಬಂಧಿಕರ ಮತ್ತು ಕೆಲವು ದೇಶದ್ರೋಹಿಗಳ ಕುತಂತ್ರದಿಂದ ಬ್ರಿಟಿಷರ ಆಡಳಿತಕ್ಕೆ ಮಣಿಯುವಂತಾಯಿತು. ವೀರ ರಾಣಿ ಈಶ್ವರಮ್ಮ ಅಷ್ಟೊಂದು ಸುಲಭವಾಗಿ ಬ್ರಿಟಿಷರ ತಂತ್ರಕ್ಕೆ ಮಣಿಯದೆ, ನಿರಂತರ ಬ್ರಿಟಿಷರಿಗೆ ಮುಳ್ಳಾಗಿದ್ದಳು. ಆಕೆಯ ಧೈರ್ಯ, ಶೌರ್ಯ, ಮತ್ತು ದೇಶ ಪ್ರೇಮಗಳು ಇಂದಿನ ಯುವ ಪೀಳಿಗೆಗೆ ಮಾದರಿಯಾಗಿವೆ, ಹಾಗೂ ಉನ್ನತ ವಿಚಾರಗಳಿಂದ ಸುರುಪುರು ಸಂಸ್ಥಾನ ಕೇವಲ ಕರ್ನಾಟಕ ಇತಿಹಾಸದಲ್ಲಿ ಮಾತ್ರವಲ್ಲದೆ. ಭಾರತೀಯ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ.

"The ruler must have the fox sdeas and loin's Courage" ಎಂದು ಮೆಕವಲ್ಲಿ ಹೇಳಿರುವುದು ರಾಣಿ ಈಶ್ವರಮ್ಮನವರು ತಮ್ಮ ರಾಜಕೀಯದಲ್ಲಿ ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಎಲ್ಲಾ ರೀತಿಯ ಅಧಿಕಾರಿಗಳನ್ನು ಎಂದರೆ ಸಮಯ ಬಂದಾಗ ಸರ್ವಾಧಿಕಾರಿಯಂತೆ ವರ್ತಿಸುತ್ತಿದ್ದಳು. ತನಗೆ ಕಷ್ಟ ಬಂದಾಗ ಪ್ರಜೆಗಳ ಸಹಾಯವನ್ನು ಕೇಳಿ ಪ್ರಜಾಪ್ರಭುತ್ವ ತತ್ವವನ್ನು ಅನುಸರಿಸುತ್ತಿದ್ದಳು. ಪರಕೀಯರ ಆಳ್ವಿಕೆಯನ್ನ ಕಂಡು ಮರಗುತ್ತಿದ್ದಳು.

## ೩.೫. ವ್ಯಕ್ತಿ ಅಧ್ಯಯನ

### ೩.೫.೧. ರಾಜ ನಾಲ್ವಡಿ ವೆಂಕಟಪ್ಪ ನಾಯಕ (೧೮೩೫ ರಿಂದ ೧೮೫೮)

ಭಾರತಾಂಬೆಯ ಮಡಿಲಿನಲ್ಲಿ ಹಲವಾರು ಶೂರರು, ವೀರರು ಮತ್ತು ದೇಶ ಪ್ರೇಮಿಗಳು ಜನ್ಮತಾಳಿದ್ದಾರೆ. ಹಿಂದೂ ಸಂಸ್ಕೃತಿಯನ್ನು ರಕ್ಷಿಸಲು ಛತ್ರಪತಿ ಶಿವಾಜಿ ಮಹಾರಾಜನು ಹೇಗೆ ಪ್ರಮುಖ ಪಾತ್ರವಹಿಸಿದ್ದನೋ, ಅದರಂತೆಯೇ ಅಥವಾ ಅದಕ್ಕಿಂತಲೂ ಒಂದು ಕೈ ಮಿಗಿಲಾಗಿ ಸುರುಪುರ ಸಂಸ್ಥಾನದ ದೊರೆಗಳು ಹಿಂದೂ ಸಂಸ್ಕೃತಿಯ ರಕ್ಷಕರಾಗಿಯೂ, ಸರ್ವ ಧರ್ಮ

ಸಹಿಷ್ಣುಗಳಾಗಿಯೂ, ಈ ನಾಡನ್ನು ಪಾಲಿಸಿಕೊಂಡು ಬಂದಿದ್ದಾರೆ. ಸಗರ ನಾಡಿನ ಕೇಂದ್ರ ಸ್ಥಳವಾದ ಸುರುಪುರದ ಐತಿಹಾಸಿಕತೆಯ, ಹಿರಿಮೆ ಗರಿಮೆಯನ್ನು ನೆನೆದಾಗ ಸುಪ್ತ ಚೇತನವು ಸೆಟೆದು ನಿಲ್ಲುತ್ತದೆ.

ಗಂಡು ಮೆಟ್ಟಿದ ಸ್ಥಳ ಸುರುಪುರದ ಗೋಸಲ ವಂಶದ ಐತಿಹಾಸಿಕ ಪರಂಪರೆಯಲ್ಲಿ ಮೆರೆದು ಹೋದ, ಇಲ್ಲಿನ ನಾಡ ನಾಯಕರಾಗಿದ್ದ ಬೇಡ ದೊರೆಗಳ ಸಹಾಸ, ಶೌರ್ಯ,ಧೈರ್ಯ ಮತ್ತು ರಾಷ್ಟ್ರ ಪ್ರೇಮವನ್ನು ಈ ನೆಲವು ಎಂದಿಗೂ ಮರೆಯದು. ಅಂತಹ ಪರಾಕ್ರಮಿಗಳ ವಂಶದಲ್ಲಿ ಹುಟ್ಟಿದ ರಾಜ ನಾಲ್ವಡಿ ವೆಂಕಟಪ್ಪ ನಾಯಕನ ಕ್ರಾಂತಿಕಾರಕ ಮನೋಭಾವನೆ, ಅಪ್ರತಿಮ ಹೋರಾಟದ ಸ್ಫೂರ್ತಿಯಿಂದ ಬ್ರಿಟೀಷ್ ಸಾಮ್ರಾಜ್ಯದ ಭದ್ರಬುನಾದಿ ಅಲುಗಾಡಿತು. ಇಂತಹ ವೀರರಿಗೆ ಜನ್ಮಕೊಟ್ಟ ಕನ್ನಡ ನಾಡಿನ ಹಿರಿಮೆ ಗರಿಮೆಗಳು, ಘನತೆ ಗೌರವಗಳು ಭಾರತೀಯ ಇತಿಹಾಸದಲ್ಲಿ ಚಿರಸ್ಮರಣೀಯವಾಗಿವೆ.

## ರಾಜಾ ನಾಲ್ವಡಿ ವೆಂಕಟಪ್ಪ ನಾಯಕರ ಬಾಲ್ಯ ಜೀವನ

೧೮೩೪ರಲ್ಲಿ ರಾಜಕೃಷ್ಣಪ್ಪ ನಾಯಕ ಮತ್ತು ರಾಣಿ ಈಶ್ವರಮ್ಮನವರ ಗರ್ಭದಲ್ಲಿ ರಾಜ ನಾಲ್ವಡಿ ವೆಂಕಟಪ್ಪ ನಾಯಕನು ಸುರಪುರ ಸಂಸ್ಥಾನದಲ್ಲಿ ಜನಿಸಿದನು. ಬಾಲ್ಯದಿಂದಲೆ ಎಲ್ಲ ಯುದ್ಧ ಕಲೆಗಳು ಕಲಿತು ಕೊಂಡಿದ್ದನು. ಬಾಲಕ ವೆಂಕಟಪ್ಪ ನಾಯಕನ ಕಕ್ಕ ಅವನಿಗೆ ಯುದ್ಧದ ಕಲೆಗಳನ್ನು ಕಲಿಸಿಕೊಡುತ್ತಿದ್ದನು. ಒಮ್ಮೆ ಕುದುರೆ ಸವಾರಿ ಮಾಡುವಾಗ ಕಕ್ಕನು ಬೇಕೆಂದೆ ಓಡುವ ಕುದುರೆಯಿಂದ ಅವನನ್ನು ಕೆಳಗೆ ನೂಕಿಬಿಟ್ಟನು, ಧೊಪ್ಪೆಂದು ಕೆಳಗೆ ಬಿದ್ದಬಾಲಕ ವೆಂಕಟಪ್ಪ ನಾಯಕನ ಕೈ ಕಾಲುಗಳು, ಬೆನ್ನು ನೋವಿನಿಂದ, ಹಾಗೂ ಹಣೆಯಿಂದ, ತುಸು ರಕ್ತ ಸ್ರಾವವಾಯಿತು. ಪೆಚ್ಚು ಮೋರೆ ಮಾಡಿಕೊಂಡನು. ಆಗ ಅವನ ಕಕ್ಕ "ಎಲೆ ಹೆಡ್ಡ ಹೀಗೇಕೊ? ನೊವು ಸಾವುಗಳಿಗೆ ಹೆದುರುವವನು ಸಾಮ್ರಾಜ್ಯವನ್ನು ಹೇಗೆ ರಕ್ಷಿಸಿಕೊಳ್ಳುವನು?"[9] ಎಂದು ಹೀಯಾಳಿಸಿದನು ಈ ಮಾತನ್ನು ಕೇಳಿದ ತಕ್ಷಣ ಬಾಲಕನು ಚಂಗನೆ ಹಾರಿ ಕುದುರಿಯನ್ನೇರಿ ಕುಳಿತು ಅದನ್ನು ಓಡಿಸಿದನಂತೆ. ಇಂತಹ ಕೆಚ್ಚೆದೆಯ ಮನೋಭಾವನೆ ಬಾಲ್ಯದಿಂದಲೆ ರಾಜ ವೆಂಕಟಪ್ಪ ನಾಯಕನು ಬೆಳೆಸಿಕೊಂಡಿದ್ದನು.

ಕರ್ನಲ್ ಮೆಡೋಸ್ ಟೇಲರನು ಬಾಲಕ ವೆಂಕಟಪ್ಪ ನಾಯಕನ ಎಲ್ಲಾ ರೀತಿಯ ಹೊಣೆಗಾರಿಕೆಯನ್ನು ಹೊತ್ತು ಅವನ ವಿದ್ಯಾಭ್ಯಾಸಕ್ಕಾಗಿ ಮುರ್ರೆ ಎಂಬ ಡಾಕ್ಟರನನ್ನು ನೇಮಿಸಿದ್ದನು. ಇಂಗ್ಲೀಷ್ ಭಾಷೆಯನ್ನು ಅಭ್ಯಾಸ ಮಾಡಿದ ರಾಜ ವೆಂಕಟಪ್ಪ ನಾಯಕನಿಗೆ ಲೌಕಿಕ ವಿಷಯಗನ್ನು ಅರಿತುಕೊಂಡು, ಸ್ವಾತಂತ್ರ್ಯ ದೇಶಗಳ ಹೋರಾಟದ ಅರಿವಾಯಿತು. ಇಂಗ್ಲೀಷ, ಸಂಸ್ಕೃತ, ಕನ್ನಡ, ತೆಲುಗು, ಮತ್ತು ಫಾರ್ಸಿ ಭಾಷೆಗಳನ್ನು ಸರಿಯಾಗಿ ಕಲಿತುಕೊಂಡನು.

ಒಮ್ಮೆ ರಾಣಿ ಈಶ್ವರಮ್ಮ ಗೃಹ ಬಂಧನದಲ್ಲಿ ರೋಗಪೀಡಿತಳಾದಾಗ ನೋಡಲು ವೆಂಕಟಪ್ಪ ನಾಯಕನನ್ನು ಟೇಲರನು ಸಿಪಾಯಿಗಳ ಜೊತೆಗೆ ಕಳಿಸಿದನು. ತಾಯಿ ರಾಣಿ ಈಶ್ವರಮ್ಮನಿಗೆ ನಮಿಸಿ ನಿಂತುಕೊಂಡನು. ಆಗ ರಾಣಿ ಈಶ್ವರಮ್ಮನು ಮಗನನ್ನು ಕುರಿತು ಈ ರೀತಿ ನುಡಿದಳು "ಕಂದಾ ಅಲ್ಲಿ ನೋಡು ನಿನ್ನ ಹಿರಿಯರ ಭಾವ ಚಿತ್ರಗಳನ್ನು ಅವರ ಮರ್ಯಾದೆಯನ್ನು ಉಳಿಸಬೇಕು, ಆ ಕೆಂಪು ಕೋತಿಗಳಿಂದ ರಾಜ್ಯ ಸೂತ್ರಗಳನ್ನು ಕಸಿದುಕೊಂಡು ರಾಜನಾಗು ಗೋಸಲ ವಂಶದ ವೀರರ ಕೀರ್ತಿಯನ್ನುಳಿಸು"[10] ಎಂದು ರಾಣಿ ಈಶ್ವರಮ್ಮ ತನ್ನ ಮಗನಿಗೆ ಪ್ರೇರೆಪಿಸಿದಳು.

### ವೆಂಕಟಪ್ಪ ನಾಯಕನ ರಾಜ್ಯಾರೋಹಣ

ಲಾರ್ಡ್ ಡಾಲಹೌಸಿಯು 1853ರಲ್ಲಿ ಭಾರತದಲ್ಲಿ ಗರ್ವನರ್ ಜನರಲ್ ಆಗಿ ನೇಮಕಗೊಂಡನು. ಅವನ ಸಂದೇಶದ ಮೇರೆಗೆ ಟೇಲರನು ತಾನೇ ರಾಜಾ ವೆಂಕಟಪ್ಪ ನಾಯಕನಿಗೆ ಪಟ್ಟವನ್ನು ಕಟ್ಟಿಸಿದನು. ಆದರೆ ಪಿಡ್ಡ ನಾಯಕನು ಆ ಕಾರ್ಯಕ್ಕಾಗಿ ಅನೇಕ ಅಡಚಣೆಗಳನ್ನು ತೋರಿಸಿದನು. ಕೊನೆಗೆ ಇಂಗ್ಲೀಷ್ ಸರಕಾರದ ಅಪ್ಪಣೆಯಾಗಿದೆ ಎಂದು ಹೇಳಿ ಅವನನ್ನು ಸಮ್ಮತ ಪಡಿಸಿದರು. ಈ ಕಾರ್ಯದ ಸಿದ್ದತೆಗಳು ಪ್ರಾರಂಭವಾದವು. ರಾಜನ ಆಪ್ತೇಷ್ಟರುಗಳಿಗೆ ಪತ್ರಗಳನ್ನು ಬರೆದು ಕಳಿಸಲಾಯಿತು. ಅರಸು ಮನೆತನದ ಪದ್ಧತಿಯಂತೆ, ಉಡುಗೊರೆಗಳು, ನಾಚು ರಂಗುಗಳು ನಡೆದವು. ಪದ್ಧತಿಯಂತೆ ಉಡುಗೊರೆಗಳು ನಡೆದವು. ಟೇಲರನು ವೆಂಕಟಪ್ಪ ನಾಯಕನನ್ನು ಸಂಸ್ಥಾನದ ಗಾದಿಯ ಮೇಲೆ ಕೂಡಿಸಿದನು. ದರ್ಬಾರದ ಜನರು ತಮ್ಮ ತಮ್ಮ ಮರ್ಯಾದೆಗಳಿಗನುಸರಿಸಿ ಕಾಣ್ಕೆಗಳನ್ನು ಕೊಟ್ಟು ಸಲಾಮು, ಮುಜರೆ

(ವಂದಿಸಿ) ಮಾಡಿದರು. ಸಂಸ್ಥಾನದ ಎಲ್ಲ ಬಂಧು ಬಾಂಧವರಿಗೆ ಸಂತೋಷವಾಯಿತು. ರಾಜಕೀಯ ದರ್ಬಾರನ್ನು ನೆರೆಯಿಸಿ ರಾಜನ ಕೊರಳೊಳಗೆ ಹೂ ಮಾಲೆಯನ್ನು ಹಾಕಿ ಟೇಲರನು ರಾಜ ಮುದ್ರೆಯನ್ನು ರಾಜನಿಗೆ ಕೊಟ್ಟು ಅರಸನಿಗೆ ಬುದ್ಧಿವಾದವನ್ನು ಹೇಳಿದನು. ಆಂಗ್ಲರಿಗೂ ನಿಜಾಮನಿಗೂ ವಿಧೇಯನಾಗಿರಲು ಹೇಳಿ ತಾನು ಸುರುಪುರವನ್ನು ಬಿಟ್ಟು ಹೈದರಾಬಾದಿಗೆ ತೆರಳಿದನು.

"Women, wealth and wine are main causes for the failure of a man" ಎಂಬಂತೆ ರಾಜಾ ವೆಂಕಟಪ್ಪ ನಾಯಕನು ಇದರಿಂದ ಹೊರತಾಗಿರಲಿಲ್ಲ, ಇದರಿಂದ ಅವನ ಅವನತಿ ಪ್ರಾರಂಭವಾಯಿತು, ರಾಜ್ಯ ಸೂತ್ರ ಬಂದ ಕೂಡಲೆ ರಾಜಾ ವೆಂಕಟಪ್ಪ ನಾಯಕನು ತನ್ನ ತಂದೆಗೆ ಸಂಬಂಧಿಸಿದ ಓರ್ವ ವೇಶ್ಯಾಂಗನೆಯ ಮಗಳನ್ನು ಬಲತ್ಕಾರದಿಂದ ವಶಮಾಡಿಕೊಂಡು ಅವಳನ್ನು ಮದುವೆಯಾಗಲೂ ರಾಜ ಭಂಡಾರದ ಹಣವನ್ನು ಉಪಯೋಗಿಸಿ ದುಂದುವೆಚ್ಚ ಮಾಡಿದನು. ಈ ರೀತಿಯಾಗಿ ಸುರುಪುರ ಸಂಸ್ಥಾನದ ರಾಜ ಭಂಡಾರ ಖಾಲಿಯಾಗಿ, ಸೈನಿಕರಿಗೆ ಕೊಡಬೇಕಾಗಿರುವ ಸಂಬಳ ಸಹಿತ ರಾಜನು ಬಾಕಿ ಉಳಿಸಿದನು. ಇದರಿಂದ 12 ಸಾವಿರ ಬೇಡ ಸೈನಿಕರು ವೆಂಕಟಪ್ಪ ನಾಯಕನಿಂದ ಅಸಂತುಷ್ಟರಾದರು. ಹೇಗಾದರೂ ಪರಸ್ಥಿತಿಯನ್ನು ಸುಧಾರಿಸಲು ರಾಜನು ಸಾಕಷ್ಟ ಪ್ರಯತ್ನವನ್ನು ಮಾಡಿದನು ಕೊನೆಗೆ ತನ್ನ ಆಸ್ಥಾನದಲ್ಲಿ ಹಲವಾರು ವರ್ಷ ಸೇವೆಸಲ್ಲಿಸಿದ ಅನುಭವವುಳ್ಳ ನೌಕರರನ್ನು ಬದಲಿಸಿ ಬೇರೆ ಯವರನ್ನು ನೇಮಕ ಮಾಡಿಕೊಳ್ಳುತ್ತಿದ್ದನು. ಅದೇ ವೇಳೆಗೆ ಮದ್ಯದ ವ್ಯಸನ, ಸ್ತ್ರೀಲೊಲುಪತೆ ಮುಂತಾದವುಗಳು ಅರಸನಲ್ಲಿ ಮನೆ ಮಾಡಿಕೊಂಡವು. ಇದೇ ಕಾಲಕ್ಕೆ ದೇಶದಲ್ಲಿ ನಾಲ್ಕು ಕಡೆ ಬ್ರಿಟಿಷರ ವಿರುದ್ದ ಬಂಡಾಯವೆದ್ದಿತ್ತು. ಸಂಸ್ಥಾನದಲ್ಲಿ ಹಿರಿಯ ಕಾರಕೂನನನ್ನು ತೆಗೆದು ಹಾಕಿ ಆ ಸ್ಥಾನದಲ್ಲಿ ಅನುಭವವಿಲ್ಲದವರನ್ನು ನೇಮಕಮಾಡಿಕೊಂಡನು. ಅರ್ಥಿಕ ಪರಸ್ಥಿತಿಯಿಂದ ಸುರುಪುರ ಸಂಸ್ಥಾನಬೆಂದು ಹೋಗಿತ್ತು. ಅರಸನು ಇದನ್ನು ಸರಿಪಡಿಸುವದರಲ್ಲಿ ಎಣಗು ತ್ತಿದ್ದನೇ ವಿನಃ ಪ್ರಜೆಗಳ ಬಗ್ಗೆ ಮತ್ತು ಹೊರಗಿನ ವೈರಿಗಳ ಧಾಳಿಗಳ ಬಗ್ಗೆ ಗಮನ ಹರಿಸುತ್ತಿರಲಿಲ್ಲ, ಉತ್ತರ ಭಾರತದಲ್ಲಿ ಬ್ರಿಟಿಷರನ್ನು ದೇಶ ಬಿಟ್ಟು ಹೊರ ಹಾಕಬೇಕೆಂದು ತೀವ್ರ ಹೋರಾಟ ಪ್ರಾರಂಭವಾಗಿತ್ತು.

## ೧೮೫೭ರ ದಂಗೆ ಮತ್ತು ರಾಜಾ ನಾಲ್ವಡಿ ವೆಂಕಟಪ್ಪ ನಾಯಕ

ಟಿಪ್ಪು ಸುಲ್ತಾನನಿಂದಲೂ, ಆಂಗ್ಲರಿಂದಲೂ ಅಪಜಯವನ್ನು ಪಡೆದವರು ಸುರುಪುರಕ್ಕೆ ಬಂದರು. ಅವರೆಲ್ಲರೂ ರಾಜಾ ವೆಂಕಟಪ್ಪ ನಾಯಕನಿಗೆ ಸಹಾಯ ಮಾಡಲು ವಾಗ್ದಾನ ಮಾಡಿದರು. ಸ್ವಲ್ಪದಿನದಲ್ಲಿಯೇ ಅಪಾರವಾದ ಸೈನ್ಯವು ಸಜ್ಜಾಗಿ ಬ್ರಿಟಿಷರ ವಿರುದ್ಧ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ದವಾಯಿತು. ವೀರ ರಾಣಿ ಚನ್ನಮ್ಮ ಮತ್ತಿತರರು ಸ್ವಾತಂತ್ರ್ಯ ಯುದ್ಧದಲ್ಲಿ ಬಲಿಯಾಗಿದ್ದರು. ಸುರುಪುರ ಸಂಸ್ಥಾನದ ಕ್ರಾಂತಿ ಕಾರಿ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ಬ್ರಿಟೀಷರ ವಿರುದ್ಧ ರೊಚ್ಚಿಗೆದ್ದು ಅವರ ಆಡಳಿತದ ಬೇರು ಸಹಿತ ಕಿತ್ತಿ ಹಾಕಲು ಕಂಕಣ ತೊಟ್ಟನು.

ಸುರುಪುರದ ದೊರೆ ರಾಜಾ ನಾಲ್ವಡಿ ವೆಂಕಟಪ್ಪ ನಾಯಕನು ಬ್ರಿಟಿಷರ ವಿರುದ್ಧ ಹೋರಾಡಲು ಯತ್ನಿಸುತ್ತಿರುವದಾಗಿ, ಮತ್ತು ಕೂಲಿಕಾರ ಸಿಪಾಯಿಗಳಾದ ರೋಹಿಲೆ ಮತ್ತು ಅರಬ್ಬರನ್ನು ತನ್ನ ನೌಕರಿಯಲ್ಲಿಟ್ಟುಕೊಂಡದ್ದು, ಇತ್ಯಾದಿ ದೂರುಗಳು ಹೈದರಾಬಾದಿನ ರೆಸಿಡೆಂಟನ ದ್ವಾರಾ ಗವರ್ನರ್ ಜನರಲ್ಲನಿಗೆ ತಲುಪಿತು. ಈ ಎಲ್ಲಾ ವಿಷಯಗಳಿಗೆ ರೆಸಿಡೆಂಟನು ವೆಂಕಟಪ್ಪ ನಾಯಕನಿಗೆ ವಿವರಣೆಯನ್ನು ಕೇಳಿದನು. ಗವರ್ನರ್ ಆಜ್ಞಾಪತ್ರಕ್ಕೆ ದೊರೆಯ ಉತ್ತರ ಈ ರೀತಿಯಿದೆ, "ನಾನೇನು ಅಂತಹ ತಪ್ಪು ಮಾಡಿಲ್ಲ, ಮಾಡುವುದೂ ಇಲ್ಲ"[11] ಅದೇ ವೇಳೆಗೆ ಬ್ರಿಟಿಷರಿಂದ ಅವಮಾನಿತನಾದ ನಾನಾ ಸಾಹೇಬನು ದಕ್ಷಿಣ ಭಾರತಕ್ಕೆ ಬಂದು ಎಲ್ಲಾ ಸಂಸ್ಥಾನಿಕರನ್ನು ಸಂಘಟಿಸಲು ಯತ್ನಿಸಿದ ಅಲ್ಲದೇ ಅವರನ್ನು ವಿಚಾರಿಸಲಾಗಿ ಅವರ ಕೈಗಳು ವೀರ ಬೇಡರನ್ನು ತೋರಿಸಿದವು. ನಾನಾ ಸಾಹೇಬ ಗುಪ್ತವಾಗಿ ವೆಂಕಟಪ್ಪ ನಾಯಕನೋಡನೆ ಸಮಾಲೋಚನೆ ಗೈದನು. ನಾನಾ ಸಾಹೇಬನಿಂದ ಪ್ರೇರಿತನಾದ ರಾಜ ವೆಂಕಟಪ್ಪ ನಾಯಕನು ಒಳಗಿಂದೊಳಗೆ ಸಿಪಾಯಿಗಳನ್ನು ಭರ್ತಿ ಮಾಡತೊಡಗಿದನು. ಬ್ರಿಟಿಷರನ್ನು ತಾಯ್ನಾಡಿನಿಂದ ಹೊರಹಾಕಲು ಮದ್ದುಗುಂಡುಗಳ ಸಂಗ್ರಹ ಕಾರ್ಯ ಭರದಿಂದ ನಡೆಯಿತು. ಉತ್ತರ ಭಾರತದಲ್ಲಿ ೧೮೫೭ರ ಸ್ವಾತಂತ್ರ್ಯದ ಕಿಡಿ ಬಹಳ ಬಿರುಸಾಗಿ ನಡೆದಿತ್ತು.

ಬ್ರಿಟಿಷರು ದಕ್ಷಿಣ ಸಂಸ್ಥಾನಿಕರ ಚಲನೆ ವಲನೆಯನ್ನು ಗಮನಿಸುತ್ತಿದ್ದರು. ರಾಜವೆಂಕಟಪ್ಪ ನಾಯಕನ ಚಟುವಟಿಕೆಗಳ ಮೇಲೆ ವಕ್ರ ದೃಷ್ಟಿ ಬಿದ್ದಿತು. ನಾಲ್ಕು ದಿಕ್ಕುಗಳಿಂದಲೂ ಸೈನ್ಯವನ್ನು

ಬರ ಮಾಡಿಕೊಂಡು ಸುರುಪುರ ಸಂಸ್ಥಾನವನ್ನು ಮುತ್ತಿದರು. ಆಗ ರಾಜ ವೆಂಕಟಪ್ಪನ ಸಿಡಿಮದ್ದು ಇನ್ನು ಕಾದಿರಲಿಲ್ಲ. ಕೋವಿಯಲ್ಲಿ ಇನ್ನು ಮದ್ದಿನ ಪುಡಿ ತುಂಬಿರಲಿಲ್ಲ. ಕರ್ನಲ್ ಹ್ಯೂಗ್ ಮತ್ತು ವಿಂಡ್ ಹ್ಯಾಮ್ ಕಬಡಗೇರಾ ಕೋಟೆಯ ದ್ವಾರದ ಮೂಲಕ ನಗರದಲ್ಲಿ ನುಗ್ಗಿದರು. ಬೇಡರ ಸಾಮರ್ಥ್ಯಕ್ಕೆ ಇದೊಂದು ಪರೀಕ್ಷಾ ಕಾಲವೆಂದು ಭಾವಿಸಿ ರಾಜ ವೆಂಕಟಪ್ಪ ನಾಯಕನು ಹುಲಿಯಂತೆ ಗರ್ಜಿಸುತ್ತಾ, ತನ್ನ ಸೈನಿಕರಿಗೆ ಪ್ರೇರೆಣೆ ಗೈಯುತ್ತಾ, ಸಿಂಹದ ಮರಿಯಂತೆ ವೈರಿಗಳ ಮೇಲೆ ಎರಗಿದನು. ಕ್ಯಾಪ್ಟನ್ ನ್ಯೂಬೇಯನ್ನು ಕೊಲ್ಲಲಾಯಿತು, ಸ್ಟೂಆರ್ಟನ್‌ನ ಮೂಳೆ ಮುರಿದು ಮೂರ್ಛೆಗೊಳಿಸಲಾಯಿತು. ಬೇಡ ವೀರರ ಮುಂದೆ ಆಂಗ್ಲರ ಆಟ ನಡೆಯಲಿಲ್ಲ. ಅಭೇದ್ಯವಾದ ಸುರುಪುರದ ಕೋಟೆಯು ಆಂಗ್ಲರಿಗೆ ಪ್ರಶ್ನೆ ಯಾಗಿಯೇ ಉಳಿಯಿತು. ಎಷ್ಟೋ ಆಂಗ್ಲರ ಸೈನಿಕರೂ, ನಿಜಾಮನ ಸೈನಿಕರು ಯುದ್ಧದಲ್ಲಿ ಸತ್ತರು.

ಅಸೂಯ, ಅಂತಃ ಕಲಹ, ಲಂಚಗುಳಿತನ, ನಮ್ಮ ದೇಶಕ್ಕೆ ಅಂಟಿಕೊಂಡ ಜಾಡ್ಯಗಳು. ಇದರಿಂದ ವೆಂಕಟಪ್ಪ ನಾಯಕನ ಸೈನ್ಯವು ಸೋಲಬೇಕಾಯಿತು. ಹೆಚ್ಚಿನ ಸೈನ್ಯವನ್ನು ತರಲು ಗುಪ್ತವಾಗಿ ವೆಂಕಟಪ್ಪ ನಾಯಕನು ಹೈದರಾಬಾದಿಗೆ ಹೋದನು, ಆದು ಅಫಜಲು ದ್ದೌಲನ ಕಾಲ, ಇವನು ಸುರುಪುರದ ಮಹಾದ್ವೇಷಿ, ಅದ್ದರಿಂದ ವೆಂಕಟಪ್ಪ ನಾಯಕನನ್ನು ಬಂಧಿಸಿ ಬ್ರಿಟಿಷರಿಗೆ ಒಪ್ಪಿಸಿದನು.

ವೆಂಕಟಪ್ಪ ನಾಯಕನನ್ನು ಟೇಲರನು ಬಂಧನದಲ್ಲಿ ಕಂಡನು. ಬಂಧನದಲ್ಲಿರುವಾಗಲು ನಾಯಕನು "ಅಪ್ಪಾಜೀ ನಾನೇನೂ ತಪ್ಪು ಮಾಡಿಲ್ಲ ವೀರನಂತೆ ಸಾಯಲು ಸಿದ್ಧ, ಹೇಡಿಯಂತೆ ಬಾಳುವದಿಲ್ಲ"[12]. ಹೈದರಾಬಾದಿನಲ್ಲಿ ರೆಸಿಡೆಂಟನು ನಾಯಕ ವೆಂಕಟಪ್ಪನನ್ನು ಭೇಟಿಯಾಗಲೂ ಬರುವನೆಂದು ತಿಳಿಸಿದನು, ಆಗ ವೆಂಕಟಪ್ಪ ನಾಯಕನು ಸ್ವಾಭಿಮಾನವನ್ನು ಕುರಿತು ಈ ರೀತಿ ಹೇಳುತ್ತಾನೆ.

"ನಾನು ನನ್ನ ಜೀವನದ ಸಲುವಾಗಿ ಬೇಡಿಕೊಳ್ಳಲೆಂದು ರೆಸಿಡೆಂಟನ ಇಚ್ಛೆ ಇದ್ದಿರಬಹುದು, ಅದೆಂದಿಗೂ ಆಗದ ಮಾತು, ಜೀವವನ್ನು ಉಳಿಸಿಕೊಳ್ಳಲು ಹೇಡಿಯಂತೆ ನಾನು ಅವರನ್ನು ಬೇಡಿಕೊಳ್ಳಲಾರೆನು. ಮತ್ತು ನನ್ನವರೊಡನೆ ವಿಶ್ವಾಸ ಘಾತುಕತನ ಮಾಡಲಾರೆನು"[13].

ರಾಜ ವೆಂಕಟಪ್ಪನಾಯಕನ ಮಾತುಗಳನ್ನು ಟೇಲರನ್ನು ರೆಸಿಡೆಂಟನಿಗೆ ತಿಳಿಸಲು, ರಾಜನ ವಿಷಯದಲ್ಲಿ ಕೇಳಿದ ಸಂಗತಿಗಳಿಗಿಂತ ಈ ಮಾತುಗಳು ಮಾತ್ರ ಅವನ ಮನಸ್ಸಿನಲ್ಲಿ ನಟ್ಟಂತಾಯಿತು. ರಾಜನ ಧೈರ್ಯ ಮತ್ತು ದೇಶ ಪ್ರೇಮವನ್ನು ಮೆಚ್ಚಿಕೊಂಡು ರೆಸಿಡೆಂಟನು ಈ ರೀತಿ ನುಡಿದನು. "ಪಾಪ ಹುಡುಗನಲ್ಲಿ ಇನ್ನು ಧೈರ್ಯವಿದೆ, ನೀನು ಹೇಳಿದ ಮಾತುಗಳನ್ನು ನಾನು ಎಂದಿಗೂ ಮರೆಯಲಾರೆ, ಎಂದನಂತೆ"[14]. ಬಂಧನದಲ್ಲಿ ಇರಿಸಿದ್ದನ್ನು ಸಹಿಸದ ವೆಂಕಟಪ್ಪ ನಾಯಕನು ಈ ರೀತಿ ಗರ್ಜಿಸುತ್ತಾನೆ. "ನನ್ನನ್ನು ಬೇಕಾದರೆ ತೊಪಿನ ಬಾಯಿಗೆ ಕಟ್ಟಿದರೆ ನಾನು ಅಂಜುವದಿಲ್ಲ, ಒಂದೇ ಮಾತು ಕಳ್ಳನಂತೆ ನನ್ನನ್ನು ಗಲ್ಲಿಗೆ ಹಾಕಬಾರದು, ಗಲ್ಲಿಗೇರಿಸಲ್ಪಡು ವಂತಹ ಕೆಲಸವೇನು ನಾನು ಮಾಡಿಲ್ಲ, ರೆಸಿಡೆಂಟನಿಂದ ನಾನು ಬಯಸುವ ಅನುಗ್ರಹ ಇಷ್ಟೆ ಎಂದು ರೆಸಿಡೆಂಟನಿಗೆ ಹೇಳು" [15],ಎಂದು ಟೇಲರನಿಗೆ ಬೇಡಿಕೊಂಡನು.

ಹೈದರಾಬಾದಿನ ರೆಸಿಡೆಂಟನಲ್ಲಿ ವಿಚಾರಣೆ ನಡೆಯಿತು. ಸೈನ್ಯ ನ್ಯಾಯಾಲಯದಲ್ಲಿ ವೆಂಕಟಪ್ಪ ನಾಯಕನ ರಾಜ ದ್ರೋಹದ ಕಾರಣ ಮರಣ ದಂಡನೆ ವಿಧಿಸಲಾಯಿತು, ಟೇಲರನ ಪ್ರಯತ್ನದಿಂದಾಗಿ ಈ ನಾಲ್ಕು ವರ್ಷಗಳ ಬಂಧನವಾಗಿ ತೀರ್ಮಾನವಾಯಿತು. ದೊರೆಯನ್ನು ಮದ್ರಾಸಿನ ಸಮೀಪದ ಚೆಂಗಲ್ ಪೇಟೆಗೆ ಕರೆದುಕೊಂಡು ಹೋದರು .

ಬ್ರಿಟೀಷ್ ಅಧಿಕಾರಿಗಳ ರಕ್ಷಣೆಯಲ್ಲಿ ಪ್ರಯಾಣ ಸಾಗಿತು ಬ್ರಿಟಿಷರು ಇಷ್ಟು ಹೊತ್ತಿಗಾಗಲೇ ಸ್ವಾತಂತ್ರ್ಯ ವೀರರಿಂದ ಸಾಕಷ್ಟು ಕಹಿಯನ್ನುಂಡಿದ್ದರು. ಅವರ ನಾಯಕನಾದ ಕರ್ನಾಟದ ಕ್ರಾಂತಿಯ ಹುಲಿ, ವೀರಾಧಿವೀರ ರಾಜ ವೆಂಕಟಪ್ಪ ನಾಯಕನು ಜೀವಿಸಿದ್ದರೆ ಕೇಡು ತಪ್ಪಿದ್ದಲ್ಲ ವೆಂದು ಮನಗಂಡು ಮೊದಲನೇ ಮುಕ್ಕಾಂ ಎಂದರೆ ಕರ್ನೂಲ್‌ನಲ್ಲಿ ಆತನನ್ನು ಗುಂಡು ಹಾಕಿ ಕೊಲ್ಲಲಾಯಿತು(ಭಾವಚಿತ್ರ ೩.೧೨.ನೋಡಿ)ನಿಜಾಂಶ ಬಯಲಿಗೆ ಬಾರದಂತೆ ಯಾರು ಇಲ್ಲದ ಸಮಯದಲ್ಲಿ ಪಿಸ್ತೂಲು ಪರೀಕ್ಷಿಸುತ್ತಿದ್ದ ನಾಯಕನು ಅದರ ಕುದುರೆಯನ್ನು ಅದುಮಿದಾಗ ಗುಂಡು ಹಾರಿ ಮೃತಪಟ್ಟನೆಂದು ಇತಿಹಾಸ ಸೃಷ್ಠಯಾಯಿತು. ಈ ರೀತಿ ರಾಜ ವೆಂಕಟಪ್ಪ ನಾಯಕನು ವೀರ ಸ್ವರ್ಗ ಹೊಂದಿದನು, ಸ್ವಾತಂತ್ರ್ಯ ದೇವಿಯ ಅಡಿದಾವರೆಗಳಿಗೆ ತನ್ನ ಜೀವನ ಪುಷ್ಪವನರ್ಪಿಸಿ ಅಮರನಾದನು.

ರಾಜ ವೆಂಕಟಪ್ಪ ನಾಯಕನು ನಾಡಾಡಿಗರ ಮಗನೇ ? ಅವನು ಅರಸು ಸಿಂಹ ವೆಂಬುದನ್ನು ನಾವೆಂದೂ ಮರೆಯ ಕೂಡದು, ಸ್ವಾತಂತ್ರ್ಯ ಸಂಗ್ರಾಮಕ್ಕೆ ನಾಂದಿಹಾಡಿದ ಮಹಾಪುರುಷ, ಭಾರತದ ಇತಿಹಾಸದ ಪುಟಗಳಲ್ಲಿ ಸದಾ ಜೀವಂತವಾಗುಳಿದು, ನಾವು ಜೀವಂತಿಕೆಯನ್ನು ಸಾಧಿಸಲು ಸ್ಫೂರ್ತಿ ಪುಂಜದ ಪರುಷ ಮಣಿಯಾಗಿದ್ದಾನೆ.

**ಜ್ಯೋತಿ**

ಕೆಚ್ಚೆದೆಯ ಕನ್ನಡದ
ಕುವರರಿಗೆ ಈ ನಾಡು
ಹೆಸರು ವಾಸಿಯೆ ದಿಟದಿ
ರಾಷ್ಟ್ರಪ್ರೇಮದ ಹುರುಪು
ಧಮನಿ ಧಮನಿಗಳಲ್ಲಿ
ಓತ ಪ್ರೇತವು ಆಗಿ
ವೀರತನ, ಶೂರತನ
ಧೀರತನ - ದಯಕೆಲ್ಲ
ತವನಿಧಿಯು ತಾನಾದ
ಸುರಪುರದ ದೊರೆ
ವೆಂಕಟಪ್ಪನಾಯಕ
ಹಚ್ಚಿದಜ್ಯೋತಿಯದು
ಬೆಳಗುತಿದೆ ದಿನನಿತ್ಯ
ತಿರುಪತಿಯ ತಿಮ್ಮಪ್ಪ
ವರವಿತ್ತು ಸಲಹೆಲೆನ
ಬಂದು ನೆಲೆಸಿದನಿಲ್ಲಿ
ಸಂಸ್ಕೃತಿ , ಚರಿತ್ರೆ
ಮಾನವತೆ ಇರುವತನಕ
ರಾಜವೆಂಕಟಪ್ಪನಾಯಕ
ಅಮರತ್ವ ಪಡೆದಿಹರು
ಸುರಪುರದ ಗುಡ್ಡದ

ದೊರೆಗಳ ಸಾಹಸಕ

ನಿಷ್ಠೆಯ ಪ್ರೀತಿಗೆ

ಸಾಕಾರ ವೆನಿಸಿಹುದು.

ಶ್ರೀ ರಾಘವೇಂದ್ರ ಪಟವಾರಿ.
ಪ್ರಾಂಶುಪಾಲರು

**ಉಪಸಂಹಾರ**

ರಾಜಕೀಯದಲ್ಲಿ ಯಾರು ವೈರಿಗಳು ಅಲ್ಲ, ಯಾರು ಸ್ನೇಹಿತರಲ್ಲ ಎನ್ನುವ ಹೇಳಿಕೆಯಂತೆ ವೆಂಕಟಪ್ಪನಾಯಕರ ಜೀವನದಲ್ಲಿ ತನ್ನ ಸಂಬಂಧಿಕರು ಮತ್ತು ಸೈನಿಕರು ಮೋಸ ಮಾಡಿದರು. ಇವರ ಅಹಂಕಾರ ಮತ್ತು ಸರ್ವಾಧಿಕಾರ ನೀರಿಯು ಇವರ ಅವನತಿಗೆ ಕಾರಣವಾಯಿತು. ಆದ್ದರಿಂದ ರಾಜ್ಯವನ್ನು ಆಳುವವರು ದೈಹಿಕವಾಗಿ ಬಲಿಷ್ಠರಾದರೆ ಸಾಲದು ಅದರ ಜೊತೆಗೆ ರಾಜಕೀಯ ತಾಂತ್ರಿಕತೆಯನ್ನು ತಿಳಿದುಕೊಂಡಿರಬೇಕು. ಎಂತಹ ಕಷ್ಟದಲ್ಲಿ ಸಹಿತ ರಾಜ್ಯವನ್ನು ಮತ್ತು ಪ್ರಜೆಗಳನ್ನು ಪಾರು ಮಾಡುವ ಕೌಶಲ್ಯತೆಯನ್ನು ಬೆಳೆಸಿಕೊಂಡಿರಬೇಕು. ರಾಜ್ಯವನ್ನು ಆಳುವುದು ಸಿಂಹಾಸನದ ಮೇಲೆ ಕುಳಿತು ಎಂದು ಭಾವಿಸಬಾರದು, ಪ್ರಜೆಗಳ ಮಧ್ಯ ಜೀವಿಸಬೇಕು. ದಬಜ ಯೋಗಕ್ಷೇಮವನ್ನು ಕಾಪಾಡಬೇಕು. ಅಂತಹ ಚಾಣಕ್ಷತನವನ್ನು ಒಂದು ವೇಳೆ ವೆಂಕಟಪ್ಪನಾಯಕರು ಬೆಳೆಸಿಕೊಂಡಿದ್ದಾರೆ. ಅವರ ಅಂತ್ಯ ಅಷ್ಟು ಬೇಗ ಆಗುತ್ತಿರಲಿಲ್ಲ.

## ೩.೬. ವ್ಯಕ್ತಿ ಅಧ್ಯಯನ

### ೩.೬.೧. ಬ್ಯಾರಿಸ್ಟರ್ ಶ್ರೀ ರಾಜ ವೆಂಕಟಪ್ಪ ನಾಯಕನ ವ್ಯಕ್ತಿ ಅಧ್ಯಯನ

ಕನ್ನಡ ನಾಡು ಗಂಡುಗಲಿಗಳ ಬೀಡು, ಕೆಚ್ಚದೆಯ ಶೂರರ ನೆಲೆವೀಡು. ಕನ್ನಡ ನಾಡಿನ ಉತ್ತರ ಕರ್ನಾಟಕ ಗಂಡು ಮಟ್ಟಿದ ನೆಲವೆಂದೇ ಪ್ರಖ್ಯಾತಿಪಡೆದಿದೆ. ಅದರಲ್ಲಿ ಕಲಬುರ್ಗಿಯ ಸುರಪುರದ ಸಂಸ್ಥಾನವಂತೂ ಎಂಟೆದೆಯ ಭಂಟರ ಭೂಮಿಯೆಂದು ಖ್ಯಾತಿ ಪಡೆದಿದೆ. ಬ್ರಿಟಿಷರ ದರ್ಪದ, ದುರಾಡಳಿತ, ದೌರ್ಜನ್ಯದ ಅಟ್ಟಹಾಸವನ್ನುಮಟ್ಟಹಾಕುವಲ್ಲಿ ಸುರಪುರದ ಸಂಸ್ಥಾನ ದಿಟ್ಟತನದಿಂದ ಹೋರಾಟ ಕೈಗೊಂಡಿದೆ.

ಕೆಂಪು ಮುಖದ ಆಂಗ್ಲರ ಅಟ್ಟಹಾಸದ ತರುವಾಯ ಈ ನಾಡಿನಲ್ಲಿ ನಿಜಾಮನ ದುಷ್ಟ ಆಡಳಿತ ಮೇರೆ ಮೀರಿ ನಡೆಯಿತು. ಅನ್ಯಾಯ, ಅಸಮಾನತೆ, ದೌರ್ಜನ್ಯ, ದುರ್ನಡತೆಗಳಿಂದ ನಿಜಾಮ ಅಟ್ಟಹಾಸದಿಂದ ಮೆರೆಯುತ್ತಿದ್ದ. ಸುರಪುರ ಸಂಸ್ಥಾನದ ದೊರೆಗಳು ನಿಜಾಮನಿಗೆ ತಕ್ಕ ಪಾಠ ಕಲಿಸಲು ಕಂಕಣ ಬದ್ದರಾಗಿ ನಿಂತರು. ಶೂರರ ಎದೆಯಾಳದಲ್ಲಿ ರಾಷ್ಟ್ರಪ್ರೇಮದ ಕಿಚ್ಚನ್ನು ಹಚ್ಚಿದರು. ರಾಷ್ಟ್ರೀಯತೆಯ ಅಸ್ತ್ರ ಹಿಡಿದು ಜನತೆಯನ್ನು ಜಾಗೃತಗೊಳಿಸಿದರು. ಬ್ರಿಟಿಷರ ರುಂಡ ಚಂಡಾಡಿದ ಈ ಗಂಡುಗಲಿಗಳಿಗೆ ನಿಜಾಮನ ಹಿಂಡನ್ನು ಸೋಲಿಸಲು ಬಹಳ ಕಾಲ ಬೇಕಾಗಲಿಲ್ಲ. ಈ ನಾಡಿನ ಪರಕ್ರಮಿಗಳ ಕಲಿತನಕ್ಕೆ ನಿಜಾಮ ತಲೆ ಬಾಗಲೇ ಬೇಕಾಯಿತು. ಅಂತಹ ಅಪ್ರತಿಮ, ಅನುಪಮ ವೀರ ಸಂಸ್ಥಾನವಾದ ಸುರಪುರದ ದೊರೆಗಳ ವಂಶದಲ್ಲಿ ರಾಜ ವೆಂಕಟಪ್ಪ ನಾಯಕರು ಜನ್ಮವೆತ್ತಿರುವುದು ಯೋಗಾಯೋಗವೆಂದೇ ಹೇಳಬೇಕು.

**ರಾಜ ವೆಂಕಟಪ್ಪ ನಾಯಕರ ಬಾಲ್ಯ ಜೀವನ** (ಭಾವಚಿತ್ರ ೩.೧೩ನೋಡಿ)

ರಾಜ ಕೃಷ್ಣಪ್ಪ ನಾಯಕ ಮತ್ತು ರಾಣಿ ಶೇಷಮ್ಮನವರ ಗರ್ಭದಲ್ಲಿ ರಾಜ ವೆಂಕಟಪ್ಪ ನಾಯಕ ೨೯-೦೧-೧೯೧೦ರಲ್ಲಿ ಸುರಪುರದ ವೀರ ಸಂಸ್ಥಾನದಲ್ಲಿ ಗೋಸಲ ವಂಶದ ಶೂರ ದೊರೆಗಳ ಮನೆತನದಲ್ಲಿ ಜನಿಸಿದನು. ರಾಜ ವೆಂಕಟಪ್ಪ ನಾಯಕರಿಗೆ ದಿಟ್ಟತನ, ಶೂರತನ, ಅಪ್ರತಿಮ ಕ್ರಾಂತಿಕಾರಿ ವಿಚಾರಗಳು ಹುಟ್ಟನಿಂದಲೆ ಅಂಟಿಕೊಂಡು ಬಂದಿದ್ದವು. ಸ್ವಾತಂತ್ರ್ಯ, ದೇಶಪ್ರೇಮ ಹಾಗು ಭಾವೈಕ್ಯತೆಯ ಭಾವನೆಗಳು ನಾಯಕರಲ್ಲಿ ರಕ್ತಗತ ವಾಗಿದ್ದವು. ಬ್ರಿಟಿಷರ ಕಪಿ ಮುಷ್ಠಿಯಿಂದ, ದೌರ್ಜನ್ಯದ ದುರಾಡಳಿತದಿಂದ ದೂರವಾಗುವ ಕುರಿತು ಬಾಲ್ಯದಲ್ಲಿಯೇ ಚಿಂತಿಸುತ್ತಿದ್ದರು **"ಬೆಳೆಯುವ ಪೈರು ಮೊಳಕೆಯಲ್ಲಿ ಕಾಣು"** ಎಂಬಂತೆ ಬಾಲಕರಾದ ರಾಜ ವೆಂಕಟಪ್ಪ ನಾಯಕರ ಮೈಯಲ್ಲಿ ಹರಿಯುವ ರಕ್ತ ರಾಜ ವಂಶದ್ದಾಗಿದ್ದು ಹಲವಾರು ಉನ್ನತ ವಿಚಾರಗಳು ಅವರಲ್ಲಿ ಕರಗತ ವಾಗಿದ್ದವು. ಅರಸು ಕುಮಾರರಿಗೆ ಅವಶ್ಯಕವಾದ ಎಲ್ಲಾ ಅರ್ಹತೆಗಳು ಅವರಲ್ಲಿ ಕಂಡು ಬರುತ್ತಿದವು. ಓದು ಬರಹ ಆಟ-ಓಟಗಳಲ್ಲಿ ಸ್ಪರ್ಧಾತ್ಮಕ ಮನೊಭಾವನೆ ವ್ಯಕ್ತವಾಗುತ್ತಿತ್ತು. ಇವರ ಆರಂಭದ ಶಿಕ್ಷಣವು ಸುರಪುರ ಸಂಸ್ಥಾನದ ದರ್ಬಾರ ಶಾಲೆಯಲ್ಲಿಯೇ ಪ್ರಾರಂಭವಾಯಿತು. ಇವರ ಪ್ರತಿಭೆ ಮತ್ತು ಬುದ್ಧಿವಂತಿಕೆಯನ್ನು ಕಂಡು ಶಿಕ್ಷಕರು ಬೆಚ್ಚಿ ಬೆರೆಗಾದರು.

ನಾಯಕರು ೧೩ನೇ ವಯಸ್ಸಿನಲ್ಲಿ ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸುರಪುರ ಸಂಸ್ಥಾನದಲ್ಲಿ ಮುಗಿಸಿಕೊಂಡು ಉನ್ನತ ವ್ಯಾಸಂಗಕ್ಕಾಗಿ ನಿಜಾಮನ ಸಂಸ್ಥಾನವಾದ ಹೈದ್ರಾಬಾದಿಗೆ ತೆರಳಿದರು. ಅಲ್ಲಿ ಇವರು ಸೇಂಟ್ ಜಾರ್ಜ್ ಗ್ರಾಮರ್ ಹೈಸ್ಕೂಲ್ ನಲ್ಲಿ ಸೇರಿ ಕೊಂಡರು. ಇವರು ವಿಶ್ವದ ಹಲಾವರು ಹೋರಾಟಗಾರರ ಮತ್ತು ದೇಶಪ್ರೇಮಿಗಳ ಜೀವನ ಚರಿತ್ರೆಯನ್ನು ಓದಿಕೊಂಡು ಅವರ ಕ್ರಾಂತಿಕಾರಿ ವಿಚಾರಗಳನ್ನು ಜೀವನದಲ್ಲಿ ಅಳವಳಸಿಕೊಂಡರು. "To remove the Indian Problems by good Education ". ಎಂಬುವದು ರಾಜ ವೆಂಕಟಪ್ಪ ನಾಯಕ ಸಿದ್ದಾಂತವಾಗಿತ್ತು. ಅದರ ಜೊತೆಗೆ ರಾಜರ ಮೇಲೆ ಅಮೇರಿಕ ಮತ್ತು ಫ್ರೆಂಚ್ ಸ್ವಾತಂತ್ರ್ಯದ ಘೋಷಣೆಗಳಾದ ಸ್ವಾತಂತ್ರ್ಯ, ಸಮಾನತೆ ಮತ್ತು ಸಹೋದರತ್ವಗಳು ಹೆಚ್ಚು ಪ್ರಭಾವ ಬೀರಿದವು. ಇವರು ಹೈದ್ರಾಬಾದಿನಲ್ಲಿ ಓದುವಾಗ ಶಾಲೆಯಲ್ಲಿ ಅತ್ಯಂತ ಪ್ರತಿಭಾನ್ವಿತ ವಿದ್ಯಾರ್ಥಿಗಳಾಗಿದ್ದು ಆ ಶಾಲೆಯಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರು.

ವಿದ್ಯಾರ್ಥಿ ವೇತನದಮೇಲೆ ಲಂಡನನಲ್ಲಿ ಫ್ಯಾರಡೇ ಹೌಸ್ ಕಾಲೇಜನಲ್ಲಿ ಇಂಜಿನಿಯರಿಂಗ ವಿದ್ಯಾರ್ಥಿಯಾಗಿ ಅಧ್ಯಯನ ಪ್ರಾರಂಭಿಸಿದರು. ಆದರೆ ದುರ್ದೈವದಿಂದ ಇವರಿಗೆ ರಸ್ತೆ ಅಪಘಾತ ಸಂಭವಿಸಿ ಇಂಜಿನಿಯರಿಂಗ ಅಧ್ಯಯನಕ್ಕೆ ಶರಣು ಹೊಡೆಯಬೇಕಾಯಿತು. ತರುವಾಯದಲ್ಲಿ ಲಂಡನ ವಿಶ್ವವಿದ್ಯಾಲಯ ದಲ್ಲಿ ಎಲ್. ಎಲ್. ಬಿ. ಪದವಿಗೆ ಸೇರ್ಪಡೆ ಯಾದರು. **"ಯಾಥಾ ಗುರು ತಥಾ ಶಿಷ್ಯ"** ಎಂಬಂತೆ ರಾಜ ವೆಂಕಟಪ್ಪ ನಾಯಕರು ಲಂಡನ್‌ನಲ್ಲಿ ಓದುವಾಗ **ಹೆರಾಲ್ಡ ಲಾಸ್ಕಿ ಮತ್ತು ಜಾರ್ಜ್ ಓಪೆನ್ ಐಮರ್** ಎಂಬ ಅಂತರರಾಷ್ಟ್ರೀಯ ಕಾನೂನು ತಜ್ಞರು ಮತ್ತು ರಾಜಕೀಯ ಚಿಂತಕರು ಇವರ ಪ್ರಾಧ್ಯಾಪಕರಾಗಿ ದ್ದರು. ಅವರ ಪ್ರಭಾವದಿಂದ ರಾಜಕೀಯ ಆಸಕ್ತಿ ಮತ್ತು ಜ್ಞಾನ, ರಾಜ ವೆಂಕಟಪ್ಪ ನಾಯಕರಲ್ಲಿ ಬೆಳೆಯಲು ಅವಕಾಶವಾಯಿತು .

೧೯೩೮ರಲ್ಲಿ ತಮ್ಮ ಕಾನೂನ ಪದವಿಯನ್ನು ಮುಗಿಸಿಕೊಂಡು ತಾಯ್ನಾಡಿಗೆ ವಾಪಸ್ಸಾದ ರಾಜ ವೆಂಕಟಪ್ಪನಾಯಕರಿಗೆ ತಾಯ್ನಾಡಿನಲ್ಲಿ ಹಲಾವರು ಸಮಸ್ಯೆಗಳು ಎದುರಾದವು. ಒಂದು ಕಡೆ ಭಾರತದಲ್ಲಿ ಗಾಂಧೀಜಿಯವರ ನಾಯಕತ್ವದಲ್ಲಿ ಭರದಿಂದ ಸಾಗಿದ ಸ್ವಾತಂತ್ರ್ಯ ಚಳುವಳಿ, ಮತ್ತೊಂದು ಕಡೆಗೆ ತನ್ನ ಪ್ರಾಂತ್ಯ, ಹೈದ್ರಾಬಾದ ನಿಜಾಮನ ದುರಾಡಳಿತದ

ಕಪಿಮುಷ್ಠಿಗೆ ಸಿಕ್ಕು ಉಸಿರುಗಟ್ಟಿ ಒದ್ದಾಡುವ ತನ್ನ ಪ್ರಜೆಗಳ ಹೀನ ಸ್ಥಿತಿಗತಿ ನೋಡಿ ಮರುಗಿದ ರಾಜ ವೆಂಕಟಪ್ಪ ನಾಯಕರು ಎದೆಗುಂದದೆ **"ಈಸ ಬೇಕು ಇದ್ದು ಜೈಸಬೇಕು"** ಎಂಬ ಮಂತ್ರವನ್ನ ಹಿಡಿದು ಹೈದ್ರಾಬಾದನಲ್ಲಿ ಮತ್ತು ಮುಂಬಯಿ ಹೈ ಕೋರ್ಟನಲ್ಲಿ ಏಕ ಕಾಲದಲ್ಲಿ ಪ್ರಖ್ಯಾತ ವಕೀಲರಾದ ಎಂ. ಸಿ. ಶೆಟಲ್ ವಾಡ್ಕರರ ಜ್ಯೂನೀಯರ್ ಆಗಿ ತಮ್ಮ ವಕೀಲ ವೃತ್ತಿಯ ಜೀವನವನ್ನು ಪ್ರಾರಂಭಿಸಿದರು. ಕೆಲವೇ ದಿನಗಳಲ್ಲಿ ಇವರ ಕ್ರಾಂತಿಕಾರಿ ವಿಚಾರಗಳನ್ನು ಮತ್ತು ಕಾನೂನಿನ ಬಗ್ಗೆ ಇರುವ ಅಪಾರ ಜ್ಞಾನವನ್ನು ಕಂಡು ಉತ್ತಮ ಭವಿಷ್ಯವಿದೆ ಎಂದು ಇವರ ಸಹೋದ್ಯೋಗಿಗಳು ಅಭಿಪ್ರಾಯ ಪಟ್ಟದ್ದುಂಟು.

**ರಾಜ ವೆಂಕಟಪ್ಪನಾಯಕ ಕೌಟುಂಬಿಕ ಜೀವನ**

ರಾಜ ವೆಂಕಟಪ್ಪ ನಾಯಕ ಲಂಡನ್ನನಿಂದ ವಾಪಸ್ಸಾದ ಕೆಲವೇ ದಿನಗಳಲ್ಲಿ ತಮ್ಮ ಸಹೋದರಿಯ ಮಗಳಾದ ರಾಣಿ ಸತ್ಯಮ್ಮ ಎಂಬುವವರ ಕೈಹಿಡಿದು ಸಂಸಾರಿಕ ಜೀವನಕ್ಕೆ ಪಾದಾರ್ಪಣೆ ಮಾಡಿದರು. ಇವರಿಗೆ ರಾಜ ಸೀತಾರಾಮ ನಾಯಕ, ರಾಜಾ ಕೃಷ್ಣಪ್ಪ ನಾಯಕ, ರಾಜ ಶ್ರೀನಿವಾಸ ನಾಯಕರೆಂಬ ಮೂರು ಜನ ಗಂಡು ಮಕ್ಕಳು ಹಾಗು ರಾಣಿ ಯಂಕಮ್ಮ, ರಾಣಿ ಉಷಾದೇವಿ, ರಾಣಿ ಕಮಲಾ ಎಂಬ ಮೂರು ಜನ ಹೆಣ್ಣು ಮಕ್ಕಳು ಇದ್ದು ರಾಜರು ಕುಟುಂಬಕ್ಕೆ ಮಾತ್ರ ತಮ್ಮ ಸೇವೆ ಮೀಸಲಾಗಿಡದೆ ದೇಶದ ಸ್ವಾತಂತ್ರ್ಯ ಹೋರಾಟದ ಕಡೆಗೆ ತಮ್ಮ ಗಮನವನ್ನು ಹರಿಸಿದರು. ತಮ್ಮ ಕೌಟುಂಬಿಕ ಜೀವನವಾಗಲಿ ಮತ್ತು ಸುತ್ತಮುತ್ತಲಿನ ಪರಿಸರವಾಗಲೀ ಇವರ ಹೋರಾಟದ ಬದುಕಿಗೆ ಯಾವದೇರೀತಿಯ ಅಡೆ-ತಡೆ ಮಾಡದೆ ರಾಜಕೀಯ ಪ್ರವೇಶಕ್ಕೆ ಸ್ಫೂರ್ತಿ ನೀಡಿತ್ತು. ಎಕೆಂದರೆ ಇವರು ಬೆಳದ ಪರಿಸರವೇ ಆ ರೀತಿ ಇತ್ತು. ಇವರ ತಂದೆ ರಾಜ ಕೃಷ್ಣಪ್ಪ ನಾಯಕ ಮತ್ತು ತಾಯಿ ರಾಣಿ ಶೇಷಮ್ಮನವರಿಂದ ಸ್ವಾತಂತ್ರ್ಯ ಹೋರಾಟಕ್ಕೆ ಮತ್ತು ಜನ ಸೇವೆ ಮಾಡಲು ಸಾಕಷ್ಟು ಪ್ರೋತ್ಸಾಹ ದೊರೆಯಿತು. ತಮ್ಮ ಬದುಕನ್ನು ಕೇವಲ ರಾಜಕೀಯಕ್ಕೆ ಮಾತ್ರ ಸೀಮಿತವಾಗಿಡದೆ ತಮ್ಮ ಮಕ್ಕಳಿಗೆ ಉತ್ತಮ ಶಿಕ್ಷಣ ಆಚಾರ ವಿಚಾರಗಳು, ನಡೆ-ನುಡಿ ಸಂಸ್ಕೃತಿ ಮತ್ತು ಸಂಪ್ರದಾಯಗಳು ದೇಶ ಪ್ರೇಮ, ಭಾವೈಕ್ಯತೆ ಇತ್ಯಾದಿ ಮಾನವೀಯ ಮೌಲ್ಯಗಳನ್ನು ಕಲಿಸಿ ಸಮಾಜದಲ್ಲಿ ಉತ್ತಮ ನಾಗರಿಕರಾಗಿ, ಹಾಗು ಸ್ವಾವಲಂಬಿಗಳನ್ನಾಗಿ ಜೀವಿಸುವಂತೆ ಮಾಡಿದ್ದಾರೆ.

## ರಾಜ ವೆಂಕಟಪ್ಪ ನಾಯಕರ ರಾಜಕೀಯ ಸಾಧನೆಗಳು

೧೯೪೨ ರಲ್ಲಿ ರಾಜ ವೆಂಕಟ್ಟಪ್ಪ ನಾಯಕರು ತಮ್ಮ ವಕೀಲ ವೃತ್ತಿಯನ್ನು ನಿರ್ವಹಿಸುತ್ತಿರುವಾಗಲೇ ದೇಶದಲ್ಲಿ ಕ್ವಿಟ್ ಇಂಡಿಯಾ ಚಳುವಳಿ ಶುರುವಾಗಿತ್ತು. ಹೈದ್ರಾಬಾದ ಕರ್ನಾಟಕದಲ್ಲಿ ಆದರ್ಶ ನಾಯಕರ ತೀವ್ರ ಕೊರತೆಯಿಂದ ರಾಜಕೀಯ ಸ್ಥಿತಿಯು ಡೊಲಾಯ ಮಾನವಾಗಿತ್ತು ಅಂತಹ ಸಂದಿಗ್ಧ ಸ್ಥಿತಿಯಲ್ಲಿ ರಾಜಾ ವೆಂಕಟಪ್ಪ ನಾಯಕರು ಸ್ವಾತಂತ್ರ್ಯ ಚಳುವಳಿಯಲ್ಲಿ ಸ್ವಇಚ್ಛೆಯಿಂದ ಧುಮುಕಿದರು. ಹಲಾವಾರು ಅಯಾಮುಗಳಿಂದ ಜನತೆಯನ್ನು ಸಂಘಟಿಸಿ ಹೋರಾಟಗಾರರಿಗೆ ಸ್ಫೂರ್ತಿ ನೀಡಿದರು. ಸ್ವತಃ ರಾಜರೆ ಈ ಭಾಗದ ಹೋರಾಟದ ನಾಯಕತ್ವವನ್ನು ವಹಿಸಿದ್ದರು. ಇವರ ಕ್ರಿಯಾಶೀಲ ಚಟುವಟಿಕೆಯನ್ನು ಕಂಡು ಹಿರಿಯ ಹೋರಾಟಗಾರರು ಮೆಚ್ಚುಗೆ ವ್ಯಕ್ತಪಡಿಸಿದರು.

೧೯೪೭ ಅಗಸ್ಟ ೧೫ರ ಮಧ್ಯರಾತ್ರಿಯ ತರುವಾಯ ಹೈದ್ರಾಬಾದ ಸಂಸ್ಥಾನದಲ್ಲಿ ನಡೆದ ವ್ಯಾಪಕ ದೌರ್ಜನ್ಯಗಳಿಗೆ ಧಾರ್ಮಿಕ ತೀವ್ರ ಗಾಮಿಗಳ ಸಂಸ್ಥೆಯಾದ **ಇತ್ತಿಹಾದ್- ಉಲ್-ಮುಸಲ್‌ಮೀನ್**ನಿನ ಕಾರ್ಯ ಚಟುವಟಿಕೆಗಳು ಇವರ ಮೇಲೆ ತೀವ್ರ ಪ್ರಭಾವ ಬೀರಿದವು. ಅದೇ ವೇಳೆಯಲ್ಲಿ ನಿಜಾಮನು ತನ್ನ ರಾಜ್ಯವನ್ನು ಪಾಕಿಸ್ತಾನದಲ್ಲಿ ಸೇರಿಸುವನು ಎಂಬ ಸಮಾಚಾರ ಕೇಳಿ ಬಂದಾಗ ರಾಜಾ ವೆಂಕಟಪ್ಪ ನಾಯಕರಿಗೆ ಹೆಚ್ಚಿನ ಆಘಾತವಾಗಿ ಅವರ ವಿರುದ್ಧ ಅಪ್ರತಿಮ ಹೋರಾಟವನ್ನು ಪ್ರಾರಂಭಿಸಿದರು. ನಿಜಾಮನ ದುರಾಡಳಿತವನ್ನು ಕಿತ್ತುಹಾಕಿ ಸ್ವಾತಂತ್ರ ಸರ್ಕಾರವನ್ನು ಸ್ಥಾಪಿಸಲು ಈ ಭಾಗದ ಜನರಿಗೆ ಕರೆಕೊಟ್ಟರು. **"ಜನನಿ ಜನ್ಮ ಭೂಮಿಶ್ಚ , ಸ್ವರ್ಗಾದಪಿ ಗರೀಯಸಿ "** ಎಂಬ ಮಂತ್ರ ಬೀಜವನ್ನು ಈ ಭಾಗದ ಜನಗಳಿಗೆ ಹೇಳುವದರ ಮೂಲಕ ನಿಜಾಮನ ವಿರುದ್ಧ ಪ್ರತಿಭಟಿಸಲು ಜನರಿಗೆ ಕರೆಕೊಟ್ಟರು. ತಾಳಿಕೋಟಿಯ ಜನಹಿತ ಶಿಬಿರವನ್ನು ರಚಿಸಿ ಅದರ ನಾಯಕತ್ವವನ್ನು ವಹಿಸಿ ೭೦ ಜನ ಸ್ವಯಂ ಸೇವಕರಿಗೆ ನಿಜಾಮನ ಸೈನಿಕರು ಎಂದರೆ ರಜಾಕರರ ವಿರುದ್ಧ ಹೋರಾಡುವ ತಂತ್ರಗಳನ್ನು ಕಲಿಸಿಕೊಟ್ಟರು. ರಾಜ ವೆಂಕಟಪ್ಪ ನಾಯಕರ ಛಲ, ಅಪ್ರತಿಮ ಅತ್ಮ ವಿಶ್ವಾಸ ಇವುಗಳನ್ನು ಕಂಡು **ಶ್ರೀ ಕಾಶಿನಾಥರಾವ ವೈದ್ಯ** ಎಂಬುವರು ಎಲ್ಲಾ ರೀತಿಯ ಮಾರ್ಗದರ್ಶನ ನೀಡಿ ಉತ್ತಮ ನಾಯಕನಾಗಿ ಬೆಳೆಯಲು ಸ್ಫೂರ್ತಿ ನೀಡಿದರು.

ರಾಜ ವೆಂಕಟಪ್ಪನಾಯಕರ ಸುಪ್ತವಾದ ರಾಜಕೀಯ ಪ್ರಜ್ಞೆಯನ್ನು, ಹೋರಾಟದ ಗುಣವನ್ನು, ಸಂಘಟನಾ ಚತುರತೆಯನ್ನು ವಕೀಲರಾದ ಕಾಶಿನಾಥ ರಾವ ಅವರು ಗುರುತಿಸಿದದ್ದು ವೆಂಕಟಪ್ಪನಾಯಕರಿಗೆ ವರವಾಗಿ ಪರಿಣಮಿಸಿತು. ಇವರನ್ನು ಕಾಶಿನಾಥರಾವ ವೈಧ್ಯರು ದೆಹಲಿಯಲ್ಲಿ ವಾರ್ತಾ ಮತ್ತು ಪ್ರಸಾರ ಖಾತೆಯ ಸಚಿವರಾದ **ಶ್ರೀ ಆರ್.ಆರ್. ದಿವಾಕರ** ಇವರಿಗೆ ಪರಿಚಯ ಮಾಡಿಸಿದರು. ಇವರ ಹೋರಾಟದ ಗುರಿ ಮತ್ತು ಉದ್ದೇಶಗಳನ್ನು ವಿವರಿಸಿದರು. ಸಂತೃಪ್ತರಾದ ಸಚಿವರು ಗೃಹಖಾತೆಯ ಸಚಿವರಾದ ಸರದಾರ ಪಟೇಲರಿಗೆ ಭೇಟಿ ಮಾಡಿಸಿ, ಇವರ ಎಲ್ಲ ವಿಚಾರಗಳನ್ನು ತೆರೆದ ಮನಸ್ಸಿನಿಂದ ಮುಂದಿಟ್ಟರು. ಇದರಿಂದ ಪಟೇಲರು ರಾಜ ವೆಂಕಟಪ್ಪ ನಾಯಕರಿಗೆ ಅಗತ್ಯವಾದ ಸಹಕಾರ ನೀಡಲು ಭರವಸೆ ಇತ್ತರು. ಇದರಿಂದ ನಾಯಕರ ರಾಜಕೀಯ ಹೋರಾಟದ ಬದುಕಿಗೆ ಹೊಸ ಸ್ಪೂರ್ತಿ ದೊರೆತಂತಾಯಿತು. ತಾಳಿಕೋಟೆಯ ಶಿಬಿರದಲ್ಲಿ ತರಬೇತಿ ಪಡೆಯುವ ೭೦ ಜನ ಸ್ವಾತಂತ್ರ್ಯ ಹೋರಾಟಗಾರರಿಗೆ ಕಠಿಣ ತರಬೇತಿ ನೀಡಿ ಪ್ರೋತ್ಸಹಿಸುವುದರ ಜೊತೆಗೆ ನಿಜಾಮನ ಆಡಳಿತದ ವಿರುದ್ಧ ಹೋರಾಟ ಪ್ರಾರಂಭಿಸಿದ್ದರು. ಹುಣಸಗಿ, ಕಕ್ಕೇರಿ ಕೊಡೆಕಲ, ಕೆಂಭಾವಿ, ಮಾಲಗತ್ತಿ ಹಾಗು ಮಲ್ಲಾ ಇತ್ಯಾದಿ ಸ್ಥಳಗಳಲ್ಲಿ ಭಾರತದ ತ್ರಿವರ್ಣ ಧ್ವಜವನ್ನು ಹಾರಿಸಿ **"ವಂದೇ ಮಾತರಂ"** ಎಂಬ ರಾಷ್ಟ್ರಗೀತೆಯನ್ನು ಹಾಡಿದರು. ಇದನ್ನು ತಿಳಿದ ರಜಾಕರರ ಸೈನಿಕರು ಸ್ವಯಂಸೇವಕರನ್ನು ಬಂಧಿಸಿ ಜೇಲನಲ್ಲಿ ಇಟ್ಟರು.

೧೯೪೮ ರಲ್ಲಿ ಪಟೇಲರ ನೇತೃತ್ವದಲ್ಲಿ ಹೈದ್ರಾಬಾದ ಸಂಸ್ಥಾನದ ಮೇಲೆ ಪೋಲೀಸ ಕಾರ್ಯಚರಣೆ ಮಾಡಲಾಯಿತು. ಇದರಿಂದ ನಿಜಾಮನು ಭಾರತ ಸರಕಾರಕ್ಕೆ ಶರಣಾಗಿ ಒಕ್ಕೂಟದಲ್ಲಿ ಸೇರಿಕೊಳ್ಳಲು ಒಪ್ಪಿದನು, ಅದೇ ದಿನ ಅಂದರೆ ೧೯೪೮ ಸೆಪ್ಟೆಂಬರ್ ೧೭ ನೇ ತಾರೀಕು ಸಾಯಂಕಾಲ ರಾಜ ವೆಂಕಟಪ್ಪ ನಾಯಕರ ರಾಜಕೀಯ ಸಾಧನೆಗಳು ಮತ್ತು ಅವರ ಧೈರ್ಯ, ರಾಷ್ಟ್ರಪ್ರೇಮ ಇತ್ಯಾದಿಗಳನ್ನು ಕುರಿತು **ಸ್ಪಾಟ ಲೈಟ್ ಕಾರ್ಯಕ್ರಮ**ದಲ್ಲಿ ೧೫ ನಿಮಿಷಗಳ ಕಾರ್ಯಕ್ರಮವನ್ನು ಪ್ರಸಾರ ಮಾಡಲಾಯಿತು. ಅದೇ ವಿಷಯವನ್ನು **ರೆನಬೋ ನ್ಯೂಜ್ ಮ್ಯಾಗಜೀನ್**ನಲ್ಲಿ ಪ್ರಕಟಣೆ ಮಾಡಲಾಯಿತು. ಇಂತಹ ಮಹಾನ್ ರಾಷ್ಟ್ರ ಪ್ರೇಮಿಯನ್ನು ದೇಶಕ್ಕೆ ಪರಿಚಯ ಮಾಡಿಕೊಟ್ಟ ಆಗಿನ ಸಚಿವರಾದ ಶ್ರೀ ಆರ್. ಆರ್.

ದಿವಾಕರ ಇವರಿಗೆ ರಾಜ ವೆಂಕಟಪ್ಪ ನಾಯಕರು ಮತ್ತು ಕನ್ನಡಿಗರು ಚಿರಋಣಿಯಾಗಿರ ಬೇಕಾದುದು ತೀರಾ ಅವಶ್ಯವೇ ಸರಿ.

೧೯೬೭ರಲ್ಲಿ ಮೊದಲಬಾರಿಗೆ ರಾಜ ವೆಂಕಟಪ್ಪ ನಾಯಕರು ರಾಯಚೂರ ಲೋಕಸಭಾ ಮತಕ್ಷೇತ್ರದಿಂದ ಮತ್ತು ಶಹಾಪುರ ವಿಧಾನಸಭಾ ಮತಕ್ಷೇತ್ರದಿಂದ ಸ್ವತಂತ್ರ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದರು. ಲೋಕಸಭೆಯ ಸ್ಥಾನಕ್ಕೆ ತನ್ನ ಪ್ರತಿಸ್ಪರ್ಧಿ ಕಾಂಗ್ರೇಸ್ ಅಭ್ಯರ್ಥಿಯನ್ನು ಸುಮಾರು ೧೭ ಸಾವಿರ ಮತಗಳ ಅಂತರದಿಂದ ಪರಾಭವ ಗೊಳಿಸಿದರು. ಮತ್ತು ಶಹಾಪುರ ವಿಧಾನ ಸಭಾ ಕ್ಷೇತ್ರದಲ್ಲಿ ತಮ್ಮ ಪ್ರತಿಸ್ಪರ್ಧಿ ಕಾಂಗ್ರೇಸ್ ಅಭ್ಯರ್ಥಿಯನ್ನು ಸುಮಾರು ೭ ಸಾವಿರ ಮತಗಳ ಅಂತರದಿಂದ ಸೋಲೀಸಿದರು. ಆದರೆ ವಿಧಾನ ಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿದರು.

ರಾಜ ವೆಂಕಟಪ್ಪ ನಾಯಕರು ಉತ್ತಮ ಸಂಸತ್ತಿನ ಪಟುವಾಗಿದ್ದು, ಇಂಗ್ಲೀಷ್ ಭಾಷೆಯ ಮೇಲೆ ಉತ್ತಮ ಪ್ರಭುತ್ವ ಮತ್ತು ಪಾಂಡಿತ್ಯ ಉಳ್ಳವರಾಗಿದ್ದರು. ವಿರೊಧ ಪಕ್ಷದಲ್ಲಿ ಇದ್ದುಕೊಂಡ್ಡು ಸಂಸತ್ತಿನಲ್ಲಿ ನಡೆಯುವ ಎಲ್ಲ ಕಾರ್ಯಕಲಾಪಗಳಲ್ಲಿ ಮತ್ತು ಚರ್ಚೆಯಲ್ಲಿ ಸಕ್ರೀಯವಾಗಿ ಭಾಗವಹಿಸುತ್ತಿದ್ದರು.

೨೦ನೇ ಶತಮಾನದ ಮಹಾನ್ ಗಾಂಧಿವಾದಿಗಳಲ್ಲಿ ಒಬ್ಬರಾದ ರಾಜ ವೆಂಕಟಪ್ಪನಯಕರು ಶ್ರೇಷ್ಠ ಬುದ್ಧಿ ಜೀವಿಗಳು, ಚಿಂತಕರು, ಉತ್ತಮ ಕಾನೂನು ತಜ್ಞರು, ನುರಿತ ರಾಜಕೀಯ ಧುರೀಣರು ಹಾಗೂ ಜನರ ಬಗ್ಗೆ ಕಳಕಳಿಯುಳ್ಳವರು, ಆಡಂಬರದ ಜೀವನಕ್ಕೆ ಮಾರು ಹೋಗದೆ ಸರಳ ಜೀವಿಗಳು, ನುಡಿದಂತೆ ನಡೆಯುವ ಸ್ವಭಾವವುಳ್ಳವರು, ಹಾಗು ಪ್ರಜಾ ಪ್ರಭುತ್ವವಾದಿಗಳಾಗಿದ್ದಾರೆ. ರಾಜ ವೆಂಕಟಪ್ಪ ನಾಯಕರು ಬಹುಮುಖ ಪ್ರತಿಭೆಯುಳ್ಳ ನಾಯಕರಾಗಿದ್ದಾರೆ, ಏಕೆಂದರೆ ಇವರು ತಮ್ಮ ಬದುಕನ್ನು ಸ್ವಾತಂತ್ರಚಳುವಳಿ ಹಾಗು ರಾಜಕೀಯಕ್ಕೆ ಮುಡುಪಾಗಿಡದೆ, ಸಂಗೀತ ಮತ್ತು ತಬಲ ಬಾರಿಸುವದರಲ್ಲಿ ಅತ್ಯಂತ ಪ್ರವೀಣರಾಗಿದ್ದಾರೆ. ಭಾರತದಲ್ಲಿ ಖ್ಯಾತ ತಬಲ ವಾದಕರಾದ ಶೇಖ ದಾವುದ್ ಇವರು ವೆಂಕಟಪ್ಪ ನಾಯಕರ ಗುರುಗಳಾಗಿದ್ದರು. ಸುರಪುರದಲ್ಲಿ ಹಿಂದುಸ್ತಾನ ಶಾಸ್ತ್ರೀಯ ಸಂಗೀತವನ್ನು ಬೆಳೆಸುವದರಲ್ಲಿ ಇವರ ಪಾತ್ರ ಪ್ರಮುಖ ವಾಗಿದೆ.

ರಾಜ ವೆಂಕಟಪ್ಪ ನಾಯಕರಿಗೆ ಇಂದಿನ ಪ್ರಜಾಪ್ರಭುತ್ವ, ರಾಜಕೀಯ ವ್ಯವಸ್ಥೆ ಮತ್ತು ಆಡಳಿತಾತ್ಮಕ ಯಂತ್ರಗಳನ್ನು ಕುರಿತು ವಿಷಾದ ವ್ಯಕ್ತಪಡಿಸಿದ್ದಾರೆ. ನಮ್ಮ ಕಾಲದ ರಾಜಕೀಯ ನಿಸ್ವಾರ್ಥ, ಪರಿಶುದ್ಧ ಹಾಗು ಪವಿತ್ರವಾಗಿತ್ತು. ಆದರೆ ಇಂದಿನ ರಾಜಕೀಯ ಮಾಲೀನ್ಯವಾಗಿದ್ದು ಪ್ರಜಾಪ್ರಭುತ್ವದ ಶೋಷಣೆಯಾಗುತ್ತಿದೆ. ರಾಜಕೀಯ ನಾಯಕರು ಜನಸೇವಕರು ಎಂಬುದವನ್ನು ಮರೆತು ಹಗಲು ದರೋಡೆ ಕೋರರಾಗಿದ್ದಾರೆ. ಇಂದು ಆದರ್ಶ ನಾಯಕರ ಕೊರತೆ ಇದೆ. ದೇಶ ಪ್ರೇಮ, ದೇಶ ಸೇವೆ, ಜನಗಳ ಕಲ್ಯಾಣ, ಇತ್ಯಾದಿ ಅಂಶಗಳು ಕಣ್ಮರೆಯಾಗಿದ್ದು, ಎಲ್ಲಾ ಕಡೆ ಅಧಿಕಾರಕ್ಕಾಗಿ ಹೋರಾಟ ನಡೆಯುತ್ತದೆ. ಇತ್ಯಾದಿ ಭಾವನೆಗಳನ್ನು ವ್ಯಕ್ತಪಡಿಸುವಾಗ ರಾಜಾ ವೆಂಕಟಪ್ಪ ನಾಯಕರ ಕಣ್ಣಂಚಿನಲ್ಲಿ ಕಂಬನಿಯು ಇಣಿಕಿತ್ತು. ಇಂತಹ ಮಹಾನ್ ವ್ಯಕ್ತಿ ನಮ್ಮೆಲ್ಲರ ಮಧ್ಯ ಜನಿಸಿ ಜೀವಿಸುತ್ತಿರುವದು ಪೂರ್ವ ಜನ್ಮದ ಪುಣ್ಯ ಎಂದು ಭಾವಿಸಬೇಕು.

## ೩.೭. ಹೈದ್ರಾಬಾದ ಕರ್ನಾಟಕದ ವಿಮೋಚನೆ ಮತ್ತು ಬುಡಕಟ್ಟು ನಾಯಕರು

ಭರತ ಭೂಮಿ ಪುಣ್ಯಭೂಮಿಯೆಂದು ಪ್ರಾಚಿನಕಾಲದಿಂದಲೂ ಖ್ಯಾತಿವೆತ್ತಿದೆ. ವೇದಗಳು ಇದರ ಪ್ರಾಶಸ್ತ್ಯವನ್ನು, ಪಾವಿತ್ರ್ಯವನ್ನು ಕುರಿತು ಹೊಗಳಿವೆ. ಉಪನಿಷತ್ತುಗಳು ಇದರ ಘನತೆ-ಗೌರವಗಳನ್ನು ಎತ್ತಿ ಹಿಡಿದಿವೆ. ಪುರಾಣಗಳಂತು ಚಾರಿತ್ರಿಕ ಘನತೆಯಿಂದಾಗಿ ಇದನ್ನು ಭೂ ವೈಕುಂಠವೆಂದು ಸಾರಿವೆ. ಇಂತಹ ಪವಿತ್ರತಮ ಭೂಮಿಯ ಒಂದು ಅವಿಭಾಜ್ಯ ಅಂಗವಾದ ಕನ್ನಡ ನಾಡು ಪೌರಾಣಿಕ ದೃಷ್ಠಿಯಿಂದ ಅಷ್ಟೇ ಘನತೆವೆತ್ತನಾಡಾಗಿದೆ. ಅದರ ವಾತ್ಸಲ್ಯದ ಮಗುವೆನಿಸಿದ ಗುಲಬರ್ಗಾ ಜಿಲ್ಲೆಯು ಪುಣ್ಯ ತೀರ್ಥ ಕ್ಷೇತ್ರಗಳ ದೆಸೆಯಿಂದಲೂ, ಧಾರ್ಮಿಕ, ಸಾಂಸ್ಕೃತಿಕ, ಸಾಹಿತ್ಯಕ, ರಾಜಕೀಯಕ ಹಾಗೂ ಆರ್ಥಿಕ ದೃಷ್ಠಿಯಿಂದಲೂ ಒಂದು ಕಾಲಕ್ಕೆ ಅತ್ಯಂತ ವೈಭವೋಪೇತ ನಾಡಾಗಿತ್ತೆಂಬುದು ಅದರ ಹಿರಿಮೆ-ಗರಿಮೆಗಳಿಂದ ವ್ಯಕ್ತವಾಗುತ್ತದೆ.

ಗುಲಬರ್ಗಾ ಜಿಲ್ಲೆಯಲ್ಲಿ ಆಳಿ ಹೋದ ಹಲವಾರು ಅರಸು ಮನೆತನಗಳು, ಕಲೆ, ಸಾಹಿತ್ಯ, ಸಂಸ್ಕೃತಿ ಮತ್ತು ವೀರತನ-ಶೂರತನ, ಅಪ್ರತಿಮ ಸಾಹಸ ಇವುಗಳಿಂದ ಭಾರತೀಯ

ಇತಿಹಾಸದಲ್ಲಿ ಶಾಶ್ವತ ವಾಗಿ ಉಳಿದಿದ್ದಾರೆ. ಅದೇ ರೀತಿಯಾಗಿ ಬ್ರಿಟೀಷರ ಹಾಗೂ ರಜಾಕರ ವಿರುದ್ಧದ ದಂಗೆಯಲಂತೂ ಈ ಜಿಲ್ಲೆಯ ನಾಯಕರು ಅತ್ಯಂತ ಪ್ರಮುಖ ಪಾತ್ರವನ್ನು ನಿರ್ವಹಿಸಿದ್ದಾರೆ. ಜಾತಿ, ಜನಾಂಗ, ಧರ್ಮ ಎನ್ನದೆ ತಮ್ಮ ಜೀವನವನ್ನು ಪಣವಿಟ್ಟು ನಾಡಿನ ರಕ್ಷಣೆಗೋಸ್ಕರ ಹಲವಾರು ವೀರ ಸುಪುತ್ರರರು ಸಾವಿಗಿಡಾದರು. ಅದರಲ್ಲಿ ವಿಶೇಷವಾಗಿ ಬುಡಕಟ್ಟು ನಾಯಕರ ಪಾತ್ರವಂತೂ ಜೀವಂತ ಸಾಕ್ಷಿಯಾಗಿದೆ.

೧೯೪೭ರ ಆಗಸ್ಟ ೧೫ರ ಮಧ್ಯರಾತ್ರಿಯ ತರುವಾಯ ಹೈದರಾಬಾದ ಸಂಸ್ಥಾನದಲ್ಲಿ ನಡೆದ ವ್ಯಾಪಕ ದೌರ್ಜನ್ಯಗಳಿಗೆ ಧಾರ್ಮಿಕ ತೀವ್ರಗಾಮಿಗಳ ಸಂಸ್ಥೆಯಾದ **ಇತ್ತಹದ್-ಉಲ್-ಮುಸಲ್‌ಮೀನ್** ಮುಖ್ಯ ಕಾರಣವಾಗಿತ್ತು. ಈ ಸಂಸ್ಥೆಯ ಸ್ಥಾಪನೆಯನ್ನು ಲಾತೂರಿನ ಪ್ರಸಿದ್ದ ವಕೀಲನಾಗಿದ್ದ ಖಾಸಿಂ ರಜ್ವಿ ಮತ್ತು **ರಹಮಾನ -ಯೇ-ದಕ್ಕನ್** ಪತ್ರಿಕೆಯ ಸಂಪಾದಕನಾಗಿದ್ದ ಮಹಮ್ಮದ್ ಸಿದ್ದಿಕಿ ಇವರುಗಳು ಕೈಗೊಂಡಿದ್ದರು. ಇತಹಾದ್-ಉಲ್-ಮುಸಲ್‌ಮೀನ್ ಸಂಸ್ಥೆಯ ಅಧ್ಯಕ್ಷನಾಗಿ ಬಹದ್ದೂರ್ ಯಾರ್‌ಜಂಗ್ ಅವರು ಧಾಳಿಗಳನ್ನು ನಿರ್ದೇಶಿಸುತ್ತ ಕೋಮು ಭಾವನೆಗಳನ್ನು ಪ್ರಚೋದಿಸುವ ಭಾಷಣಗಳನ್ನು ನೀಡುತ್ತಿದ್ದರು.

೧೯೪೭ರ ಸ್ವಾತಂತ್ರ್ಯ ಬಂದ ರಾತ್ರಿ ಗುಲಬರ್ಗಾ ರೈಲು ನಿಲ್ದಾಣಕ್ಕೆ ಬಂದ ಎಲ್ಲಾ ರೈಲುಗಳಿಗೂ ರಾಷ್ಟ್ರಧ್ವಜವನ್ನು ಕಟ್ಟಲಾಗಿತ್ತು. ಮತ್ತು ಅವುಗಳಲ್ಲಿ ಒಂದೇ ಸವನೆ ಒಂದೇ ಮಾತರಂ ಕೇಳಿಬರುತ್ತಿತ್ತು. ರಜಾಕರರು ರೈಲುಗಳನ್ನು ನಿಲ್ಲಿಸಿ ರಾಷ್ಟ್ರಧ್ವಜವನ್ನು ಹರಿದು ಹಾಕಿ ಪ್ರಯಾಣಿಕರು ಮೌನದಿಂದ ಸಾಗುವಂತೆ ನಿರ್ದೇಶಿಸುತ್ತಿದ್ದರು. ಅಮಾಯಕರ ಮೇಲೆ ಧಾಳಿ ಮಾಡಿ ಕೊಲೆ-ಸುಲಿಗೆಗಳನ್ನು ಮಾಡುತ್ತಿದ್ದರು. ಎಷ್ಟೋ ಜನ ಹಿಂದೂ ಮಹಿಳೆಯರನ್ನು ಕಾಡಿಸಿ-ಪಿಡಿಸಿ, ಆಸ್ತಿ-ಪಾಸ್ತಿಗಳನ್ನು ದೋಚಿಕೊಂಡು ಹೋಗುತ್ತಿದ್ದರು. ಇವರ ದೌರ್ಜನ್ಯಗಳು ಹೈದರಾಬಾದ ಕರ್ನಾಟಕ ಜನಗಳ ಅಪಾರ ಆಸ್ತಿ-ಪಾಸ್ತಿ, ಪ್ರಾಣ-ಹಾನಿಗೊಳಗಾಗಿರುವಂತೆ ಮಾಡಿದವು. ಇದರಿಂದ ರೊಚ್ಚಿಗೆದ್ದ ಗುಲಬರ್ಗಾ ಜಿಲ್ಲೆಯ ನಾಯಕರು ರಜಾಕರರ ಸೊಕ್ಕನ್ನು ಅಡಗಿಸಲು ಹಲವಾರು ಸಂಘಟನೆಗಳು ರಚಿಸಲ್ಪಟ್ಟವು. ಹೋರಾಟಕ್ಕಾಗಿ ಸ್ವಯಂ ಸೇವಕರ ಶಿಬಿರಗಳು ಗಡಿಭಾಗದಲ್ಲಿ

ಪ್ರಾರಂಭವಾದವು. ಅಂತಹ ವೀರ ಹೋರಾಟಗಾರರಿಗೆ ಸಾರಥ್ಯ ವಹಿಸಿ ರಜಾಕರರ ಸೈನ್ಯವನ್ನು ಹಿಮ್ಮೆಟ್ಟಿಸಿದ ಕೀರ್ತಿ ಈ ಜಿಲ್ಲೆಯ ಬುಡಕಟ್ಟು ನಾಯಕರು ಎಂಬುವದಕ್ಕೆ ಹೋರಾಟದ ಇತಿಹಾಸವೇ ಒತ್ತಿಹೇಳುತ್ತದೆ.

ವಿಶೇಷವಾಗಿ ಸುರಪುರ, ಶಹಾಪೂರು, ಯಾದಗಿರಿ ಮತ್ತು ಚಿಂಚೋಳಿಯ ವೀರ ಬುಡಕಟ್ಟಿನ ನಾಯಕರು ರಜಾಕರರ ವಿರುದ್ಧ ನಾಡ ಅಸ್ತ್ರಗಳನ್ನು ಹಿಡಿದು ಹೋರಾಟ ಮಾಡಿ ಜಯಶೀಲರಾಗಿದ್ದು ಗಣನೀಯ ವಿಷಯವೇ ಸರಿ.

## ೩.೭. ಹೈದರಾಬಾದ ವಿಮೋಚನೆಯಲ್ಲಿ ಹೋರಾಟ ಮಾಡಿದ ಬುಡಕಟ್ಟು ನಾಯಕರು

### ೩.೭.೧. ಶ್ರೀ ಯಲ್ಲಪ್ಪ ತಂದೆ ಮಲ್ಲಪ್ಪ ಗಲಗ್ (ಭಾವಚಿತ್ರ ೩.೧೪ ನೋಡಿ)

| | | |
|---|---|---|
| ೧. ಹೆಸರು | : | ಯಲ್ಲಪ್ಪ (ಪಿ. ಸಂ. ೧೩೮) |
| ೨. ತಂದೆ /ತಾಯಿ | : | ಮಲ್ಲಪ್ಪ ಮತ್ತು ಮಲ್ಲಮ್ಮ |
| ೩. ಊರು ಮತ್ತು ತಾಲೂಕಾ | : | ಸಗರ, ಶಾಹಪೂರ. |
| ೪. ವಯಸ್ಸು | : | ೭೫. |
| ೫. ಜಾತಿ | : | ಬೇಡರು. |

ಶ್ರೀ ಮಲ್ಲಪ್ಪ ಮತ್ತು ಶ್ರೀಮತಿ ಮಲ್ಲಮ್ಮ ಎಂಬ ದಂಪತಿಗಳ ಮಗನಾದ ಯಲ್ಲಪ್ಪ ಎಂಬುವವರು ಬೇಡ ಸಮುದಾಯದಲ್ಲಿ ಜನಿಸಿ ಐದನೇ ತರಗತಿಯವರೆಗೆ ಓದಿದ್ದಾರೆ. ಬಾಲ್ಯದಿಂದಲು ಅವರಿಗೆ ಬೇರೆ ಸಮುದಾಯದ ಬಾಲಕರ ಸಹವಾಸವಿತ್ತು. ಓದುವಾಗ ಇತಿಹಾಸದ ವಿಷಯದಲ್ಲಿ ಆಸಕ್ತಿ ಉಳ್ಳ ಬಾಲಕ ಯಲ್ಲಪ್ಪನಿಗೆ ಹತ್ತನೇ ವರ್ಷದಲ್ಲಿ, ಶಿವಾಜಿ, ಟಿಪ್ಪುಸುಲ್ತಾನ, ರಾಣಾಪ್ರತಾಪ ಸಿಂಹ, ಕಿತ್ತೂರು ಚನ್ನಮ್ಮ, ಇತ್ಯಾದಿ ರಾಷ್ಟ್ರ ಪ್ರೇಮಿಗಳ ಹಾಗೂ ಪರಕೀಯರ ವಿರುದ್ದ ತಾಯ್ನಾಡಿಗಾಗಿ ಹೋರಾಟ ಮಾಡಿ ಪ್ರಾಣಾರ್ಪಣೆ ಮಾಡಿದ ಮಹಾನ್ ಸ್ವಾತಂತ್ರ್ಯ ಹೋರಾಟಗಾರರ ಪ್ರಭಾವ ಇವರ ಮೇಲಾಯಿತು. ೧೨ ವರ್ಷದ ಬಾಲಕನಿದ್ದಾಗ ತಾನು ಸಹಿತ ಪರಕೀಯರ ವಿರುದ್ದ ಹೋರಾಟ ಮಾಡಬೇಕು, ಅವರನ್ನು

ತಾಯ್ನಾಡಿನಿಂದ ಹೊರಹಾಕಬೇಕು, ಮಾತೃ ಭೂಮಿಯನ್ನು ಪರಿಕೀಯರ ಬಂಧನದಿಂದ ವಿಮುಕ್ತಿಗೊಳಿಸಬೇಕೆಂಬ ಕನಸನ್ನು ಕಾಣುತ್ತಿದ್ದನು.

೫ನೇ ತರಗತಿಯ ನಂತರ ಉನ್ನತ ವ್ಯಾಸಂಗ ಮಾಡಲು ಆರ್ಥಿಕ ಅಡಚಣೆ ಇದ್ದ ಕಾರಣ ಇವರ ತಂದೆ ಮಲ್ಲಪ್ಪ ಗಲಗ್ ತನ್ನ ಮಗನನ್ನು ದನಗಳನ್ನು ಮೇಯಿಸುವ ಕೆಲಸಕ್ಕೆ ತೊಡಗಿಸಿದನು. ೧೮ನೇ ವಯಸ್ಸಿನಲ್ಲಿ ಶ್ರೀಮತಿ ನರಸಮ್ಮ ಎಂಬುವವರನ್ನು ವಿವಾಹವಾದರು. ಅದೇ ವೇಳೆಗೆ ಗುಲಬರ್ಗಾ ಜಿಲ್ಲೆಯಲ್ಲಿ ರಜಾಕರರ ಧಾಳಿ ಪ್ರಾರಂಭವಾಗಿತ್ತು. ಹಿಂದುಗಳ ಆಸ್ತಿ-ಪಾಸ್ತಿಯನ್ನು ಲೂಟಿ ಮಾಡುವುದು, ಹಿಂದು ಮಹಿಳೆಯ ಮಾನ ಹರಣ ಮಾಡುವದು ಇತ್ಯಾದಿ ಹೀನ ಕೃತ್ಯಗಳಲ್ಲಿ ತೊಡಗಿದ್ದರು. ಹಿಂದುಗಳು ರಜಾಕರರ ವಿರುದ್ದ ಏನು ಮಾಡುವಂತಿರಲಿಲ್ಲ, ಏಕೆಂದರೆ ಅವರ ಸ್ವಂತ ಬಸ್ಸು, ರೈಲು, ಪೋಲಿಸರು, ಸೈನ್ಯ, ಮತ್ತು ನಾಣ್ಯ ಇತ್ಯಾದಿ ಇದ್ದು ಅವರ ವಿರುದ್ದ ತಲೆ ಎತ್ತಿದರೆ ಅವರನ್ನು ಕ್ರೂರವಾಗಿ ಶಿಕ್ಷಿಸುತ್ತಿದ್ದರು. ಅಂತಹ ವೇಳೆಯಲ್ಲಿ ಅಚ್ಚಪ್ಪ ಗೌಡರು, ಜಗನ್ನಾಥರಾವ ಚಂಡ್ರಿಕಿ, ದತ್ತಾತ್ರೇಯ ಅವರಾದಿ, ವಿಶ್ವನಾಥರೆಡ್ಡಿ ಮುದ್ನಾಳ, ಮಲ್ಲಪ್ಪ ಕೊಲೂರು ಹಾಗೂ ರಾಜ ವೆಂಕಟಪ್ಪ ನಾಯಕರು ಈ ಭಾಗದ ಜನರನ್ನು ಜಾಗೃತ ಗೊಳಿಸಿ ರಜಾಕರರ ದಾಳಿಯನ್ನು ಹತ್ತಿಕ್ಕುವ ಯತ್ನ ಮಾಡಿದರು. ಗಡಿ ಭಾಗದ ಮೇಲೆ ಹಲವರು ಸ್ವಯಂ ಸೇವಕರ ಶಿಬಿರವನ್ನು ಪ್ರಾರಂಭಿಸಿ ತರಬೇತಿಯನ್ನು ಕೊಡುತ್ತಿದ್ದರು.

ಆ ಶಿಬಿರದ ಸಕ್ರೀಯ ಸದಸ್ಯನಾದ ನಾನು ಶಿಬಿರದಿಂದ ಶಿಬಿರಕ್ಕೆ ಸುದ್ದಿ ಸಮಾಚಾರವನ್ನು ತಲುಪಿಸುತ್ತಿದ್ದೆ. ಇದರಿಂದಾಗಿ ನನ್ನ ಕಾರ್ಯ ಚಟುವಟಿಕೆಯನ್ನು ನಿಯಂತ್ರಿಸಲು (ನಿಜಾಮನ) ಪೋಲಿಸರು ನನ್ನನ್ನು ಬಂಧಿಸಿ ಗುಲಬರ್ಗಾ ಜೈಲಿನಲ್ಲಿಟ್ಟು ಆರು ತಿಂಗಳು ಸಾಮಾನ್ಯ ಶಿಕ್ಷೆ ಕೊಟ್ಟರು.

೧೯೪೮ ಸೆಪ್ಟೆಂಬರ್ ೧೭ರಂದು ಪಟೇಲರ ಪೋಲೀಸ ಕಾರ್ಯಾಚರಣೆಯ ವೇಳೆಯಲ್ಲಿ ಯಲ್ಲಪ್ಪನವರು ಗುಲಬರ್ಗಾ ಜೈಲಿನಲ್ಲಿ ಇದ್ದರು. ಇವರ ತಾಯಿಯವರು ಬಂದು ಜೈಲಿನ ಮೇಲಾಧಿಕಾರಿಯನ್ನು ವಿನಂತಿಸಿಕೊಂಡಾಗ ಸ್ವತಃ ಯಲ್ಲಪ್ಪನೇ ಕ್ಷಮೆಯನ್ನು ಕೇಳಿದರೆ ಮಾತ್ರ ಬಿಡುಗಡೆ ಮಾಡುತ್ತೇವೆ ಎಂದು ಹೇಳಿದರು. ತಾಯಿಯು ಯಲ್ಲಪ್ಪನವರನ್ನು ಒತ್ತಾಯ

ಮಾಡಿದಾಗ ಮುಂದೆ ಇಟ್ಟ ಹೆಜ್ಜೆ ಹಿಂದೆ ಇಡುವುದಿಲ್ಲ, ಅವರು ಯಾವ ಶಿಕ್ಷೆ ಕೊಟ್ಟರು ಅನುಭವಿಸಲು ಸಿದ್ದ ಎಂದು ಹೇಳಿದರು. ಪೋಲೀಸ ಕಾರ್ಯಾಚರಣೆಯ ನಂತರ ಯಲ್ಲಪ್ಪ ನನ್ನು ಬಿಡುಗಡೆ ಮಾಡಿದರು.

ಹಿಂದಿನ ರಾಜಕೀಯ ವ್ಯವಸ್ಥೆ ನಿಸ್ವಾರ್ಥ ಮತ್ತು ಕಳಂಕ ರಹಿತವಾಗಿತ್ತು. ಆಗಿನ ನಾಯಕರಲ್ಲಿ ಜನಸೇವಾ ಮನೋಭಾವನೆ ಇತ್ತೇ ವಿನಃ ಅಧಿಕಾರದ ವ್ಯಾಮೋಹವಾಗಲಿ, ಲಂಚ ರುಸುವತ್ತುಗಳಂತಹ ದುರಾಸೆಗಳಾಗಲಿ ಇರಲಿಲ್ಲ. ಇಂದು ಸ್ವಾತಂತ್ರ್ಯದ ಸೋಗಿನಲ್ಲಿ ಬಡವರ ಶೋಷಣೆ, ಅನ್ಯಾಯ, ಅತ್ಯಾಚಾರ ಮತ್ತು ಅಧಿಕಾರಕ್ಕಾಗಿ ಕಚ್ಚಾಟ ನಡೆಯುತ್ತಿದೆ ಎಂದು ನೊಂದು ನುಡಿದರು.

ಇವರಿಗೆ ನಾಲ್ಕು ಜನ ಗಂಡು ಮಕ್ಕಳು ಮತ್ತು ನಾಲ್ಕು ಜನ ಹೆಣ್ಣುಮಕ್ಕಳು ಇದ್ದು ಈಗಲೂ ಪಾದರಸದಂತೆ ತಿರುಗಾಡುತ್ತಾ ಪ್ರಸ್ತುತ ದೇಶದಲ್ಲಿಯ ರಾಜಕೀಯ ವ್ಯವಸ್ಥೆ ಕುರಿತು ಕಳಕಳಿಯ ಚಿಂತನೆ ಮಾಡುತ್ತಾರೆ. ರಾಜಕೀಯದಿಂದ ದೂರವಿದ್ದ ಶ್ರೀ ಯಲ್ಲಪ್ಪನವರಿಗೆ ರಾಜಕೀಯ ಜ್ಞಾನವಿದ್ದರು, ಅದು ಉಪಯೋಗವಿಲ್ಲದಂತಾಗಿದೆ.

**೩.೭.೨. ಶ್ರೀ ಮಲ್ಲಪ್ಪ ತಂದೆ ಸೋಪಣ್ಣ ಕರಿಗುಡ್ಡ** (ಭಾವಚಿತ್ರ ೩.೧೫ ನೋಡಿ)

| | | |
|---|---|---|
| ೧. ಹೆಸರು | : | ಮಲ್ಲಪ್ಪ(ಪಿ. ಸಂ. ೧೮೯) |
| ೨. ತಂದೆ /ತಾಯಿ | : | ಸೋಪಣ್ಣ ಮತ್ತು ನರಸಮ್ಮ |
| ೩. ಊರು ಮತ್ತು ತಾಲೂಕಾ | : | ಸಗರ, ಶಾಹಪೂರ. |
| ೪. ವಯಸ್ಸು | : | ೭೬. |
| ೫. ಜಾತಿ | : | ಬೇಡರು. |

ಶ್ರೀ ಸೋಪಣ್ಣ ಮತ್ತು ಶ್ರೀಮತಿ ನರಸಮ್ಮ ಎಂಬ ದಂಪತಿಗಳ ಗರ್ಭದಲ್ಲಿ ಮಲ್ಲಪ್ಪ ಶಾಹಪುರ ತಾಲೂಕಿನ ಸಗರ ಎಂಬ ಗ್ರಾಮದಲ್ಲಿ ಜನಿಸಿದನು. ಬೇಡ ಸಮುದಾಯದಲ್ಲಿ ಜನಿಸಿದ ಮಲ್ಲಪ್ಪನು ದೈಹಿಕವಾಗಿ, ಗಟ್ಟಿಮುಟ್ಟಾಗಿದ್ದು, ಮಾನಸಿಕವಾಗಿ ದೃಢವಾಗಿದ್ದನು. ಮನಸ್ಸಿನಲ್ಲಿ ಮೂಡಿದ್ದನ್ನು ಮಾಡದೇ ಬಿಡುತ್ತಿರಲಿಲ್ಲ. ಆರ್ಥಿಕ ತೊಂದರೆಯಿಂದ ಅಕ್ಷರ

ಜ್ಞಾನದಿಂದ ವಂಚಿತನಾದ ಶ್ರೀ ಮಲ್ಲಪ್ಪ ಕರಿಗುಡ್ಡ ಬಾಲ್ಯದಲ್ಲಿ ತುಂಬ ತುಂಟನಾಗಿದ್ದು ಒಂದಿಲ್ಲ ಒಂದು ರೀತಿಯ ಜಗಳವನ್ನು ಕಾಯುತ್ತಿದ್ದನು. ಆದ್ದರಿಂದ ಇವರ ತಂದೆ ಬಾಲ್ಯದಲ್ಲಿ ದನಗಳನ್ನು ಮೇಯಿಸಲು ತೊಡಗಿಸಿದನು. ಸಗರ ನಾಡು ಚಿಕ್ಕ ಪುಟ್ಟ ಬೆಟ್ಟಗಳಿಂದ ಕೂಡಿದ್ದಿತ್ತು. ದಿನಾಲು ಬೆಟ್ಟಗಳ ಮೇಲೆ ೫೦ಕ್ಕಿಂತ ಹೆಚ್ಚು ದನಗಳನ್ನು ಮೇಯಿಸಲು ಹೋದ ಬಾಲಕ ಮಲ್ಲಪ್ಪನಿಗೆ ಅದನ್ನು ಏರಿ ಇಳಿಯುವದರಿಂದ ಉತ್ತಮ ವ್ಯಾಯಮವಾಗಿ ದೈಹಿಕವಾಗಿ ದೃಢಕಾಯನಾಗಲು ಸಹಾಯವಾಯಿತು.ಅಲ್ಲಿ ಅವನ ಸಂಗಡಿಗರೊಂದಿಗೆ ಕುಸ್ತಿ ಮತ್ತು ಭಾರ ಎತ್ತುವ ಕಲೆಯನ್ನು ಕರಗತಮಾಡಿಕೊಂಡನು. ಧೈರ್ಯ ಸಾಹಸಗಳು ಮಲ್ಲಪ್ಪನಿಗೆ ಸಮುದಾಯದಿಂದ ಬಳುವಳಿಯಾಗಿ ಬಂದಿದ್ದವು.

18ನೇ ವಯಸ್ಸಿನಲ್ಲಿ ಶರಣಮ್ಮ ಎಂಬಾಕೆಯನ್ನು ಕೈಹಿಡಿದನು. ಅದೇ ವೇಳೆಗೆ ಗುಲಬರ್ಗಾ ಜಿಲ್ಲೆಯ ಪ್ರಮುಖ ಹೋರಾಟಗಾರರಾದ ಅಚ್ಚಪ್ಪಗೌಡರು, ನಂದಿಕೋಲು ಶಿವಪ್ಪ, ಮಲ್ಲಪ್ಪ ಕೊಲೂರು, ಜಗನ್ನಾಥರಾವ್ ಚಂಡ್ರಕಿ ಇವರೆಲ್ಲರ ಪರಿಚಯವಾಯಿತು. ಇವರ ಪ್ರೇರಣೆಯಿಂದ ಮಲ್ಲಪ್ಪ ಬದುಕಿನಲ್ಲಿ ಹೊಸ ತಿರುವು ಮೂಡಿತು. **ಕೋಲು ಹಿಡಿಯುವ ಕೈ ಖಡ್ಗ ಹಿಡಿಯಿತು.** ಎಂಬಂತೆ ಮಲ್ಲಪ್ಪನವರು ರಾಜ ವೆಂಕಟಪ್ಪ ನಾಯಕರ ನೇತೃತ್ವದಲ್ಲಿ ತಾಳಿಕೋಟೆಯ ಜನಹಿತ ಶಿಬಿರದಲ್ಲಿ ಸ್ವಯಂ ಸೇವಕ ತರಬೇತಿಯನ್ನು ಪಡೆದುಕೊಂಡು, ನಿಜಾಮ ಸರಕಾರದ ವಿರುದ್ಧ ಗಡಿ ಭಾಗದ ಮೇಲೆ ಲೂಟಿ, ದಂಗೆ, ಗಲಾಟೆ, ಪ್ರಾರಂಭಿಸಿ ಅವನ ಸೈನಿಕರಿಗೆ ನುಂಗಲಾರದ ತುತ್ತಾದರು.

ಹೋರಾಟಗಾರರ ಕಾರ್ಯ ಚಟುವಟಿಕೆಯನ್ನು ನಿಯಂತ್ರಿಸಲು ನಿಜಾಮನು ತನ್ನ ಸೈನಿಕರ ಸಹಾಯದಿಂದ ಸಾಕಷ್ಟು ಪ್ರಯತ್ನ ಮಾಡಿದನು. ಅದರಲ್ಲಿ ಕೆಲವರು ರಜಾಕಾರರ ಗುಂಡಿಗೆ ಬಲಿಯಾದರು ಇನ್ನು ಕೆಲವರನ್ನು ನಿಜಾಮನ ಪೋಲೀಸರು ಬಂಧಿಸಿ ಜೈಲಿನಲ್ಲಿ ಇಟ್ಟರು. ಅದೇ ವೇಳೆಗೆ ಹೈದ್ರಾಬಾದ ನಿಜಾಮನ ಸಂಸ್ಥಾನದ ಮೇಲೆ ಪೋಲೀಸ್ ಕಾರ್ಯಚರಣೆ ನಡೆಯಿತು. ಸ್ವತಃ ನಿಜಾಮನೆ ಒಕ್ಕೂಟ ಸರಕಾರಕ್ಕೆ ಶರಣಾದನು. ಗುಲಬರ್ಗಾ ಜಿಲ್ಲೆಯು ನಿಜಾಮನ ನಿಯಂತ್ರಣದಿಂದ ವಿಮೋಚನೆ ಪಡೆಯಿತು. ಇಂತಹ ಮಹಾನ್ ಹೋರಾಟಗಾರನಿಗೆ ಜನ್ಮ ನೀಡಿದ ಗುಲಬರ್ಗಾ ಜಿಲ್ಲೆ ಧನ್ಯ ಎಂದು ಹೆಮ್ಮೆಯಿಂದ ಹೇಳಬಹುದು.

ಬೇಡ ಜನರು ಜೀವಕ್ಕೆ ಭಯ ಪಡದೆ ಒಡೆಯನ ಆದೇಶವನ್ನು ಪ್ರಾಮಾಣಿಕತೆಯಿಂದ ಪಾಲಿಸುವ ನಿಷ್ಠಾವಂತರು, ನಂಬಿಕೆಗೆ ಎಂದು ದ್ರೋಹಮಾಡವವರಲ್ಲ. ಹೋರಾಟ ಮಾಡುವುದಂತು ಈ ಸಮುದಾಯಕ್ಕೆ ನೀರು ಕುಡಿದಷ್ಟೆ ಸುಲಭ.ಒಡೆಯನು ಅಪ್ಪಣೆ ನೀಡಿದರೆ ವೈರಿಯ ಮೇಲೆ ಹುಲಿಯಂತೆ ಎರಗುತ್ತಾರೆ ವಿನಃ ಹೇಡಿಯಂತೆ ಅಂಜಿ ಬೆನ್ನು ಕೊಟ್ಟು ಓಡುವದು ಇವರ ಜೀವಮಾನದಲ್ಲಿಯೇ ಇಲ್ಲ.

ಈಗಿನ ರಾಜಕೀಯ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಕೇಳಿದ ಹಲವಾರು ಪ್ರಶ್ನೆಗಳಿಗೆ ವ್ಯಂಗ್ಯವಾಗಿ ನಗುತ್ತ, ಸ್ವಾರ್ಥಿಗಳಿಂದ ತುಂಬಿದ ಭ್ರಷ್ಟ ರಾಜಕೀಯ ಬಗ್ಗೆ ದಯವಿಟ್ಟು ಪ್ರಶ್ನೆ ಕೇಳಿ ಕೆರಳಿಸ ಬೇಡಿರಿ ಎಂದು ಪ್ರತಿಕ್ರಿಯೆ ವ್ಯಕ್ತಪಡಿಸುವರು.

**೩.೭.೩. ಶ್ರೀ ಹಣಮಂತ ತಂದೆ ಭಗವಂತಪ್ಪ ಸಗರ** (ಭಾವಚಿತ್ರ ೩.೧೬ ನೋಡಿ)

| | | |
|---|---|---|
| ೧. ಹೆಸರು | : | ಹಣಮಂತಪ್ಪ |
| ೨. ತಂದೆ : ತಾಯಿ | : | ಭಗವಂತಪ್ಪ, ಸಾಬವ್ವ. |
| ೩. ಊರು ಮತ್ತು ತಾಲೂಕು | : | ಸಗರ ಮತ್ತು ಶಾಹಾಪೂರ. |
| ೪. ಜಾತಿ | : | ಬೇಡರ. |
| ೫. ವಯಸ್ಸು | : | ೭೧ |

ಭಗವಂತಪ್ಪ ಮತ್ತು ಸಾಬವ್ವ ಎಂಬುವವರ ಮಗ ಹಣಮಂತಪ್ಪ, ಬೇಡ ಸಮುದಾಯದಲ್ಲಿ ಶಾಹಾಪೂರ ತಾಲೂಕಿನ ಸಗರ ಗ್ರಾಮದಲ್ಲಿ ಜನಿಸಿದನು. ಈ ಸಮುದಾಯ ಯಾವುದೇ ಸ್ಥಿರಾಸ್ತಿ ಹೊಂದಿರಲಿಲ್ಲ. ಮೈ ಮುರಿದು ದುಡಿಯುವದನ್ನು ಮಾತ್ರ ಬೆಳೆಸಿಕೊಂಡಿದ್ದರು. ಇವರ ತಂದೆ ಭಗವಂತಪ್ಪನು ಕೂಲಿ ಮಾಡುವದರಿಂದ ಬಾಲಕ ಹಣಮಂತಪ್ಪನಿಗೆ ಶಾಲೆಗೆ ಕಳುಹಿಸಲು ಆಗಲಿಲ್ಲ. ೮ನೇ ವಯಸ್ಸಿನಿಂದ ಹಣಮಂತಪ್ಪನು ತಾಯಿ ಸಾಬವ್ವನ ಜೊತೆಗೆ ಚಿಕ್ಕ ಪುಟ್ಟ ಕೂಲಿ ಮಾಡಲು ಹೋಗುತ್ತಿದ್ದನು. ಈ ಸಮುದಾಯದ ವಿಶೇಷತೆ ಎಂದರೆ ಮಾಂಸ ಹಾರಿಗಳಾಗಿದ್ದು ಊಟಕ್ಕೆ ಮಾತ್ರ ಯಾವುದೇ ರೀತಿಯ ತೊಂದರೆ ಪಡುತ್ತಿರಲಿಲ್ಲ. ಶ್ರಮವಹಿಸಿ ದುಡಿದು ಹೊಟ್ಟೆ ತುಂಬ ತಿನ್ನುವದೆ ಈ ಸಮುದಾಯದ ರೂಢಿಯಾಗಿತ್ತು.

ಬಿಡುವಿನ ವೇಳೆಯಲ್ಲಿ ಸಂಗಡಿಗರ ಜೊತೆಗೆ ಸಗರದ ಗುಡ್ಡಗಳಲ್ಲಿ, ಹಳ್ಳ-ಕೊಳ್ಳಗಳಲ್ಲಿ ಬೇಟೆ ಯಾಡಲು ಹೋಗುತ್ತಿದ್ದನು. ಇದರಿಂದ ಬಾಲಕ ಹಣಮಂತಪ್ಪನು ದೈಹಿಕವಾಗಿ ಬಲಿಷ್ಠನಾಗಿ ಬೆಳೆದನು 15ನೇ ವಯಸ್ಸಿನಲ್ಲಿ ಹಣಮಂತಪ್ಪನ್ನು ಲಕ್ಷ್ಮವ್ವ ಎಂಬ ಹುಡಿಗಿಯ ಕೈ ಹಿಡಿದು ಸಂಸಾರಿಕ ಜೀವನವನ್ನು ಪ್ರಾರಂಭಿಸಿದನು. ಆ ವೇಳೆಯಲ್ಲಿ ಅವನ ಸ್ನೇಹಿತರಾದ ಯಲ್ಲಪ್ಪ ಗಲಗ್, ಮತ್ತು ಮಲ್ಲಪ್ಪ ಇವರ ಪ್ರಭಾವದಿಂದ ತಾನು ಸಹಿತ ಅವರ ಜೊತೆಗೆ ಸೇರಿಕೊಂಡು ರಜಾಕಾರರ ವಿರುದ್ದ ಹೋರಾಡುವ ಕನಸನ್ನು ಕಾಣುತ್ತಿದ್ದನು. ಆದರೆ ಹಣಮಂತಪ್ಪನ ತಂದೆ ತಾಯಿಗಳು ತಾವು ಬಡವರು, ತಮಗೆಕೆ ಈ ಎಲ್ಲಾ ಜಗಳಗಳು ಎಂದು ಮಗನಿಗೆ ಬುದ್ದಿವಾದ ಹೇಳಿದರು. ಆದರೆ ಹಣಮಂತಪ್ಪನ ಯೌವನದ ಬಿಸಿ ರಕ್ತ ಮನೆಯಿಂದ ತಪ್ಪಿಸಿಕೊಂಡು ಹೋಗುವಂತೆ ಪ್ರೇರೆಪಿಸಿತು. ಓಡಿ ಹೋದ ಹಣಮಂತಪ್ಪ ತಾಳಿಕೋಟೆಯ ಜನಹಿತ ಶಿಬಿರದಲ್ಲಿ 70 ಜನರಲ್ಲಿ ಈತನು ಒಬ್ಬನು .

ತರಬೇತಿ ಪಡೆದ ಹಣಮಂತಪ್ಪ ತಮ್ಮ ಹಿರಿಯ ನಾಯಕರ ಸಲಹೆಗಳಂತೆ ತನ್ನ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದನು. ಈತನ ಶೌರ್ಯ ಸಹಾಸ ಶಿಬಿರದ ಮೇಲಾಧಿಕಾರಿ ಗಳಾದ ಶ್ರೀ ರಾಜ ವೆಂಕಟಪ್ಪ ನಾಯಕರು ಮೆಚ್ಚಿಕೊಂಡು ನಿಜವಾಗಲು ದೊರೆಗಳ ರಕ್ತ ನಿನ್ನ ಮೈಯಲ್ಲಿ ಹರಿಯುತ್ತಿದೆ ಎಂದು ಹೇಳಿ ಬೆನ್ನು ತಟ್ಟದರು.

ತಾಳಿಕೋಟೆಯಲ್ಲಿ ಸುರಪುರದ ರಾಜ ವೆಂಕಟಪ್ಪ ನಾಯಕರು ಜನಹಿತ ಶಿಬಿರದ ಪ್ರಮುಖರಾಗಿದ್ದು ಅವರಿಗೆ ಅಪ್ಪರಾವ ವಕೀಲರು ಸಹಾಯ ಮಾಡಿದರು 70 ಜನ ಸ್ವಯಂ ಸೇವಕರು ಮುದ್ನೂರು ಮೇಲೆ ದಾಳಿ ಮಾಡಿ ಈ ಗ್ರಾಮವನ್ನು ರಜಾಕಾರರಿಂದ ತಮ್ಮ ವಶಕ್ಕೆ ತೆಗೆದುಕೊಂಡರು. ಹಣಮಂತಪ್ಪನು ಗಡಿ ಭಾಗದ ಮೇಲೆ ಭೂಗತರಾಗಿ ಕಾರ್ಯಮಾಡುತ್ತಿರು ವುದರಿಂದ ಇವನ ಮೇಲೆ ಸಂಶಯ ಬಂದು ನಿಜಾಮನ ಸೈನಿಕರು ಹಿಡಿಯಲು ಕೆಂಭಾವಿಯಲ್ಲಿ ಪ್ರಯತ್ನಪಟ್ಟರು ಇವರು ಐದು ಜನರು ಅದರಲ್ಲಿ ಅಚ್ಚಪ್ಪ ಗೌಡರು ಇದ್ದರು ಅಮವಾಸೆಯ ಕತ್ತಲು ರಾತ್ರಿ ಹುಣಸಿಗಿವರೆಗೆ ತಿರುಗಿ ನೋಡದಂತೆ ಓಡಿ ಹೋಗಿ ತಪ್ಪಸಿಕೊಂಡರು. ಒಂದು ವಾರದ ತರುವಾಯ ನಿಜಾಮನು ಒಕ್ಕೂಟ ಸರಕಾರಕ್ಕೆ ಮಣಿದು ಶರಣಾದನು. ಆಗ ಸ್ವಯಂ ಸೇವಕರು ಸಗರ ಗ್ರಾಮಕ್ಕೆ ವಾಪಸಾಗಿ ತ್ರಿವರ್ಣ ಧ್ವಜವನ್ನು ಹಾರಿಸಿ ಆನಂದ ಪಟ್ಟರು. ಈಗ

ಹಣಮಂತಪ್ಪ ಮೂರು ಗಂಡು ಎರಡು ಹೆಣ್ಣು ಮಕ್ಕಳನ್ನು ಹೊಂದಿದ್ದು ತಮ್ಮ ಸ್ವಗ್ರಾಮದಲ್ಲಿ ವಿಶ್ರಾಂತಿ ಜೀವನವನ್ನು ಸಾಗಿಸುತಿದ್ದಾರೆ.

**೩.೭.೪. ಶ್ರೀ ದ್ಯಾವಪ್ಪ ತಂದೆ ಹಣಮಂತ ಮೋರೆಯವರು** (ಭಾವಚಿತ್ರ ೩.೧೭ ನೋಡಿ)

| | | |
|---|---|---|
| ೧. ಹೆಸರು | : | ದ್ಯಾವಪ್ಪ (ಪಿ.ಸಂ. ೩.೨೧) |
| ೨. ತಂದೆ/ತಾಯಿ | : | ಹಣಮಂತ ಮತ್ತು ಬಸ್ಸಮ್ಮ |
| ೩. ಊರು ಮತ್ತು ತಾಲೂಕು | : | ಸಗರ ಮತ್ತು ಶಹಾಪುರ. |
| ೪. ವಯಸ್ಸು | : | ೭೮ |
| ೫. ಜಾತಿ | : | ಬೇಡರು |

ಹಣಮಂತ ಮತ್ತು ಬಸಮ್ಮನವರ ಮಗನೇ ಈ ಮಹಾನ್ ಸ್ವಾತಂತ್ರ್ಯ ಹೋರಾಟಗಾರ ಶ್ರೀ ದ್ಯಾವಪ್ಪ ಮೋರೆಯವರು ಇವರು ಸಗರ ನಾಡಿನಲ್ಲಿ ಹುಟ್ಟಿದರು. ಇವರ ತಂದೆಯ ತಂದೆ ಅಂದರೆ ತಾತ ಸುರುಪುರ ಸಂಸ್ಥಾನದಲ್ಲಿ ಚಿಕ್ಕ ಸೈನಿಕನಾಗಿದ್ದನು. ಆಗ ಬ್ರಿಟಿಷ ನಿಯಂತ್ರಣದಲ್ಲಿ ಇದ್ದ ಸುರುಪುರದ ಬೇಡ ಸೈನಿಕರನ್ನು ಕೀಳಾಗಿ ಕಾಣುತ್ತಿದ್ದ ಬ್ರಿಟಿಷ ಅಧಿಕಾರಿಯಿಂದ ನೊಂದ ರಾಮಣ್ಣ ನಾಯಕ ಎಂಬುವವರು ಸಗರ ಗ್ರಾಮಕ್ಕೆ ಬಂದು ಸೇರಿಕೊಂಡರು. ಸಗರ ಗ್ರಾಮದಲ್ಲಿ ಶ್ರೀ ಹಣಮಂತ ನಾಯಕನು ಯಾವದೇ ಆಸ್ತಿಯನ್ನು ಹೊಂದಿರಲಿಲ್ಲ, ಚಿಕ್ಕದಾದ ಒಂದು ಗುಡಿಸಲು ಹೊಂದಿದ್ದು ಅಚ್ಚಪ್ಪಗೌಡರ ತಂದೆಯ ದೇವಿಂದ್ರಪ್ಪಗೌಡರ ಕೈ ಕೆಳಗೆ ಹೇಳಿದ ಕೆಲಸ ಮಾಡುತ್ತಿದ್ದರು. ತಂದೆಯಿಂದ ಆಗಾಗ ದ್ಯಾವಪ್ಪ ಗೌಡರ ಮನೆಗೆ ಹೋಗಿ ಬರುವದರಿಂದ ಬಾಲಕ ದ್ಯಾವಪ್ಪನಿಗೆ ಅಚ್ಚಪ್ಪ ಗೌಡರ ಸ್ನೇಹ ಬೆಳೆಯಿತು. **ಸಂಘದಂತೆ ಫಲ**, ಎನ್ನುವಂತೆ ಅಚ್ಚಪ್ಪ ಗೌಡರು ಚಿಕ್ಕಂದಿನಿಂದಲು ಸಣ್ಣ - ಪುಟ್ಟ ಸಂಘ ಕಟ್ಟಿ ಅದರ ಅಧ್ಯಕ್ಷತೆ ವಹಿಸುತ್ತಿದ್ದರು. ಅದರಲ್ಲಿ ದ್ಯಾವಪ್ಪನನ್ನು ಸೇರಿಸಿಕೊಂಡಿದ್ದರು. ಅವಿದ್ಯಾವಂತನಾದ ಶ್ರೀ ದ್ಯಾವಪ್ಪನನ್ನು ಯಾವದೇ ಕಾರ್ಯ ಮಾಡುವಾಗ ಬಿಟ್ಟು ಮಾಡುತ್ತಿರಲಿಲ್ಲ . ಏಕೆಂದರೆ ಅವನು ಉತ್ತಮ ತಿಳುವಳಿಕೆ ಮತ್ತು ನಿಷ್ಠಾವಂತ ಹಾಗೂ ಎಂದು ಸುಳ್ಳಾಡದ ವ್ಯಕ್ತಿಯೆಂಬುವದು ಗೌಡರಿಗೆ ದೃಢ ನಂಬಿಕೆ ಇತ್ತು.

ಅದೇ ವೇಳೆಯಲ್ಲಿ ಸಗರದ ಮೇಲೆ ನಿಜಾಮನ ಸೈನಿಕರು ಹಲವಾರು ಸಲ ದಾಳಿಮಾಡಿ ಆಸ್ತಿ-ಪಾಸ್ತಿ ಲೂಟಿ ಮಾಡಿದ್ದರು. ಮತ್ತು ಮುಗ್ದ ಜನರನ್ನು ಹೆದರಿಸಿ ಹಣ ಆಸ್ತಿಯನ್ನು ಕದ್ದುಕೊಂಡು ಹೋಗಿದ್ದರು. ಅದಕ್ಕಿಂತ ಮುಖ್ಯವಾಗಿ ಕೋಮು ಭಾವನೆಯಿಂದ ಹಿಂದೂಗಳನ್ನು ತೀವ್ರವಾಗಿ ಖಂಡಿಸುತ್ತಿದ್ದರು.

15 ಕ್ಕಿಂತ ಹೆಚ್ಚು ಸ್ವ ಇಚ್ಚೆಯುಳ್ಳ ಯುವಕರನ್ನು ಶಿಬಿರದಲ್ಲಿ ಸೇರಿಸಿಕೊಂಡು ಅವರಿಗೆ ರಜಾಕಾರರನ್ನು ಹಿಮ್ಮೆಟ್ಟಿಸುವ ತಂತ್ರವನ್ನು ಕಲಿಯಲು ತಾಳಿಕೋಟೆ ಮತ್ತು ದುದುನಿ ಜನಹಿತ ಶಿಬಿರಗಳಿಗೆ ಕಳಿಸಿದರು. ಅದರಲ್ಲಿ ದ್ಯಾವಪ್ಪನು ಬಿಸಿರಕ್ತ ತುಂಬಿದ ಯೌವನದಿಂದ ಕಠಿಣ ತರಬೇತಿ ಪಡೆದು ಅಚ್ಚಪ್ಪಗೌಡರ ನಿಷ್ಠಾವಂತ ಮತ್ತು ಬಲಗೈ ಬಂಟನೆಂದೆ ಹೆಸರು ಪಡೆದನು. ದ್ಯಾವಪ್ಪ ಗೌಡರ ಪ್ರತಿಯೊಂದು ದಂಗೆಯಲ್ಲಿ ಮುಂಚೂಣಿಯಲ್ಲಿದ್ದು ಅವರ ಸೂಚನೆಯಂತೆ ಕೆಲಸ ನಿರ್ವಹಿಸುತ್ತಿದ್ದನು.

ಹುಲಿಯಂತಹ ದೇಹವುಳ್ಳ ಶ್ರೀ ದ್ಯಾವಪ್ಪನನ್ನು ಕಂಡು ರಜಾಕಾರರು ಹೆದರಿದ್ದುಂಟು. ಯಾವಾಗಲೂ ಬಿಚ್ಚು ಗತ್ತಿ ಹಿಡಿದು ತಿರುಗಾಡುವ ಸ್ವಭಾವವುಳ್ಳ ದ್ಯಾವಪ್ಪನನ್ನು ಹಿಡಿಯಲು ರಜಾಕಾರರು ಎಷ್ಟೋ ಪ್ರಯತ್ನ ಪಟ್ಟರು. ಆದರೆ ಸಾಧ್ಯವಾಗಲಲ್ಲಿ. ಏಕೆಂದರೆ ಅವನ ದೈಹಿಕ ಸಾಮರ್ಥ್ಯ ಹಾಗೂ ಅವನ ಮುಂದಾಲೋಚನೆ ಮತ್ತು ಚುರುಕುತನಗಳು ಅವನನ್ನು ಯಶಸ್ವಿ ಹೋರಾಟಗಾರನನ್ನಾಗಿ ಮಾಡಿದವು. 1948ರ ಸೆಪ್ಟಂಬರ್ 17ನೇ ತಾರೀಖು ಹೈದ್ರಾಬಾದ ವಿಮೋಚನೆಯಾದ ನಂತರ ತಮ್ಮ ತವರೂರು ಸಗರಿಗೆ ಹಿಂತಿರುಗಿದಾಗ ದ್ಯಾವಪ್ಪನನ್ನು ಊರಿನ ಪ್ರಮುಖರು ಸ್ವಾಗತಿಸಿದರು. ಇಂದಿನ ರಾಜಕೀಯ ಮತ್ತು ಜನರ ತಂತ್ರವನ್ನು ಟೀಕಿಸಿದ ದ್ಯಾವಪ್ಪ ಹೆಚ್ಚು ಏನನ್ನೂ ಹೇಳದೆ ಜಾರಿಕೊಂಡರು.

**೩.೭.೫. ಶ್ರೀ ಸಾಬಣ್ಣ ತಂದೆ ಹಣಮಂತ**

ಸಂದರ್ಶನ ನೀಡಿದವರು : ಸಾಬಮ್ಮ ಮುದ್ನಾಳ (ಹೆಂಡತಿ)

| | | |
|---|---|---|
| ೧. ಹೆಸರು | : | ಸಾಬಣ್ಣ |
| ೨. ತಂದೆ :ತಾಯಿ | : | ಹಣಮಂತ ಮತ್ತು ಶಾಂತಮ |

೩. ವಯಸ್ಸು : ೮೦(ತೀರಿಕೊಂಡಿದ್ದಾನೆ)

೪. ಊರು ಮತ್ತು ತಾಲೂಕು : ಯಾದಗಿರಿ

೫. ಜಾತಿ : ಬೇಡರು.

ಹಣಮಂತ ಮತ್ತು ಶಾಂತಮ್ಮನವರ ಮಗನಾದ ಸಾಬಣ್ಣನು ಯಾದಗಿರಿ ಪಟ್ಟಣದಲ್ಲಿ ಜನಿಸಿದನು. ಅಕ್ಷರದಿಂದ ವಂಚಿತನಾದ ಶ್ರೀ ಸಾಬಣ್ಣನು 18ನೇ ವರ್ಷದಲ್ಲಿ ಸಹೋದರಿಯ ಮಗಳಾದ ಸಾಬವ್ವ ಎಂಬುವವರ ಕೈ ಹಿಡಿದು ಸಣ್ಣ ಪುಟ್ಟ ಕೆಲಸಗಳನ್ನು ಮಾಡಿಕೊಂಡು ಜೀವಿಸುತ್ತಿದ್ದನು. ಇದೇ ಸ್ಥಳದಲ್ಲಿ ಸ್ನೇಹಿತರಾದ ವಿಶ್ವನಾಥರೆಡ್ಡಿ ಮುಧ್ನಾಳ, ಜಗನಾಥರಾವ್ ಚಂಡರಿಕಿ ಮತ್ತು ವಿದ್ಯಾದರ ಗೂರುಜಿ ಹಾಗೂ ಕೊಲೂರು ಮಲ್ಲಪ್ಪನವರ ಪ್ರೇರಣೆಯಿಂದ ರಜಾಕಾರರ ವಿರುದ್ದ ಹೋರಾಟ ಮಾಡುವ ಸಲುವಾಗಿ ರಚಿಸಲ್ಪಟ್ಟ ದುದುನಿ ಜನಹಿತ ಶಿಬಿರದಲ್ಲಿ ತರಬೇತಿ ಪಡೆದುಕೊಂಡನು ಹಲವಾರು ಕಡೆಗಳಲ್ಲಿ ರಜಾಕಾರರ ವಿರುದ್ದ ಗಲಾಟೆಯನ್ನು ಮಾಡುವ ಗುಂಪಿನಲ್ಲಿ ಇವರ ಪಾತ್ರ ಮಹತ್ವದ್ದಾಗಿದೆ.

ಯಾದಗಿರಿಯಲ್ಲಿ ವಿಶೇಷವಾಗಿ 1947ರ ನಂತರ ಹಬ್ಬ ಹರಿದಿನಗಳಲ್ಲಿ ಹಿಂದೂಗಳ ಯುವಕರನ್ನು ಸೇರಿಕೊಂಡು ಮೆರವಣಿಗೆ ಮಾಡುತ್ತಿದ್ದರು. ನಿಜಾಮನ ಸರಕಾರದ ವಿರುದ್ದ ಘೋಷಣೆಯನ್ನು ಕೂಗುತ್ತಾ ಮೆರವಣಿಗೆ ಸಾಗುವಾಗ ರಜಾಕಾರರ ಸೈನಿಕರು ಬಂದು ಅದನ್ನು ತಡೆಯಲು ಪ್ರಯತ್ನ ಪಟ್ಟರೆ ಅವರ ಜೊತೆಗೆ ಜಗಳವಾಡಿ ಎಷ್ಟೋ ಜನರಿಗೆ ಗಾಯ ಮಾಡಿದ್ದರು. ಹೆಚ್ಚಿನ ರಜಾಕರರ ಸೈನಿಕರು ಅವರ ಮನೆಗೆ ಹೋಗಿ ರಾತ್ರಿಯ ವೇಳೆಯಲ್ಲಿ ಬಂಧಿಸಿ ಯಾದಗಿರಿ ಜೈಲಿನಲ್ಲಿ ಇಟ್ಟರು.

ಯಾದಗಿರಿಯಲ್ಲಿ ಮತ್ತು ಸುತ್ತ ಮುತ್ತಲಿನ ಹಳ್ಳಿಗಳಲ್ಲಿ ರಜಾಕರರ ಸೈನಿಕರಿಂದ ಯಾವುದೇ ರೀತಿಯ ತೊಂದರೆಯಾಗದಂತೆ ಈ ಹೋರಾಟದ ಸಮಿತಿಯು ತನ್ನ ಕಾರ್ಯವನ್ನು ಮಾಡುತ್ತಿತ್ತು. ಇದರ ಪ್ರಮುಖ ಸದಸ್ಯರು ಕೊಲೂರು ಮಲ್ಲಪ್ಪ, ವಿಶ್ವನಾಥರೆಡ್ಡಿ ಮುದ್ನಾಳ, ಗುರೂಜಿ, ಟಿಕಾರಾಮ. ಅಂಬಿಗರ ಮಲ್ಲಣ್ಣ, ವಡಿ ಗುರಣ್ಣ ಪ್ರಮುಖರಾಗಿದ್ದಾರೆ. 1948ರ ಸೆಪ್ಟಂಬರ್ 17ನೇ ತಾರೀಖಿನ ನಂತರ ಸಾಬಣ್ಣನನ್ನು ಬಿಡುಗಡೆ ಮಾಡಲಾಯಿತು. ಇವರು ಬಳಸುವ ನಾಡ

ಅಸ್ತ್ರಗಳಾದ ಚಂದ್ರಾಯುಧ, ಖಡ್ಗ, ಇತ್ಯಾದಿ ವಶಪಡಿಸಿಕೊಂಡರು. 1978ರಲ್ಲಿ ಶ್ರೀ ಸಾಬಣ್ಣನವರು ಯಾದಗಿರಿಯಲ್ಲಿ ತೀರಿಕೊಂಡರು.

**ಉಪಸಂಹಾರ**

**"ಪೆನ್ನ ಈಜ್ ಮೈಟೀಯರ್ ದೆನ್ ದ ಸೋರ್ಡ"** ಎಂಬುವದು ಕೆಲವರ ಸಿದ್ಧಾಂತವಾದರೆ, ಬ್ಲಡ್ ಆ್ಯಂಡ್ ಐರನ್ ಎಂಬುವದು ಇನ್ನು ಕೆಲವರ ಸಿದ್ಧಾಂತವಾಗಿದೆ. ಆದರೆ ಗುಲಬರ್ಗಾ ಜಿಲ್ಲೆಯ ಬುಡಕಟ್ಟಿನ ನಾಯಕರು ಹೈದರಾಬಾದ ವಿಮೋಚನೆಯಲ್ಲಿ ಖಡ್ಗ ಹಿಡಿದು ರಜಾಕರರ ವಿರುದ್ಧ ಹೋರಾಟ ಮಾಡಿ ನಾಡಿನ ರಕ್ಷಣೆಯ ಜೊತೆಗೆ ಈ ಜಿಲ್ಲೆಯ ಮುಗ್ಧ ಜನರ ಮಾನ ಮತ್ತು ಪ್ರಾಣವನ್ನು ಕಾಪಾಡಿದ್ದಾರೆ. ಸ್ವಾತಂತ್ರ್ಯ, ಸಮಾನತೆ, ಸಹೋದರತ್ವ ಈ ತತ್ವಗಳ ಕಲ್ಪನೆ ಈ ಬುಡಕಟ್ಟಿನ ನಾಯಕರಿಗೆ ತಿಳಿದಿರಲಿಕ್ಕಿಲ್ಲ. ಆದರೆ ಒಡೆಯನಿಗೆ ಎಂದರೆ ಶಿಬಿರದ ನಾಯಕನಿಗೆ ನಿಷ್ಠಾವಂತರಾಗಿ, ವಿಧೇಯರಾಗಿ ವರ್ತಿಸುವದೇ ಇವರ ಆದ್ಯ ಕರ್ತವ್ಯ ಎಂದು ಭಾವಿಸಿದ್ದರು.

ರಜಾಕರರ ವಿರುದ್ಧ ಹೋರಾಡುವಾಗ ಎಷ್ಟೋ ಜನ ಬುಡಕಟ್ಟು ನಾಯಕರು ಜೀವಕ್ಕೆ ಹೆದರದೆ ಬಂದೂಕಿನ ಗುಂಡಿಗೆ ಎದೆ ಕೊಟ್ಟು ಪ್ರಾಣಾರ್ಪಣೆ ಮಾಡಿದ್ದಾರೆ. ಅವರ ಸಾಹಸ, ಧೈರ್ಯ, ಶೌರ್ಯಗಳು ಬೆಳಕಿಗೆ ಬಾರದಿರುವದು ದುರ್ದೈವದ ಸಂಗತಿಯೇ ಸರಿ.

ಏನೇ ಆಗಲಿ ಹೈದರಬಾದ ಕರ್ನಾಟಕದ ವಿಮೋಚನೆಯಲ್ಲಿ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ನಾಯಕರು ನಿರ್ವಹಿಸಿದ ಪಾತ್ರ ಗಣನೀಯವಾದದ್ದು ಹಾಗೂ ಶಾಶ್ವತವಾಗಿ ನೆನಪಿಡುವಂತಹದ್ದಾಗಿದೆ. ಆದರೆ ಇಂದಿನ ಪರಿಸ್ಥಿತಿ ಬೇರೆಯಾಗಿದೆ. ಯುದ್ಧ ಭೂಮಿಯಿಂದ ಬೆನ್ನು ಕೊಟ್ಟು ಹೋಡಿ ಹೋದವರಿಗೆ , ರಜಾಕರರ ಸೈನಿಕರ ಲೂಟಿಯಲ್ಲಿ ಪಾಲ್ಗೊಂಡು ಜೇಲು ಸೇರಿದವರಿಗೆ ಹೆಚ್ಚಿನ ಪ್ರಾಶಸ್ತ್ಯ ಮತ್ತು ಪ್ರಚಾರ ಸಿಕ್ಕಿರುವದು ದುರ್ದೈವದ ಸಂಗತಿ ಎಂದು ಹೇಳಬಹುದು. ಜಿಲ್ಲೆಯ ಹಲವಾರು ವೀರ ಸುಪುತ್ರರಲ್ಲಿ ಬುಡಕಟ್ಟು ನಾಯಕರ ಪಾತ್ರ ಮಹತ್ವದ್ದು ಎಂದು ಹೇಳಲು ಹೆಮ್ಮೆ ಎನಿಸುತ್ತದೆ.

ಗುಲ್ಬರ್ಗಾ ಜಿಲ್ಲೆಯಲ್ಲಿ ಹಲವಾರು ಜಾತಿಗಳು ಮತ್ತು ಸಮುದಾಯಗಳಿವೆ. ಆದರೆ ಹೈದ್ರಾಬಾದ ಕರ್ನಾಟಕದ ವಿಮೋಚನೆಯಲ್ಲಿ ಕೇವಲ ಕೆಲವು ಜಾತಿಯ ನಾಯಕರು ಮಾತ್ರ ರಜಾಕರರ ವಿರುದ್ಧ ಹೋರಾಟ ಮಾಡಿದ್ದಾರೆ. ಇನ್ನಿತರ ಸಮುದಾಯಗಳಾಗಲೀ ಅಥವಾ ಇತರ ಜಾತಿಯ ನಾಯಕರಾಗಲೀ ರಾಷ್ಟ್ರ ಪ್ರೇಮ ಮತ್ತು ಪ್ರಾದೇಶಿಕ ಮನೋಭಾವನೆ ಹೊಂದಿರಲಿಲ್ಲವೆಂದು ಭಾವಿಸಬಾರದು. ವಿಶೇಷವಾರಿ ಬುಡಕಟ್ಟುಗಳು(ಬೇಡನಾಯಕರು) ಹೈದ್ರಾಬಾದ ಕರ್ನಾಟಕದ ವಿಮೋಚನೆಯಲ್ಲಿ ರಜಾಕರ ವಿರುದ್ಧ ಹೋರಾಟ ಮಾಡಲು ಪ್ರೇರಣೀಯವಾದ ಅಂಶಗಳನ್ನು ಸಂಗ್ರಹಿಸಿದಾಗ ಒಂದಲ್ಲ ಒಂದು ರೀತಿಯ ಸಂಬಂಧ ಈ ನಾಯಕರಿಗೆ ಇರುವುದು ಕಂಡುಬರುತ್ತದೆ. ಹೈದ್ರಾಬಾದ್ ಕರ್ನಾಟಕದ ವಿಮೋಚನೆಯಲ್ಲಿ ರಜಾಕರರ ವಿರುದ್ಧ ಹೋರಾಡಿದ ಬುಡಕಟ್ಟು ನಾಯಕರು ಸುರುಪುರ ಮತ್ತು ಶಹಾಪೂರು ತಾಲೂಕಿನವರಾಗಿದ್ದು ಇವರು ಮತ್ತು ಅರಸು ಮನೆತನಗಳಿಗೆ ಒಂದು ರೀತಿಯ ಸಂಬಂಧ ಇರಬಹುದು. ಅದೇ ರೀರಿ ಇವರು ರಜಾಕರರ ವಿರುದ್ಧ ಹೋರಾಟ ಮಾಡಿ ಪುನಃ ಅದನ್ನು ಪಡೆದುಕೊಂಡು ಅಧಿಕಾರ ಚಲಾಯಿಸಬಹುದು ಎಂಬ ಭಾವನೇ ಇವರಲ್ಲಿ ಮೂಡಿರಬಹುದು ಎಂಬುವುದು ಈ ಸಂಶೋಧನೆಯಿಂದ ತಿಳಿದುಬರುವುದು.

## ಅಡಿಟಿಪ್ಪಣೆ

1. ಕಪಟರಾಳ ಕೃಷ್ಣ ರಾವ್, ***ಸುರಪೂರ ಸಂಸ್ಥನ ಇತಿಹಾಸ***, ೧೯೭೭, ಪುಟ ೨೩೯

2. ಅದೇ, ಪುಟ ೧೮

3. ಅದೇ, ಪುಟ ೮೬

4. ಅದೇ, ಪುಟ ೮೬

5. ಅದೇ, ಪುಟ ೨೩೭

6. ಅದೇ, ಪುಟ ೧೫೭

7. ಅದೇ, ಪುಟ ೧೬೯

8. ಅದೇ, ಪುಟ ೧೭೨

9. ಸಗರ ನಾಡಿನ ದರ್ಶನ, ೧೯೮೫, ಪುಟ ೧೯೯

10. ಅದೇ,

11. ಅದೇ,

12. ಅದೇ,

13. ಕಪಟರಾಳ ಕೃಷ್ಣ ರಾವ್(ಸಂ), ***ಸುರಪೂರ ಸಂಸ್ಥನ ಇತಿಹಾಸ***, ೧೯೭೭, ಪುಟ ೨೦೮

14. ಅದೇ, ಪುಟ ೨೦೯

15. ಸಗರ ನಾಡಿನ ದರ್ಶನ, ೧೯೮೫, ಪುಟ ೩೨

# ಸ್ಥಳೀಯ ಸಂಸ್ಥೆಗಳು ಮತ್ತು ಬುಡಕಟ್ಟು ರಾಜಕೀಯ

## ೪.೧. ಸಂವಿಧಾನ ಮತ್ತು ರಾಜಕೀಯ ಮೀಸಲಾತಿ

ರಾಜಕೀಯ, ಅಧಿಕಾರ ಇವು ಯಾವುದೇ ಒಬ್ಬ ವ್ಯಕ್ತಿಯ ಆಸ್ತಿಯಲ್ಲ ಹಾಗೂ ಒಂದೇ ಕಡೆ ಸ್ಥಿರವಾಗಿ ಇರುವುದಿಲ್ಲ. ಅಧಿಕಾರ ಸೂತ್ರ ಹಿಡಿದ ವ್ಯಕ್ತಿಯು ತನ್ನ ಅಧಿಕಾರಕ್ಕೆ ಯಾವುದೇ ರೀತಿಯ ಧಕ್ಕೆಯಾಗದಂತೆ ನೋಡಿಕೊಂಡು ಹೋಗಲು ಹಲವಾರು ತಂತ್ರಗಳನ್ನು ಆಗಾಗ ರೂಪಿಸುತ್ತಲೇ ಇರಬೇಕು. ಅದೇ ರೀತಿಯಾಗಿ ಬ್ರಿಟೀಷರು ಭಾರತದಲ್ಲಿ ತಮ್ಮ ಅಧಿಕಾರ ಶಾಶ್ವತವಾಗಿ ಉಳಿಸಿಕೊಳ್ಳುವ ಸಲುವಾಗಿ ಕೆಲವು ತಂತ್ರಗಳನ್ನು ಆಗಾಗ ಉಪಯೋಗಿಸುತ್ತಿದ್ದರು. ಅಂತಹ ತಂತ್ರಗಳಲ್ಲಿ ಮೀಸಲಾತಿಯು ಒಂದಾಗಿದೆ. ೧೯೫೦ಕ್ಕಿಂತ ಮುಂಚೆ ಭಾರತದಲ್ಲಿ ಮೀಸಲಾತಿಯನ್ನು ಕಾಣುತ್ತೇವೆ. ೧೯೦೯, ೧೯೩೫ರ ಶಾಸನಗಳಲ್ಲಿ ಬ್ರಿಟೀಷರು ಅಲ್ಪಸಂಖ್ಯಾತರ ಹಿತರಕ್ಷಣೆಗಾಗಿ ಕೆಲವು ಮೀಸಲಾತಿಯನ್ನು ಜಾರಿಗೆ ತಂದರು. ಅದರಲ್ಲಿ ವಿಶೇಷವಾಗಿ ಶಾಸನ ಸಭೆಗಳಿಗೆ ಆಯ್ಕೆಗಾಗಿ ಮುಸ್ಲಿಂರಿಗೆ ಕೆಲವು ಸ್ಥಾನ ಕಾಯ್ದಿರಿಸಿದ್ದರು.

---

ಮೂಲ : ಕರ್ನಾಟಕ ಪಂಚಾಯಿತ್ ರಾಜ್. ಅಧಿನಿಯರು - ೧೯೯೩
Chapter III Page 9 10 (Eng 11-12) Published S.B. Chawan for SBC Publication

೧೯೫೦ ಜನವರಿ ೨೬ನೇ ತಾರೀಖು ನಮ್ಮ ಸಂವಿಧಾನ ಜಾರಿಗೆ ಬಂದಾಗ ಸಂವಿಧಾನ ರಚನಾಕಾರರು ಸಮಾಜದ ಎಲ್ಲಾ ವರ್ಗದ ಜನರಿಗೆ ಅವಕಾಶಕಲ್ಪಿಸುವ ಸಲುವಾಗಿ ಸಂವಿಧಾನದ ೩೩೦(೧) ಹಾಗೂ ೩೩೨ನೇ ವಿಧಿಗಳ ಪ್ರಕಾರ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಲೋಕಸಭೆ ಮತ್ತು ವಿಧಾನ ಸಭೆಗಳಲ್ಲಿ ಕೆಲವು ಸ್ಥಾನಗಳನ್ನು ಮೀಸಲಿಡಲು ನಿರ್ಧರಿಸಿದರು.

ಅಧಿಕಾರ ವಿಕೇಂದ್ರೀಕರಣ, ತತ್ವದ ಪ್ರಕಾರ ಪಂಚಾಯಿತರಾಜ್ ವ್ಯವಸ್ಥೆ ಜಾರಿಗೆ ಬಂದನಂತರ ಪ್ರತಿಯೊಂದು ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ ಹಾಗೂ ಜಿಲ್ಲಾ ಪಂಚಾಯಿತಿ ಸದಸ್ಯ ಸ್ಥಾನಗಳಿಗಾಗಿ ಮೀಸಲಾತಿಯನ್ನು ನಿಗಧಿಹಪಡಿಸಲಾಗಿದೆ. ಇಂದು ಸರಕಾರ ಸಮಾಜದ ಎಲ್ಲಾ ವರ್ಗದ ಜನರು ಕೇವಲ ಸಾಮಾಜಿಕ, ಆರ್ಥಿಕವಾಗಿ ಅಭಿವೃದ್ಧಿಗೊಳಿಸುವುದರ ಜೊತೆಗೆ ರಾಜಕೀಯವಾಗಿ ಸಹಿತ ಅಭಿವೃದ್ಧಿಗೊಳ್ಳಲು ಈ ಅವಕಾಶ ಕಲ್ಪಿಸಿಕೊಟ್ಟಿದೆ.

**ಗ್ರಾಮ ಪಂಚಾಯಿತಿಯ ರಚನೆ, ಬುಡಕಟ್ಟು ಮೀಸಲಾತಿ (ಸದಸ್ಯರಿಗಾಗಿ)**

ಗ್ರಾಮ ಪಂಚಾಯಿತ್ ವ್ಯಾಪ್ತಿಯ ನಾಲ್ಕುನೂರು ಮಾತದಾರರು ಒಬ್ಬ ಸದಸ್ಯನನ್ನು ಆಯ್ಕೆ ಮಾಡುವಂತೆ ಡೆಪ್ಯೂಟಿ ಕಮಿಷನರು (D.C) ಕಾಲಕಾಲಕ್ಕೆ ಅಧಿಸೂಚಿಸಬಹುದಾವಂತಹ ಸಂಖ್ಯೆಯ ಚುನಾಯಿತ ಸದಸ್ಯರನ್ನು ಗ್ರಾಮ ಪಂಚಾಯಿತಿಯು ಹೊಂದಿರತಕ್ಕದ್ದು.

**ಬುಡಕಟ್ಟು ಸಮುದಾಯಗಳಿಗೆ ಮೀಸಲಾತಿ**

ಸ್ಥಾನಗಳನ್ನು ಮಾರ್ಪಾಡು ಮಾಡತಕ್ಕ ಮತ್ತು ಪಂಚಾಯಿತಿ ಪ್ರದೇಶದಲ್ಲಿರುವ ಒಟ್ಟು ಜನಸಂಖ್ಯೆಯಲ್ಲಿ ಅನುಸೂಚಿತ ಜಾತಿಗಳ ಅಥವಾ ಅನುಸೂಚಿತ ಪಂಗಡಗಳ ಜನಸಂಖ್ಯೆಯು ಯಾವ ಅನುಪಾತದಲ್ಲಿದೆಯೋ ಹಾಗೇ ಮೀಸಲಿಡಲಾದ ಸ್ಥಾನಗಳ ಸಂಖ್ಯೆಯು ಗ್ರಾಮ ಪಂಚಾಯಿತಿಯಲ್ಲಿನ ಸ್ಥಾನಗಳ ಒಟ್ಟು ಸಂಖ್ಯೆಯಲ್ಲಿ ಸರಿಸುಮಾರು ಅದೇ ಅನುಪಾತದಲ್ಲಿರ ತಕ್ಕದ್ದು.

ಪರಂತು, ಅಂಥ ಮೀಸಲಾತಿಯು ಅನುಸೂಚಿತ ಜಾತಿಗಳ ಒಟ್ಟು ಸಂಖ್ಯೆಯಲ್ಲಿ ಶೇಕಡಾ ೧೫ ಕ್ಕಿಂತ ಕಡಿಮೆ ಇರತಕ್ಕದ್ದಲ್ಲ ಮತ್ತು ಬುಡಕಟ್ಟು ಪಂಗಡಗಳ ಸಂದರ್ಭದಲ್ಲಿ ಶೇಕಡಾ ೩% ಕ್ಕಿಂತ ಕಡಿಮೆ ಇರತಕ್ಕದ್ದಲ್ಲ.

ಅನುಸೂಚಿತ ಜಾತಿಗಳ, ಅನುಸೂಚಿತ ಪಂಗಡಗಳ ಮತ್ತು ಹಿಂದುಳಿದ ವರ್ಗಗಳ ವ್ಯಕ್ತಿಗಳ ಪ್ರತಿಯೊಂದು ಪ್ರವರ್ಗಕ್ಕು ಮೀಸಲಿಟ್ಟಿರುವ ಸ್ಥಾನಗಳಲ್ಲಿ ಮತ್ತು ಮೀಸಲಿಟ್ಟಿರದ ಸ್ಥಾನಗಳಲ್ಲಿ ಮೂರನೇ ೧/೩ ಒಂದರಷ್ಟಕ್ಕೆ ಕಡಿಮೆ ಇಲ್ಲದಂತೆ. ಸ್ಥಾನವನ್ನು ಮಹಿಳೆಯರಿಗಾಗಿ ಮೀಸಲಿರಿಸ ತಕ್ಕದ್ದು.

## ೪.೨. ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಗ್ರಾಮ ಪಂಚಾಯಿತಿ ಸದಸ್ಯರ ವಯೋಮಿತಿ (ಅನುಬಂಧ ೪ ನೋಡಿ)

"Man is a political animal" ಎಂಬ ಹೇಳಿಕೆಯಂತೆ, ಮನುಷ್ಯನು ರಾಜಕೀಯ ಜೀವಿಯಾಗಿದ್ದು ಒಂದಲ್ಲ ಒಂದು ರೀತಿಯಲ್ಲಿ ರಾಜಕೀಯವನ್ನು ಕುರಿತು ಚಿಂತಿಸುತ್ತಾನೆ. ಆದರೆ ಅವನ ಆಲೋಚನೆ ಮತ್ತು ಚಟುವಟಿಕೆಯು ಅವನ ವಯಸ್ಸನ್ನು ಅವಲಂಬಿಸಿರುತ್ತದೆ. ಆದ್ದರಿಂದ ೨೮೩ ಗ್ರಾಮ ಪಂಚಾಯಿತಿಯ ಸದಸ್ಯರ ವಯೋಮಿತಿ, ಆಸಕ್ತಿ, ಕುತೂಹಲವನ್ನು ತಿಳಿದುಕೊಳ್ಳಲು ಸಂಗ್ರಹಿಸಿದ ಬುಡಕಟ್ಟು ಸದಸ್ಯರ ವಯೋಮಿತಿಯ ಮಾಹಿತಿ.

ಗುಲಬರ್ಗಾ ಜಿಲ್ಲೆಯ ಹತ್ತು ತಾಲೂಕುಗಳು ಒಳಗೊಂಡ ೨೮೩ ಗ್ರಾಮ ಪಂಚಾಯಿತಿ ಸದಸ್ಯರಲ್ಲಿ ೨೬ ರಿಂದ ೬೦ರ ಮೇಲ್ಪಟ್ಟ ವಯಸ್ಸಿನ ಸದಸ್ಯರಿದ್ದು, ಅದರಲ್ಲಿ ಅತೀ ಕಡಿಮೆ ವಯಸ್ಸಿನ ಸದಸ್ಯರು ೧೬ ಜನ. ಇವರು ೬೦ ಕ್ಕಿಂತ ಹೆಚ್ಚಿನ ವಯಸ್ಸಿನವರು ಇದ್ದು, ರಾಜಕೀಯದಲ್ಲಿ ಸಕ್ರೀಯವಾಗಿ ಸೇವೆಸಲ್ಲಿಸುತ್ತಿರುವುದು ನಮ್ಮ ಗಮನಕ್ಕೆ ಬಂದ ಸಂಗತಿಯಾಗಿದೆ. ಆದರೆ ಹೆಚ್ಚು ಸದಸ್ಯರು ಈ ವಯಸ್ಸಿನಲ್ಲಿ ಭಾಗವಹಿಸದಿರಲು ಕಾರಣಗಳು ಹಲವಾರು ಇವೆ. ಅನಕ್ಷರತೆ, ಅಜ್ಞಾನ, ರಾಜಕೀಯ ಜಿಗುಪ್ಸೆ ಮತ್ತು ಯುವಕರು ಈ ವಯಸ್ಸಿನವರನ್ನು ರಾಜಕೀಯದಿಂದ ದೂರವಿಟ್ಟು ತಾವು ಸಕ್ರೀಯವಾಗಿ ಭಾಗವಹಿಸಲು ಮಾಡಿದ ಪ್ರಯತ್ನ. ಈ ಎಲ್ಲ ಅಂಶಗಳು ಹಿರಿಯರನ್ನು ರಾಜಕೀಯದಿಂದ ದೂರ ಇರುವಂತೆ ಮಾಡಿವೆ. ಇನ್ನು ಸಾರ್ವಜನಿಕರು ಇಂತಹ ಜನರಿಗೆ ಮತನೀಡುವುದು ಅಪರೂಪ. ಏಕೆಂದರೆ ವಯಸ್ಸಾದ ವ್ಯಕ್ತಿ ತಿರುಗಾಡಿ ಸಾರ್ವಜನಿಕ ಕೆಲಸಗಳನ್ನು ಮಾಡಿಸಲು ಸಾಧ್ಯವಿಲ್ಲ ಇತ್ಯಾದಿ ಮನೋಭಾವನೆಯಿಂದ ಈ ವಯಸ್ಸಿನ ಜನರಿಗೆ ಮತ ನೀಡಿ ಚುನಾವಣೆಯಲ್ಲಿ ಗೆಲ್ಲಿಸುವುದು ಬಹಳ ಅಪರೂಪವೆಂದು ತೋರುತ್ತದೆ. ಅತೀ ಹೆಚ್ಚು ಸದಸ್ಯರು ಅಂದರೆ ೩೬ ರಿಂದ ೪೦ರ

ವಯಸ್ಸಿನ ಯುವ ಪೀಳಿಗೆ ೬೩ ಜನ ಇದ್ದು ಮತದಾರರಾಗಲಿ ಅಥವಾ ಸದಸ್ಯರಾಗಲಿ ಚುರುಕಿನ ರಾಜಕೀಯ ಆಸಕ್ತಿ ತೋರಿಸಿರುವುದು ಕಂಡು ಬರುತ್ತದೆ. ಇದೇ ವಯಸ್ಸಿನಲ್ಲಿ ಹೆಚ್ಚು ಜನ ಸದಸ್ಯರು ರಾಜಕೀಯದಲ್ಲಿ ಭಾಗವಹಿಸಲು ಕಾರಣಗಳು ಹಲವು.

**ಕೋಷ್ಟಕ ೪.೧**

**ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಗ್ರಾಮ ಪಂಚಾಯತ ಸದಸ್ಯರ ವಯೋಮಿತಿಯ ವಿವರ**

| ಕ್ರ. ಸಂ. | ೨೬ರಿಂದ ೩೦ | ೩೧ರಿಂದ ೩೫ | ೩೬ರಿಂದ ೪೦ | ೪೧ರಿಂದ ೪೫ | ೪೬ರಿಂದ ೫೦ | ೫೧ರಿಂದ ೫೫ | ೫೬ರಿಂದ ೬೦ | ೬೦ಕ್ಕಿಂತ ಹೆಚ್ಚು | ಒಟ್ಟು | ಷರಾ |
|---|---|---|---|---|---|---|---|---|---|---|
| ೦೧ | -- | ೦೧ | -- | ೦೩ | ೦೧ | -- | -- | ೦೧ | ೦೬ | |
| ೦೨ | ೦೧ | ೦೧ | -- | ೦೧ | ೦೧ | -- | -- | -- | ೦೪ | |
| ೦೩ | -- | ೦೧ | ೦೭ | ೦೩ | ೦೫ | ೦೪ | ೦೨ | -- | ೨೨ | |
| ೦೪ | ೦೨ | ೦೧ | ೦೨ | ೦೧ | -- | ೦೩ | -- | ೦೧ | ೧೦ | |
| ೦೫ | ೦೧ | ೦೧ | ೦೩ | ೦೨ | ೦೨ | ೦೨ | -- | ೦೧ | ೧೨ | |
| ೦೬ | ೦೩ | ೦೫ | ೦೬ | ೦೩ | ೦೪ | ೦೧ | ೦೩ | -- | ೨೫ | |
| ೦೭ | ೦೧ | -- | ೦೨ | ೦೨ | ೦೪ | ೦೧ | ೦೧ | ೦೪ | ೧೫ | |
| ೦೮ | ೦೬ | ೦೪ | ೧೧ | ೦೮ | ೦೯ | ೦೭ | ೦೬ | ೦೨ | ೫೩ | |
| ೦೯ | ೧೬ | ೦೯ | ೨೦ | ೧೩ | ೦೬ | ೧೨ | ೦೭ | ೦೪ | ೮೭ | |
| ೧೦ | ೦೨ | ೦೫ | ೧೨ | ೧೦ | ೦೮ | ೦೬ | ೦೩ | ೦೩ | ೪೯ | |
| ಒಟ್ಟು | ೩೨ | ೨೮ | ೬೩ | ೪೬ | ೪೦ | ೩೬ | ೨೨ | ೧೬ | ೨೮೩ | |

೧. ಈ ವಯಸ್ಸಿನಲ್ಲಿ ರಾಜಕೀಯ ಆಸಕ್ತಿಯ ಜೊತೆಗೆ ಸೇವಾ ಮನೋಭಾವನೆ ಮತ್ತು ಸ್ಪರ್ಧಾತ್ಮಕ ಮನೋಭಾವ ಹೊಂದಿರುವುದು ಮುಖ್ಯ ಕಾರಣವೆಂದು ಹೇಳಬಹುದು.

೨. ಈ ವಯಸ್ಸಿನ ಜನರಿಗೆ ಮತ ನೀಡುವುದರಿಂದ ಮತ್ತು ರಾಜಕೀಯವಾಗಿ ಬೆಳೆಸುವುದರಿಂದ ಮುಂದೆ ರಾಷ್ಟ್ರಮಟ್ಟದ ನಾಯಕರಾಗಿ ಬೆಳೆಯಲು ಅವಕಾಶ ದೊರೆಯುತ್ತದೆಂಬ ಮನೋಭಾವನೆ.

೩. ರಾಜಕೀಯ, ಅಧಿಕಾರ, ಆಡಳಿತ ಮತ್ತು ಅಂತಸ್ತಿನ ವ್ಯಾಮೋಹ ಇರುವುದರಿಂದ ಹಾಗೂ ರಾಜಕೀಯವಾಗಿ ಬೆಳೆಯುವ ಹಂಬಲ ಹೊಂದಿದ ಪ್ರತಿಯೊಬ್ಬ ಸದಸ್ಯನು ತನ್ನ ಶಕ್ತಿ ಮೀರಿ

ಸಾರ್ವಜನಿಕ ಮತ್ತು ಸಮುದಾಯಿಕ ಕೆಲಸವನ್ನು ಮಾಡಿ ಜನರ ಗೌರವಕ್ಕೆ ಪಾತ್ರನಾಗುತ್ತಾನೆ.

೪. ಮಧ್ಯ ವಯಸ್ಸಿನ ಜನಗಳಿಗೆ ರಾಜಕೀಯ ಆಸಕ್ತಿ ಚಿಗುರುತ್ತದೆ. ಹೊಸ ಹೊಸ ರಾಜಕೀಯ ತಂತ್ರಗಳನ್ನು ಅಳವಡಿಸಿಕೊಂಡು ಇತರ ಸಮುದಾಯದ ಜೊತೆಗೆ ಸ್ಪರ್ಧಿಸುವ ಛಲವಿರುತ್ತದೆ.

ರಾಜಕೀಯಕ್ಕೆ ವಿದ್ಯೆಯೇ ಮುಖ್ಯವಲ್ಲ ಆಸಕ್ತಿ, ಚುರುಕುತನ ಮತ್ತು ಅಧಿಕಾರದ ವ್ಯಾಮೋಹ ಹಾಗೂ ಸೇವಾ ಮನೋಭಾವನೆ, ಈ ಎಲ್ಲ ಅಂಶಗಳು ಪ್ರತಿಯೊಬ್ಬ ವ್ಯಕ್ತಿಯನ್ನು ರಾಜಕೀಯಕ್ಕೆ ಸೆಳೆಯುತ್ತವೆ. ಆದರೆ ೩೬ ರಿಂದ ೪೦ ವಯಸ್ಸಿನ ಜನರು ಹೆಚ್ಚು ಭಾಗವಹಿಸಲು ಕಾರಣ ಅವರು ಆರ್ಥಿಕವಾಗಿ ಮತ್ತು ಮಾನಸಿಕವಾಗಿ ಸ್ವತಂತ್ರರಾಗಿದ್ದು ಯಾವುದೇ ರೀತಿಯ ನಿರ್ಭಂಧನೆ ಇಲ್ಲದೆ ರಾಜಕೀಯದಲ್ಲಿ ಭಾಗವಹಿಸಿದ್ದಾರೆಂಬುದು ಪ್ರಸ್ತುತ ಸಂಶೋಧನೆಯಿಂದ ತಿಳಿದುಬಂದಿದೆ.

ಇಂದು ವಯಸ್ಸು ಮತ್ತು ಶಿಕ್ಷಣಮಾತ್ರ ರಾಜಕೀಯದಲ್ಲಿ ಭಾಗವಹಿಸಲು ಪ್ರೇರೆಪಿಸುತ್ತದೆ ಎಂದು ಖಚಿತವಾಗಿ ಹೇಳಲು ಆಗುವದಿಲ್ಲ. ಅದರ ಜೊತೆಗೆ ಅರ್ಥಿಕ ಮತ್ತು ಸಮುದಾಯದ ಹಿನ್ನಲೆ ಇತ್ಯಾದಿ ಅಂಶಗಳು ಮಹತ್ವದ ಪಾತ್ರ ನಿರ್ವಹಿಸುತ್ತವೆ.

## ೪.೩. ಗುಲ್ಬರ್ಗಾ ಜಿಲ್ಲೆಯ ಬುಡಕಟ್ಟು ಗ್ರಾಮ ಪಂಚಾಯಿತಿ ಸದಸ್ಯರ ಕುಟುಂಬಗಳ ಶೈಕ್ಷಣಿಕ ಮಟ್ಟ

“ಅಕ್ಷರ ಕ್ರಾಂತಿ ದೇಶಕ್ಕೆ ಶಾಂತಿ” ಎಂಬ ಬೀಜಮಂತ್ರ ಈಗ ಜಾರಿಯಲ್ಲಿದೆ. ಆದರೆ ಹಲವಾರು ವರ್ಷಗಳಿಂದ ಕಾಡಿನಲ್ಲಿ ಇದ್ದು ಅದನ್ನು ಪೂಜಿಸುವ ಬುಡಕಟ್ಟು ಜನರು ಎರಡು ಹೊತ್ತು ಊಟ ದೊರೆತರೆ ಸಾಕು ಎಂದು ತಿಳಿದ ಕಾಲವೊಂದಿತ್ತು. ಆದರೆ ಇಂದು ಆ ಭಾವನೆ ಮರೆಯಾಗಿ, ತಮಗೆ ಎಷ್ಟೇ ದಾರಿದ್ರ್ಯ ಇದ್ದರು ಶಿಕ್ಷಣದಿಂದ ಮಾತ್ರ ತಮ್ಮ ದಾರಿದ್ರ್ಯವನ್ನು ಹೋಗಲಾಡಿಸಬಹುದು ಎಂಬ ಕಲ್ಪನೆ ಅವರಲ್ಲಿ ಮೂಡಿದೆ. ಅಲ್ಲದೆ ಪ್ರಜಾಪ್ರಭುತ್ವದ ಯಶಸ್ವಿ ಮತ್ತು ರಾಜಕೀಯ ಕಾರ್ಯಚಟುವಟಿಕೆಗಳಿಗೆ ಶಿಕ್ಷಣವು ರಾಮಬಾಣವಿದ್ದಂತೆ . ಅದಕ್ಕಾಗಿ ಬುಡಕಟ್ಟು ಸಮುದಾಯದ ರಾಜಕೀಯ ಜೀವನವು ಅವರು ಪಡೆದ ಶಿಕ್ಷಣದ

ಮೇಲೆ ಅವಲಂಬನೆಯಾಗಿದೆ. ಆದ್ದರಿಂದ ಅದನ್ನು ತಿಳಿಯಲು ಜಿಲ್ಲೆಯಾದ್ಯಂತ ಕ್ಷೇತ್ರ ಕಾರ್ಯ ಕೈಗೊಂಡು ಬುಡಕಟ್ಟು ಸಮುದಾಯದ ಶೈಕ್ಷಣಿಕ ಮಟ್ಟ.

**ಕೊಷ್ಟಕ ೪.೨**

**ಗುಲ್ಬರ್ಗಾ ಜಿಲ್ಲೆಯ ಬುಡಕಟ್ಟು ಗ್ರಾಮ ಪಂಚಾಯಿತ ಸದಸ್ಯರ ಕುಟುಂಬಗಳ ಶೈಕ್ಷಣಿಕ ಹಂತ**

| ಕ್ರ. ಸಂ. | ತಾಲೂಕಿನ ಒಟ್ಟು ಕುಟುಂಬಗಳು | ೧ರಿಂದ ೫ನೇ ತರಗತಿ ಓದಿದವರು | ೬ರಿಂದ ೧೦ನೇ ತರಗತಿ ಓದಿದವರು | ಕಾಲೇಜು ಓದಿದವರು | ಸರಕಾರಿ ಉದ್ಯೋಗ | ಒಟ್ಟು ವಿದ್ಯಾವಂತರ ಸಂಖ್ಯೆ | ಜನಸಂಖ್ಯೆ | ಪಾರ |
|---|---|---|---|---|---|---|---|---|
| ೦೧ | ೦೬ | ೦೮ | ೧೨ | ೦೫ | -- | ೨೫ | ೪೩ | |
| ೦೨ | ೦೪ | ೦೯ | ೧೦ | -- | -- | ೧೯ | ೩೩ | |
| ೦೩ | ೨೨ | ೨೦ | ೩೦ | ೦೨ | -- | ೫೨ | ೧೪೪ | |
| ೦೪ | ೧೦ | ೧೦ | ೦೯ | -- | -- | ೧೯ | ೬೯ | |
| ೦೫ | ೧೨ | ೧೪ | ೨೩ | ೦೩ | -- | ೪೦ | ೮೯ | |
| ೦೬ | ೨೫ | ೪೩ | ೩೪ | ೦೪ | ೦೬ | ೮೭ | ೧೪೮ | |
| ೦೭ | ೧೫ | ೧೧ | ೧೩ | ೦೩ | ೦೨ | ೨೯ | ೧೦೮ | |
| ೦೮ | ೫೩ | ೪೪ | ೭೬ | ೧೦ | ೦೧ | ೧೩೧ | ೩೩೫ | |
| ೦೯ | ೮೭ | ೧೧೨ | ೧೫೦ | ೪೮ | ೧೪ | ೩೨೪ | ೫೭೪ | |
| ೧೦ | ೪೯ | ೩೭ | ೪೯ | ೧೪ | ೦೩ | ೧೦೩ | ೩೦೩ | |
| ಒಟ್ಟು | ೨೮೩ | ೩೦೮ | ೪೦೬ | ೮೯ | ೨೬ | ೮೨೯ | ೧೮೪೬ | |

**೧. ೧ ರಿಂದ ೫ -** ಗುಲ್ಬರ್ಗಾ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ೨೮೩ ಬುಡಕಟ್ಟು ಗ್ರಾಮ ಪಂಚಾಯತಿ ಸದಸ್ಯರ ಕುಟುಂಬಗಳಲ್ಲಿ ೧ನೇ ತರಗತಿಯಿಂದ ೫ನೇ ತರಗತಿಯವರೆಗೆ ಓದಿರುವ ಮತ್ತು ಓದುತ್ತಿರುವವರು ೩೦೮ ಇದ್ದು, ೧೯೯೧ರ ಜನಗಣತಿಯ ನಂತರ ಹಾಗೂ ಸರಕಾರ ನೀಡಿರುವ ಬುಡಕಟ್ಟು ಸಮುದಾಯ ವಿಶೇಷ ಮೀಸಲಾತಿ ಸೌಲಭ್ಯಗಳ ಫಲಿತಾಂಶಗಳಿಂದ ಮಾತ್ರ ಎಂದು ಈ ಸಂಶೋಧನೆಯಿಂದ ಮನವರಿಕೆಯಾಗಿದೆ. ಏಕೆಂದರೆ ಈಗಿನ ಶಿಕ್ಷಣನೀತಿ ಯಲ್ಲಿ ಜಾರಿಗೆ ತಂದ ಕಡ್ಡಾಯ ಶಿಕ್ಷಣ ನೀತಿ ಮತ್ತು ಸರಕಾರ ನೀಡುವ ಹಲವಾರು ಸೌಲಭ್ಯ ಗಳು ಈ ಸಮುದಾಯವನ್ನು ಶಿಕ್ಷಣ ಪಡೆಯುವಂತೆ ಪ್ರೇರೇಪಿಸಿದೆ. ಆದ್ದರಿಂದ ಈ ವಯಸ್ಸಿನಲ್ಲಿ ಓದುವವರ ಸಂಖ್ಯೆ ಹೆಚ್ಚು ಕಂಡುಬರುತ್ತದೆ.

**೨. ೬ ರಿಂದ ೧೦-೬** ರಿಂದ ೧೦ನೇ ತರಗತಿಯವರೆಗೆ ಓದುವವರು ಮತ್ತು ಓದುತ್ತಿರುವವರ ಸಂಖ್ಯೆ ವಿದ್ಯಾವಂತರ ಅರ್ಧದಷ್ಟಿದೆ . ಇದಕ್ಕೆ ಹಲವಾರು ಕಾರಣಗಳು ಈ ಸಮೀಕ್ಷೆಯಿಂದ ತಿಳಿದು ಬಂದಿದೆ.

೧. ಕಡ್ಡಾಯ ಶಿಕ್ಷಣ ಯೋಜನೆ.

೨. ಪರಿಶಿಷ್ಟ ಪಂಗಡದವರಿಗೆ ಉಚಿತ ಶಿಕ್ಷಣ, ವಸತಿ, ಊಟ, ಬಟ್ಟೆ, ಪುಸ್ತಕಗಳು ಮತ್ತು ವಿದ್ಯಾರ್ಥಿವೇತನ ಹಾಗೂ ಉದ್ಯೋಗದಲ್ಲಿ ಮೀಸಲಾತಿ ಇತ್ಯಾದಿ ಸೌಲಭ್ಯಗಳು.

೩. ನಗರೀಕರಣ, ತಾಂತ್ರಿಕ ಪ್ರಗತಿ ಇತ್ಯಾದಿ ಅಂಶಗಳು ಬುಡಕಟ್ಟು ಜನರ ಮಕ್ಕಳು ಓದಲು ಪ್ರೇರೆಪಿಸಿವೆ.

**೩. ಕಾಲೇಜ್ ಶಿಕ್ಷಣ :** ಬುಡಕಟ್ಟು ಸಮುದಾಯದಲ್ಲಿ ಕಾಲೇಜ್ ಶಿಕ್ಷಣ ಪಡೆದ ವಿದ್ಯಾವಂತರ ಸಂಖ್ಯೆ ತೀರಾ ಕಡಿಮೆಯಾಗುತ್ತಿರುವುದು ಹಲವಾರು ಕಾರಣಗಳಿಂದ ಎಂದು ತಿಳಿದು ಬರುತ್ತದೆ. ೧೦ನೇ ತರಗತಿಯ ನಂತರ ಶಿಕ್ಷಣ ಪಡೆಯಲು ಬಹಳಷ್ಟು ಅಡಚಣೆಗಳಿವೆ. ಆರ್ಥಿಕ ತೊಂದರೆ ಮತ್ತು ಕಾಲೇಜ್‌ಗಳ ಅನಾನುಕೂಲತೆಗಳಿಂದ ಈ ಮಟ್ಟದಲ್ಲಿ ಶಿಕ್ಷಣ ಮುಂದುವರೆಸಿದವರ ಸಂಖ್ಯೆ ಕೇವಲ ೮೯ ಇರುವುದು ಸಂಶೋಧನೆಯಿಂದ ತಿಳಿದುಬಂದಿದೆ. ಕಾಲೇಜ್ ಶಿಕ್ಷಣ ಪಡೆದರು ನಿರುದ್ಯೋಗಿಯಾಗಿ ಜೀವನ ನಡೆಸುವವರ ಸಂಖ್ಯೆ ಹೆಚ್ಚಾಗಿರುವುದರಿಂದ ಈ ಮಟ್ಟದಲ್ಲಿ ಶಿಕ್ಷಣದ ಬಗ್ಗೆ ಆಸಕ್ತಿ ಇಲ್ಲದಿರುವುದು ಗಮನಾರ್ಹ ಸಂಗತಿಯಾಗಿ ಕಂಡುಬರುತ್ತದೆ.

**೪. ಸರಕಾರಿ ಉದ್ಯೋಗಿಗಳ ಸಂಖ್ಯೆ ೨೬** – ೨೮೩ ಬುಡಕಟ್ಟು ಗ್ರಾಮ ಪಂಚಯತ ಸದಸ್ಯರ ಕುಟುಂಬಗಳಲ್ಲಿ ಸರಕಾರಿ ಮತ್ತು ಅರೆ ಸರಕಾರಿ ಉದ್ಯೋಗ ಹೊಂದಿರುವ ಸದಸ್ಯರ ಸಂಖ್ಯೆ ೨೬ ಇದ್ದು, ಇದನ್ನು ಶಿಕ್ಷಣ ಪಡೆದ ಸದಸ್ಯರಿಗೆ ಹೋಲಿಸಿದಾಗ ತೀರ ಕಡಿಮೆ ಎಂದೆನಿಸುತ್ತದೆ. ಏಕೆಂದರೆ ೧೦ ವರ್ಷಗಳ ಹಿಂದ ಶಿಕ್ಷಣದ ಬಗ್ಗೆಯಾಗಲೀ ಅಥವಾ ಸರಕಾರಿ ನೌಕರಿ ಬಗ್ಗೆಯಾಗಲೀ ಜನರಲ್ಲಿ ಹೆಚ್ಚು ಆಸಕ್ತಿ ಇರಲಿಲ್ಲ ಹಾಗೂ ಹೆಚ್ಚಿನ ಸರಕಾರೀ ಸೌಲಭ್ಯಗಳು ಕೂಡಾ ಇರಲಿಲ್ಲ.

ಪ್ರಸ್ತುತ ಸಂಶೋಧನೆಯ ವ್ಯಾಪ್ತಿಗೆ ಒಳಪಡುವ ಎಲ್ಲಾ ಕುಟುಂಬಗಳ ಒಟ್ಟು ಸದಸ್ಯರ ಸಂಖ್ಯೆ ೧೮೪೬ ಇದ್ದು, ಅದರಲ್ಲಿ ವಿದ್ಯಾವಂತರ ಸಂಖ್ಯೆ ೮೨೭ ಮತ್ತು ಅನಕ್ಷರಸ್ಥರ ಸಂಖ್ಯೆ ೧೦೧೯ ಇದ್ದು, ಇದು ೧೯೯೧ರ ಜನಗಣತಿಯ ಪ್ರಕಾರ ವಿದ್ಯಾವಂತರ ಮಟ್ಟವನ್ನು ಸರಿಸಮವಾಗಿ ಹೋಲುತ್ತದೆ.

## ೪.೪. ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಗ್ರಾ.ಪಂ. ಸದಸ್ಯ ಕುಟುಂಬಗಳ ಶೈಕ್ಷಣಿಕ ಸ್ಥಾನಮಾನ

**ಕೋಷ್ಟಕ ೪.೩**

**ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಗ್ರಾಮ. ಪಂ. ಸದಸ್ಯರ ಕುಟುಂಬಗಳ ಶೈಕ್ಷಣಿಕ ಪ್ರಮಾಣ**

| ಕ್ರ. ಸಂ. | ಪುರುಷರು | | | ಸ್ತ್ರೀಯರು | | | ಸ್ತ್ರೀ-ಪುರುಷರು | | |
|---|---|---|---|---|---|---|---|---|---|
| | ವಿದ್ಯಾವಂತರು | ಅವಿದ್ಯಾವಂತರು | ಒಟ್ಟು | ವಿದ್ಯಾವಂತರು | ಅವಿದ್ಯಾವಂತರು | ಒಟ್ಟು | ವಿದ್ಯಾವಂತರು | ಅವಿದ್ಯಾವಂತರು | ಒಟ್ಟು |
| ೦೧ | ೧೫ | ೦೮ | ೨೩ | ೧೦ | ೧೦ | ೨೦ | ೨೫ | ೧೮ | ೪೩ |
| ೦೨ | ೧೧ | ೦೭ | ೧೮ | ೦೮ | ೦೭ | ೧೫ | ೧೯ | ೧೪ | ೩೩ |
| ೦೩ | ೪೦ | ೩೬ | ೭೬ | ೧೨ | ೫೬ | ೬೮ | ೫೨ | ೯೨ | ೧೪೪ |
| ೦೪ | ೧೩ | ೧೮ | ೩೧ | ೦೬ | ೩೨ | ೩೮ | ೧೯ | ೫೦ | ೬೯ |
| ೦೫ | ೨೬ | ೨೫ | ೫೧ | ೧೪ | ೨೪ | ೩೮ | ೪೦ | ೪೯ | ೮೯ |
| ೦೬ | ೪೯ | ೨೦ | ೬೯ | ೩೮ | ೪೧ | ೭೯ | ೮೭ | ೬೧ | ೧೪೮ |
| ೦೭ | ೧೮ | ೩೨ | ೫೦ | ೦೯ | ೪೯ | ೫೮ | ೨೭ | ೮೧ | ೧೦೮ |
| ೦೮ | ೮೬ | ೮೪ | ೧೭೦ | ೪೫ | ೧೨೦ | ೧೬೫ | ೧೩೧ | ೨೦೪ | ೩೩೫ |
| ೦೯ | ೨೨೨ | ೯೩ | ೩೧೫ | ೧೦೨ | ೧೫೭ | ೨೫೯ | ೩೨೪ | ೨೫೦ | ೫೭೪ |
| ೧೦ | ೮೨ | ೭೮ | ೧೬೦ | ೨೧ | ೧೨೨ | ೧೪೩ | ೧೦೩ | ೨೦೦ | ೩೦೩ |
| ಒಟ್ಟು | ೫೬೨ | ೪೦೧ | ೯೬೩ | ೨೬೫ | ೬೧೮ | ೮೮೩ | ೮೨೭ | ೧೦೧೯ | ೧೮೪೬ |

"ವ್ಯಕ್ತಿಯ ಸರ್ವತೋಮುಖ ಬೆಳವಣಿಗೆಯೇ ಶಿಕ್ಷಣದ ಗುರಿಯಾಗಿದೆ" ಎಂಬುವ ಹಾಗೆ ಇಂದಿನ ಶಿಕ್ಷಣವು ವ್ಯಕ್ತಿಯ ಸಾಮಾಜಿಕ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಹಾಗೂ ನೈತಿಕ ಜೀವನದ ಬೆಳವಣಿಗೆಗಾಗಿ ಅವಶ್ಯವಾಗಿದೆ ಅದ್ದರಿಂದ ೨೮೩ ಗ್ರಾಮಪಂಚಾಯಿತಿ ಬುಡಕಟ್ಟು ಸದಸ್ಯರ ಕುಟುಂಬಗಳ ಶೈಕ್ಷಣಿಕ ಸ್ಥಿತಿಗತಿಯನ್ನು ಅರಿಯಲು ಹಮ್ಮಿಕೊಂಡ ಪ್ರಸ್ತುತ

ಸಮೀಕ್ಷೆಯ ಪ್ರಕಾರ, ಸಂಶೋಧನ ವ್ಯಾಪ್ತಿಯಲ್ಲಿ ಬರುವ ಸದಸ್ಯರ ಕುಟುಂಬಗಳ ಒಟ್ಟು ಜನಸಂಖ್ಯೆ ೧೮೪೬ ಇದ್ದು, ಎಂದರೆ ೧೯೯೧ರ ಜನಗಣತಿಯ ಪ್ರಕಾರ ಬುಡಕಟ್ಟು ಸಮುದಾಯದ ಶೇಕಡ 1.72 ಇದ್ದು ಅದರಲ್ಲಿ ೯೬೩ (56.16) ಜನ ಪುರುಷರಿದ್ದು, ೫೬೨ (30.44)ವಿದ್ಯಾವಂತರು ಮತ್ತು ೪೦೧ (21.72) ಜನರು ಅವಿದ್ಯಾವಂತರು ಇದ್ದಾರೆ. ಸ್ತ್ರೀಯರು ೮೮೩ (47.88) ಇದ್ದು, ಅದರಲ್ಲಿ ೨೬೫ ಜನ ಅಕ್ಷರಸ್ಥರು (30.01) ಹಾಗೂ ೬೧೮ (69.98) ಜನ ಅನಕ್ಷರಸ್ಥ ಸ್ತ್ರೀಯರಿದ್ದಾರೆ.

ಒಟ್ಟು ಸ್ತ್ರೀ ಪುರುಷರಲ್ಲಿ ೮೨೭ ಜನರು ವಿದ್ಯಾವಂತರು (44%) ಇರುವುದು ಕಂಡುಬಂದಿದೆ. ಇದು ಪ್ರತಿ ಶತ ೧೯೯೧ರ ಜನಗಣತಿಯ ದೇಶದ ಅಕ್ಷರಸ್ಥರ ಸಂಖ್ಯೆಗೆ ಸಮೀಪವಿರುವದು ಸಮಾಧಾನಕರ ಸಂಗತಿಯಾಗಿದೆ. ಆದರೆ ಶೇಕಡ ೩೦ರಷ್ಟು ವಿದ್ಯಾವಂತರು ೧೫ ವರ್ಷಕ್ಕಿಂತ ಕಡಿಮೆ ವಯಸ್ಸಿನವರಿದ್ದು ಶೇಕಡ ೧೮ರಷ್ಟು ಜನರು ವಿದ್ಯಾವಂತರು ೧೫ ವರ್ಷಕ್ಕಿಂತ ಹೆಚ್ಚಿನ ವಯಸ್ಸಿನವರು ಇದ್ದಾರೆ.

ಈ ಸಂಶೋಧನೆಯಿಂದ ನಮಗೆ ತಿಳಿದು ಬರುವುದೆಂದರೆ ಈಗೀಗ ಬುಡಕಟ್ಟು ಸದಸ್ಯರಲ್ಲಿ ಸಹಿತ ಅಕ್ಷರಜ್ಞಾನ ಪಡೆಯಬೇಕೆಂಬ ಹಂಬಲ ಕಂಡುಬರುತ್ತದೆ. ಸರಕಾರ ಜಾರಿಗೆ ತಂದಿರುವ ಮೀಸಲಾತಿ ಸೌಲಭ್ಯಗಳು, ಖಡ್ಡಾಯ ಶಿಕ್ಷಣ ಮತ್ತು ಹೊರ ಪ್ರಪಂಚದ ತಿಳುವಳಿಕೆ ಹಾಗೂ ಸುತ್ತ ಮುತ್ತಲಿನ ಪರಿಸರದಿಂದ ತಾವು ಇತರರಿಗಿಂತ ಕಡಿಮೆ ಅಲ್ಲ ಎಂಬುವ ಸ್ಪರ್ಧಾತ್ಮಕ ಮನೋಭಾವನೆ ಬುಡಕಟ್ಟಿನಲ್ಲಿ ಮೂಡಿದ್ದು ಶಿಕ್ಷಣ ಪಡೆಯುವಲ್ಲಿ ಹೆಚ್ಚಿನ ಆಸಕ್ತಿ ತೋರುವಂತಾಗಿದೆ.

"Educated voters are gift of democracy" ಎಂಬ ಸಿದ್ಧಾಂತವನ್ನು ಎಷ್ಟೋ ಜನ ರಾಜಕೀಯ ತತ್ವಜ್ಞಾನಿಗಳು ಎತ್ತಿಹಿಡಿದಿದ್ದಾರೆ. ಇಂದಿನ ಪ್ರಜಾಪ್ರಭುತ್ವಕ್ಕೆ ಅನಕ್ಷರತೆ ಶಾಪವಿದ್ದಂತೆ. ಪ್ರಜಾಪ್ರಭುತ್ವ ಯಶಸ್ವಿ ಅಕ್ಷರಸ್ಥ ಮತದಾರರನ್ನು ಅವಲಬಂಸಿದೆ. ಸರ್ವ ಪ್ರಜೆಗಳು ಸಕ್ರೀಯವಾಗಿ ರಾಜಕೀಯದಲ್ಲಿ ಮತ್ತು ಸರಕಾರಿ ಚಟುವಟಿಕೆಗಳಲ್ಲಿ ಭಾಗವಹಿಸಬೇಕು. ಆದರೆ ಇಂದು ಭಾರತದ ಪ್ರಜಾಪ್ರಭುತ್ವವು ಅನಕ್ಷಸ್ಥರ ಕೈಯಲ್ಲಿ ಸಿಕ್ಕು ಉಸಿರುಗಟ್ಟಿ ಒದ್ದಾಡುವಂತಾಗಿದೆ.

ಇತಿಹಾಸದ ಪುಟಗಳ ಮೇಲೆ ಕಣ್ಣಾಡಿಸಿದರೆ, ಹಲವಾರು ಅವಿದ್ಯಾವಂತ ದೇಶ ಪ್ರೇಮಿಗಳು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ್ದು ಅಲ್ಲದೆ ರಾಜ್ಯದ ಆಡಳಿತ ಸೂತ್ರ ಹಿಡಿದು ಪ್ರಜೆಗಳ ಕಲ್ಯಾಣಕ್ಕಾಗಿ ನಿಸ್ವಾರ್ಥತೆಯಿಂದ ತಮ್ಮನ್ನು ತಾವು ಅರ್ಪಿಸಿಕೊಂಡಿದ್ದಾರೆ. ರಾಜಕೀಯ ಮತ್ತು ಆಡಳಿತಾತ್ಮಕ ಚಟುವಟಿಕೆಗಳಲ್ಲಿ ಕ್ರಿಯಾ ಶೀಲರಾಗಿ ಕಾರ್ಯ ನಿರ್ವಹಿಸಲು ಅಕ್ಷರ ಜ್ಞಾನಕಿಂತ ಆಸಕ್ತಿ ಮತ್ತು ಅನುಭವ ಹಾಗೂ ಕುತೂಹಲ ಮುಖ್ಯವಾಗಿರುತ್ತವೆ.

ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಗ್ರಾಮ ಪಂಚಾಯತ ಸದಸ್ಯರು ಅನಕ್ಷರಸ್ಥರಾಗಿದ್ದರು, ಆಸಕ್ತಿಯಿಂದ ಭಾಗವಹಿಸಿದ್ದಾರೆ ಎನ್ನುವುದಕ್ಕೆ ಅವರ ಸಾಧನೆ ಮತ್ತು ತೋರುವ ಆಸಕ್ತಿಯೇ ಮುಖ್ಯ ಸಾಕ್ಷಿಯಾಗಿದೆ.

## ೪.೫. ಬುಡಕಟ್ಟು ಗ್ರಾಮ ಪಂಚಾಯತಿ ಸದಸ್ಯರ ಕುಟುಂಬಗಳ ವೈಯೋಮಾನ

ಪ್ರಸ್ತುತ ಸಂಶೋಧನೆಯ ಅಂಗವಾಗಿ ಗುಲಬರ್ಗಾ ಜಿಲ್ಲೆಯ ಹತ್ತು ತಾಲೂಕ ಒಳಗೊಂಡ ೨೮೫ ಗ್ರಾಮ ಪಂಚಾಯಿತಿ ಸದಸ್ಯರ ಕುಟುಂಬಗಳ ಸದಸ್ಯರನ್ನು ವಯೋಮಾನಂದಂತೆ ವಿಂಗಡಿಸಿ, ರಾಜಕೀಯದಲ್ಲಿ ಎಷ್ಟರ ಮಟ್ಟಿಗೆ ಪ್ರೇರಕವಾಗಿದೆ ಎಂಬುವದನ್ನು ಸಂಶೋಧಿಸ ಲಾಗಿದೆ.

ಜನತೆಯನ್ನು ವಯೋಮಾನದ ಆಧಾರದ ಮೇಲೆ ವಿಂಗಡಿಸುವದು, ಜನತೆಯ ಲಕ್ಷಣವನ್ನು ಸೂಚಿಸುವ ಒಂದು ಪ್ರಮುಖ ಅಂಶವಾಗಿದೆ. ಇದರಿಂದ ದುಡಿಯುವ ವಯಸ್ಸಿನವರು ಹಾಗೂ ದುಡಿಯಲು ಆಗದವರು ಎಷ್ಟು ಎಂಬದುವದು ತಿಳಿದು ಬರುತ್ತದೆ. ಸಾಮಾನ್ಯವಾಗಿ ೧೫ ವರ್ಷಗಳಿಗಿಂತ ಕಡಿಮೆ ವಯಸ್ಸಿನವರನ್ನು ಹಾಗೂ ೬೦ ವರ್ಷಕ್ಕಿಂತ ಹೆಚ್ಚು ವಯಸ್ಸಿನವರನ್ನು ವೃತ್ತಿಯೋಗ್ಯರೆಂದು ಪರಿಗಣಿಸುವದಿಲ್ಲ. ಮತ್ತು ಬುಡಕಟ್ಟು ಕುಟುಂಬಗಳ ದುಡಿಯು ಜನರ ಆಧಾರದ ಮೇಲೆ ಅವರ ತಲಾದಾಯವನ್ನು ಗುರುತಿಸಿ ಅದು ಎಷ್ಟರ ಮಟ್ಟಿಗೆ ರಾಜಕೀಯದಲ್ಲಿ ಭಾಗವಹಿಸಲು ಸಹಾಯಕವಾಗುತ್ತದೆ ಎಂಬುದನ್ನು ಗುರುತಿಸಲಾಗುತ್ತದೆ.(ಕೋಷ್ಟಕ ೪.೪. ನೋಡಿ)

ಈ ಕ್ಷೇತ್ರಕಾರ್ಯದಿಂದ ಜಿಲ್ಲೆಯ ರಾಜಕೀಯದಲ್ಲಿ ಎಂದರೆ ಗ್ರಾಮ ಪಂಚಾಯತಿಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಕಾರ್ಯನಿರ್ವಹಿಸುವ ೨೮೩ ಬುಡಕಟ್ಟು ಸದಸ್ಯರ ಕುಟುಂಬಗಳ ಒಟ್ಟು ಜನ ಸಂಖ್ಯೆ ೧೮೪೬ ಇದ್ದು ದುಡಿಯಲು ಯೋಗ್ಯರಾದವರು ೧೧೧೨ ಇದ್ದು ಉಳಿದವರು ೧೫ಕ್ಕಿಂತ ಕಡಿಮೆ ಮತ್ತು ೬೦ಕ್ಕಿಂತ ಹೆಚ್ಚು ವಯಸ್ಸಿನವರು ಎಂದರೆ ಶೇಕಡ ೬೩% ಜನರು ಮಾತ್ರ ದುಡಿದು ತಮ್ಮ ಕುಟುಂಬದ ತಲಾದಾಯವನ್ನು ಹೆಚ್ಚಿಸುವವರು ವಿನಃ ಉಳಿದ ೭೩೪ ಜನರು ಕುಳಿತು ಊಟಮಾಡುವವರು ಇದ್ದಾರೆ. ರಾಜಕೀಯವು ಕುತೂಹಲ ಮತ್ತು ಆಸಕ್ತಿ ಹಾಗೂ ಅನುಭವವನ್ನು ಅವಲಂಬಿಸಿದೆ ಎಂಬುವದು ರಾಜಕೀಯ ತಜ್ಞರ ಅಭಿಪ್ರಯವಾಗಿದೆ. ಅದೇ ರೀತಿಯಾಗಿ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯದಲ್ಲಿ ವಯೋಮಿತಿಯು ಮಹತ್ವದ ಪಾತ್ರ ನಿರ್ವಹಿಸುತ್ತದೆ. ಏಕೆಂದರೆ ನಾವು ಸಮೀಕ್ಷೆ ಮಾಡಿದ ೨೮೩ ಗ್ರಾಮ ಪಂಚಾಯಿತಿ ಸದಸ್ಯರ ಕುಟುಂಬಗಳಲ್ಲಿ ೧೮೪೬ ಜನಸಂಖ್ಯೆ ಇದ್ದು ಅದರಲ್ಲಿ ೧೧೧೨ ಶೇಕಡಾ ೬೦.೨೩ರಷ್ಟು ಸದಸ್ಯರು ಮಾತ್ರ ಅರ್ಹರಾಗಿದ್ದು, ರಾಜಕೀಯದಲ್ಲಿ ಕ್ರಿಯಾಶೀಲರಾಗಿ ಕಾರ್ಯನಿರ್ವಹಿಸಬಹುದು. ಏಕೆಂದರೆ ಈ ಸದಸ್ಯರು ದುಡಿಯುವ ಯೋಗ್ಯತೆಯನ್ನು ಹೊಂದಿದ್ದು, ಆರ್ಥಿಕವಾಗಿ ಸುಭದ್ರ, ಸ್ವಾತಂತ್ರ್ಯವಾಗಿರುವುದರ ಜೊತೆಗೆ ರಾಜಕೀಯದಲ್ಲಿ ಸ್ಪೂರ್ತಿಯಿಂದ ಭಾಗವಹಿಸುತ್ತಾರೆ. ಉಳಿದ ೭೩೪ ಜನ ಸದಸ್ಯರು ೧೫ ವರ್ಷಕ್ಕಿಂತ ಕಡಿಮೆ ವಯಸ್ಸಿನವರು ಇದ್ದು ಇವರಿಗೆ ಬುದ್ದಿ ಪಕ್ವವಾಗಿರುವದಿಲ್ಲ ಮತ್ತು ಆರ್ಥಿಕವಾಗಿ ಸ್ವಾವಲಂಭಿಗಳಾಗದಿದ್ದರಿಂದ ಸ್ವಾತಂತ್ರ್ಯವಾಗಿ ಸ್ವಇಚ್ಛೆಯಿಂದ ರಾಜಕೀಯದಲ್ಲಿ ಭಾಗವಹಿಸಲಾಗುವುದಿಲ್ಲ. ಅದೇ ರೀತಿ ೬೦ ವರ್ಷಕ್ಕಿಂತ ಹೆಚ್ಚಿನ ವಯಸ್ಸಿನವರು ದೈಹಿಕವಾಗಿ ಅಸಕ್ತರಾಗಿದ್ದು ರಾಜಕೀಯ ದಲ್ಲಿ ಪಾದರಸದಂತೆ ತಿರುಗಾಡಿ ಜನಗಳ ಸೇವೆ ಮಾಡಲು ಕುತುಹಲ ಹೊಂದಿರದಿರುವದು ಪ್ರಸ್ತುತ ಸಮೀಕ್ಷೆಯಿಂದ ತಿಳಿದ ವಿಷಯವಾಗಿದೆ.

ಈ ಸಮೀಕ್ಷೆ ಸಂಶೋಧನೆಯಿಂದ ಗುಲಬರ್ಗಾ ಜಿಲ್ಲೆಯಲ್ಲಿ ಬುಡಕಟ್ಟು ಸಮುದಾಯವು ಶೇಕಡಾ ೬೦ರಷ್ಟು ರಾಜಕೀಯದಲ್ಲಿ ಆಸಕ್ತಿ ಹೊಂದಿದ್ದು, ಉಳಿದವರು ದೂರ ಉಳಿಯಲು ವಯೋಮಿತಿಯು ಒಂದು ಕಾರಣವೆಂದು ಹೇಳಬಹುದು.

## ಕೋಷ್ಟಕ ೪.೪

## ಗುಲಬರ್ಗಾ ಜಿಲ್ಲೆಯ ೨೮೩ ಗ್ರಾಮ ಪಂಚಾಯಿತಿ ಸದಸ್ಯರ ಕುಟುಂಬಗಳ ಸದಸ್ಯರ ವಯೋಮಿತಿ

| ತಾ. ಸಾಂ ಸಂ. | ೧-೫ | ೬-೧೦ | ೧೧-೧೫ | ೧೬-೨೦ | ೨೧-೨೫ | ೨೬-೩೦ | ೩೧-೩೫ | ೩೬-೪೦ | ೪೧-೪೫ | ೪೬-೫೦ | ೫೧-೫೫ | ೫೬-೬೦ | ಮೇಲ್ಪಟ್ಟು ೬೦ | ಒಟ್ಟು |
|---|---|---|---|---|---|---|---|---|---|---|---|---|---|---|
| ೦೧ | ೦೭ | ೦೬ | ೦೮ | ೦೫ | ೦೧ | ೦೨ | ೦೩ | ೦೩ | ೦೪ | ೦೨ | -- | ೦೧ | ೦೧ | ೪೩ |
| ೦೨ | ೦೩ | ೦೩ | ೦೫ | ೦೩ | ೦೫ | ೦೩ | ೦೩ | ೦೧ | ೦೧ | ೦೩ | ೦೧ | ೦೧ | ೦೧ | ೩೩ |
| ೦೩ | ೨೪ | ೧೯ | ೨೦ | ೧೬ | ೧೦ | ೧೨ | ೦೫ | ೧೦ | ೦೫ | ೦೭ | ೦೫ | ೦೯ | ೦೨ | ೧೪೪ |
| ೦೪ | ೧೧ | ೦೮ | ೦೭ | ೦೮ | ೦೭ | ೦೯ | ೦೮ | ೦೨ | ೦೨ | ೦೧ | ೦೪ | -- | ೦೨ | ೬೯ |
| ೦೫ | ೧೫ | ೧೨ | ೧೫ | ೦೯ | ೦೮ | ೦೭ | ೦೫ | ೦೫ | ೦೫ | ೦೩ | ೦೨ | ೦೧ | ೦೨ | ೮೯ |
| ೦೬ | ೨೧ | ೨೭ | ೧೭ | ೧೦ | ೦೬ | ೧೨ | ೧೨ | ೧೪ | ೦೭ | ೦೫ | ೦೫ | ೦೭ | ೦೫ | ೧೪೮ |
| ೦೭ | ೧೭ | ೧೧ | ೦೯ | ೦೯ | ೨೦ | ೧೨ | ೦೪ | ೦೪ | ೦೫ | ೦೬ | ೦೩ | ೦೨ | ೦೬ | ೧೦೮ |
| ೦೮ | ೩೪ | ೪೪ | ೨೯ | ೪೮ | ೪೧ | ೩೬ | ೧೭ | ೨೬ | ೧೩ | ೧೫ | ೧೨ | ೧೨ | ೦೮ | ೩೩೫ |
| ೦೯ | ೬೧ | ೮೮ | ೬೬ | ೫೩ | ೬೨ | ೭೦ | ೪೨ | ೪೪ | ೨೫ | ೧೪ | ೨೦ | ೧೯ | ೧೦ | ೫೭೪ |
| ೧೦ | ೩೨ | ೩೬ | ೩೭ | ೩೪ | ೩೮ | ೨೫ | ೧೩ | ೨೬ | ೨೩ | ೧೭ | ೦೯ | ೦೮ | ೦೫ | ೩೦೩ |
| ಒಟ್ಟು | ೨೨೫ | ೨೫೪ | ೨೧೩ | ೧೯೫ | ೧೯೮ | ೧೮೮ | ೧೧೩ | ೧೩೫ | ೯೦ | ೭೩ | ೬೧ | ೬೦ | ೪೨ | ೧೮೪೬ |

## ೪.೬. ಗುಲಬರ್ಗಾ ಜಿಲ್ಲೆಯ ೨೮೩ ಬುಡಕಟ್ಟು ಗ್ರಾಮಪಂಚಾಯಿತಿ ಸದಸ್ಯರ ಕುಟುಂಬದ ಸದಸ್ಯರ ವೈವಾಹಿಕ ಸ್ಥಾನಮಾನ

ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಾಯ. ಈ ವಿಷಯವನ್ನು ಕುರಿತು ಹಮ್ಮಿಕೊಂಡ ಕ್ಷೇತ್ರಕಾರ್ಯದ ವ್ಯಾಪ್ತಿಯಲ್ಲಿ ಜಿಲ್ಲೆಯ ಹತ್ತು ತಾಲೂಕಿನಲ್ಲಿ ೨೮೩ ಗ್ರಾಮ (ಎಸ್.ಟಿ.) ಪಂಚಾಯಿತಿ ಸದಸ್ಯರಿದ್ದು ಅವರ ಕುಟುಂಬಗಳ ಜನತೆಯನ್ನು ವೈವಾಹಿಕ ಸ್ಥಿತಿಯ ಆಧಾರದ ಮೇಲೆ ಆರು ಗುಂಪುಗಳಾಗಿ ಅಂದರೆ ವಿವಾಹವಾಗದವರು, ವಿವಾಹವಾದವರು ಮತ್ತು ವಿವಾಹ ವಿಚ್ಛೇದನ ಪಡೆದವರು ಹಾಗೂ ಬೇರ್ಪಡೆ, ಮತ್ತು ವಿಧುರರು ಹಾಗೂ ವಿಧವೆಯರು ಎಂಬುವದಾಗಿ ವಿಂಗಡಿಸಲಾಗಿದೆ. ಈ ವಿಂಗಡಣೆಯಿಂದ ಬಾಲ್ಯವಿವಾಹ, ವಿಧವಾ ವಿವಾಹ ಮೊದಲಾದ ಸಾಮಾಜಿಕ ಸ್ಥಿತಿಗತಿಯನ್ನು ತಿಳಿಯಬಹುದು ಅಲ್ಲದೆ ಸಾಮಾಜಿಕ ಅಧ್ಯಯನ ಮಾಡಲು ನೆರವಾಗುತ್ತದೆ. ಈ ಬುಡಕಟ್ಟುಗಳ ಸಾಮಾಜಿಕ ಬದುಕು ರಾಜಕೀಯ ಜೀವನಕ್ಕೆ ಹೇಗೆ ಸಹಾಯಕವಾಗುತ್ತದೆ ಎಂಬುವದು ಕುರಿತು ಪತ್ತೆ ಹಚ್ಚುವದು ಈ ಸಂಶೋಧನೆಯ ಪ್ರಮುಖ ಗುರಿಯಾಗಿದೆ.(ಕೋಷ್ಟಕ ೪.೫.ನೋಡಿ)

೧೯೯೧ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ಬುಡಕಟ್ಟು ಜನಸಂಖ್ಯೆ ೧,೦೬,೯೩೫ ಇದ್ದು ನಮ್ಮ ಸಂಶೋಧನೆಯ ವ್ಯಾಪ್ತಿಯಲ್ಲಿ ಬರುವವರು ೧೮೪೬ ಇದ್ದು ಅದರಲ್ಲಿ ೮೮೨ ಜನರು ಅವಿವಾಹಿತರು ಮತ್ತು ೮೭೨ ಜನರು ವಿವಾಹಿತರು ಇದು ೯೧ ಜನರು ವಿಧುರ ಮತ್ತು ವಿಧತಿಯರು ೦೧ ಬೇರ್ಪಡೆಯಾಗಿರುವದು ಪ್ರಸ್ತುತ ಸಂಶೋಧನೆಯಿಂದ ತಿಳಿಯಲಾಗಿದೆ. ೫೦೭ ಸ್ತ್ರೀ-ಪುರುಷರು ಮಾತ್ರ ೧೮ ವರ್ಷ ಮಿರಿದವರು ಇದ್ದು ರಾಜಕೀಯದಲ್ಲಿ ಭಾಗವಹಿಸುವ ಅರ್ಹತೆಯನ್ನು ಪಡೆದಿದ್ದಾರೆ. ಇನ್ನುಳಿದ ಶೇಕಡ ೫೦ರಷ್ಟು ಜನರು ರಾಜಕೀಯದಿಂದ ದೂರ ಉಳಿಯಲು ಕಾರಣ ಅವರು ೧೮ಕ್ಕಿಂತ ಚಿಕ್ಕ ವಯಸ್ಸಿನವರಿದ್ದಾರೆ. Man is a social animal ಎಂಬ ಹೇಳಿಕೆಯಂತೆ ಮನುಷ್ಯನು ತನ್ನ ಗುರಿ ಮತ್ತು ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಸಮಾಜದೊಂದಿಗೆ ಹೊಂದಿಕೊಂಡು ಬದುಕಲೇ ಬೇಕಾಗುತ್ತದೆ. ಅಂತಹ ಗುರಿ ಮತ್ತು ಉದ್ದೇಶಗಳಲ್ಲಿ ರಾಜಕೀಯ ಅಧಿಕಾರ ಹೊಂದಾಗಿದೆ. ಮನುಷ್ಯನ ರಾಜಕೀಯ ಬದುಕಿಗೆ ಸಾಮಾಜಿಕ ಸ್ಥಿತಿ ಗತಿಯು ಪ್ರೇರಣೆಯಾಗಿದೆ. ಅದೇ ರೀತಿ ಬುಡಕಟ್ಟು ಸದಸ್ಯರು

## ಕೋಷ್ಟಕ ೪.೫

# ೨೮೩ ಗ್ರಾಮ ಪಂಚಾಯಿತಿ ಸದಸ್ಯರ ಕೌಟುಂಬಿಕ ಜನಸಂಖ್ಯೆ ಮತ್ತು ವೈವಾಹಿಕ ಸ್ಥಾನಮಾನ

| ಸಾ ಸಂಖ್ಯೆ | ಪುರುಷರು | | | | | ಸ್ತ್ರೀಯರು | | | | | ಸ್ತ್ರೀ/ಪುರುಷರು | | | | |
|---|---|---|---|---|---|---|---|---|---|---|---|---|---|---|---|
| | ಅವಿವಾಹಿತರು | ವಿವಾಹಿತ | ವಿಧುರ | ಬೇರ್ಪಡೆ | ಒಟ್ಟು | ಅವಿವಾಹಿತರು | ವಿವಾಹಿತ | ವಿಧುರ | ಬೇರ್ಪಡೆ | ಒಟ್ಟು | ಅವಿವಾಹಿತರು | ವಿವಾಹಿತರು | ವಿಧುರ/ ವಿಧುರರು | ಬೇರ್ಪಡೆ | ಒಟ್ಟು |
| ೦೧ | ೧೫ | ೦೮ | -- | -- | ೨೩ | ೧೦ | ೦೮ | ೦೨ | -- | ೨೦ | ೨೫ | ೧೬ | ೦೨ | -- | ೪೩ |
| ೦೨ | ೦೮ | ೦೮ | ೦೨ | -- | ೧೮ | ೦೬ | ೦೮ | ೦೧ | -- | ೧೫ | ೧೪ | ೧೬ | ೦೩ | -- | ೩೩ |
| ೦೩ | ೪೭ | ೨೬ | ೦೩ | -- | ೭೬ | ೩೨ | ೨೬ | ೧೦ | -- | ೬೮ | ೭೯ | ೫೨ | ೧೩ | -- | ೧೪೪ |
| ೦೪ | ೧೩ | ೧೮ | -- | -- | ೩೧ | ೧೪ | ೨೦ | ೦೪ | -- | ೩೮ | ೨೭ | ೩೮ | ೦೪ | -- | ೬೯ |
| ೦೫ | ೩೩ | ೧೮ | -- | -- | ೫೧ | ೧೪ | ೧೮ | ೦೬ | -- | ೩೮ | ೪೭ | ೩೬ | ೦೬ | -- | ೮೯ |
| ೦೬ | ೩೪ | ೩೪ | ೦೧ | -- | ೬೯ | ೩೮ | ೩೪ | ೦೬ | ೦೧ | ೭೯ | ೭೨ | ೬೮ | ೦೭ | ೦೧ | ೧೪೮ |
| ೦೭ | ೨೩ | ೨೭ | -- | -- | ೫೦ | ೨೨ | ೨೮ | ೦೮ | -- | ೫೮ | ೪೫ | ೫೫ | ೦೮ | -- | ೧೦೮ |
| ೦೮ | ೮೬ | ೮೧ | ೦೩ | -- | ೧೭೦ | ೬೬ | ೬೬ | ೧೭ | -- | ೧೬೫ | ೧೫೨ | ೧೬೩ | ೨೦ | -- | ೩೩೫ |
| ೦೯ | ೧೭೩ | ೧೩೮ | ೦೪ | -- | ೩೧೫ | ೧೦೬ | ೧೦೬ | ೧೫ | -- | ೨೫೯ | ೨೭೯ | ೨೭೬ | ೧೯ | -- | ೫೭೪ |
| ೧೦ | ೮೪ | ೭೬ | -- | -- | ೧೬೦ | ೫೮ | ೫೮ | ೦೯ | -- | ೧೪೩ | ೧೪೨ | ೧೫೨ | ೦೯ | -- | ೩೦೩ |
| ಒಟ್ಟು | ೫೧೬ | ೪೩೪ | ೧೩ | -- | ೯೬೩ | ೩೬೬ | ೩೬೬ | ೭೮ | ೦೧ | ೮೮೩ | ೮೮೨ | ೮೭೨ | ೯೧ | ೦೧ | ೧೮೪೬ |

ಕುಟುಂಬಗಳ ಜನ ಸಂಖ್ಯೆಯಲ್ಲಿ ಶೇಕಡಾ ೫೦ರಷ್ಟು ಮಾತ್ರ ರಾಜಕೀಯದಲ್ಲಿ ಭಾಗವಹಿಸಲು ಅರ್ಹರಿದ್ದು ಪ್ರಸ್ತುತ ಸಮೀಕ್ಷೆಯಿಂದ ತಿಳಿದುಬಂದಿದೆ.

ರಾಜಕೀಯವು ಕೇವಲ ಕೆಲವರಿಗೆ ಮಾತ್ರ ಅವಕಾಶ ಕಲ್ಪಿಸುವುದು ಎಂದು ತಿಳಿಯುವುದು ತಮ್ಮ ಈ ಸಮೀಕ್ಷೆಯಲ್ಲಿ ಬೇರ್ಪಡೆಯಾಗಿರುವಂತ ಒಬ್ಬ ಸ್ತ್ರೀಯು ಸಹ ರಾಜಕೀಯದಲ್ಲಿ ಭಾಗವಹಿಸಲು ಅವಕಾಶ ಪಡೆದುಕೊಂಡಿದ್ದಾಳೆ. ಅದೇ ರೀತಿ ವಿಧವೆ, ವಿಧುರರು ಸಹ ರಾಜಕೀಯ ಮೀಸಲಾತಿಯನ್ನು ಪಡೆದುಕೊಂಡಿದ್ದಾರೆ.

## ೪.೭. ಗುಲಬರ್ಗಾ ಜಿಲ್ಲೆಯ ವಿವಿಧ ಬುಡಕಟ್ಟುಗಳ ರಾಜಕೀಯ ಆಸಕ್ತಿ

೧೯೮೧ರ ಸರಕಾರಿ ಆದೇಶದ ಪ್ರಕಾರ ಗುಲಬರ್ಗಾ ಜಿಲ್ಲೆಯಾದ್ಯಂತ ೨೦ ಬುಡಕಟ್ಟು ಸಮುದಾಯಗಳಿದ್ದು ೧೯೯೧ರ ಜನಗಣತಿಯ ಪ್ರಕಾರ ಒಟ್ಟು ಬುಡಕಟ್ಟು ಸಮುದಾಯ ೧,೦೬,೯೩೫ ಇತ್ತು. ಅತ್ಯಂತ ಹೆಚ್ಚು ಜನಸಂಖ್ಯೆ ಹೊಂದಿರುವ ಸಮುದಾಯ ಬೇಡ ಅಥವಾ ನಾಯಕ ಸಮುದಾಯ ೧೯೯೩ರ ಪಂಚಾಯತಿ ಚುನಾವಣೆಯಲ್ಲಿ ಬುಡಕಟ್ಟು ಸಮುದಾಯಗಳಿಗೆ ಶೇಕಡಾ ೩ರಷ್ಟು ಮೀಸಲಾತಿಯನ್ನು ನಿಗಧಿಪಡಿಸಲಾಗಿತ್ತು.

ಈ ಸಂಶೋಧನೆಯ ವ್ಯಾಪ್ತಿಯಲ್ಲಿ ಜಿಲ್ಲೆಯ ಹತ್ತು ತಾಲೂಕಿನಲ್ಲಿ ಬುಡಕಟ್ಟು ಸಮುದಾಯ ಗಳಿಂದ ಆಯ್ಕೆಯಾಗಿರುವ ಸದಸ್ಯರ ೨೮೩ ಗ್ರಾ.ಪಂ. 09 ತಾ.ಪಂ. ಮತ್ತು ೩ ಜನ ಸದಸ್ಯರು ಜಿ.ಪಂ.ಗೆ ಆಯ್ಕೆಯಾಗಿದ್ದಾರೆ. ಇದರಲ್ಲಿ ಕೇವಲ ಕೆಲವು ಬುಡಕಟ್ಟುಗಳು ಮಾತ್ರ ಪ್ರಧಾನ ಪಾತ್ರ ನಿರ್ವಹಿಸುತ್ತಿದ್ದು ಇನ್ನುಳಿದ ಬುಡಕಟ್ಟುಗಳು ರಾಜಕೀಯದಿಂದ ದೂರ ಉಳಿದಿವೆ. ಜಿಲ್ಲೆಯ ಬೇಡ ಸಮುದಾಯ ಮಾತ್ರ ರಾಜಕೀಯದಲ್ಲಿ ಸಕ್ರಿಯವಾಗಿ ಪಾಲ್ಗೊಂಡಿರುವದು ಗಮನಾರ್ಹ ಸಂಗತಿಯಾಗಿದೆ. ಈ ಸಮುದಾಯವು ಮೀಸಲಾತಿಯನ್ನು ಸಂಪೂರ್ಣ ಉಪಯೋಗಿಸಿಕೊಳ್ಳವದರ ಜೊತೆಗೆ ಸಾಮಾನ್ಯ ಕ್ಷೇತ್ರದಿಂದ ಸ್ಪರ್ಧಿಸಿ ಆಯ್ಕೆಯಾಗಿರುವ ಸಂಗತಿಗಳು ಈ ಕ್ಷೇತ್ರಕಾರ್ಯದಿಂದ ಗಮನಕ್ಕೆ ಬಂದಿವೆ. ಇನ್ನುಳಿದ ಬುಡಕಟ್ಟುಗಳು ಸರಕಾರ ಮೀಸಲಾತಿಯನ್ನು ನೀಡಿದ್ದರು ಸಹಿತ ರಾಜಕೀಯ ಆಸಕ್ತಿ ತೋರದಿರುವುದು ಕಂಡುಬಂದಿದೆ.

**ಬೇಡ ಬುಡಕಟ್ಟು ರಾಜಕೀಯದಲ್ಲಿ ಹೆಚ್ಚಿನ ಆಸಕ್ತಿ ತೋರಲು ಪುಷ್ಠಿ ನೀಡಿದ ಅಂಶಗಳು**

೧. ಬೇಡ ಅಥವಾ ನಾಯಕ ಸಮುದಾಯದ ಬಹುಸಂಖ್ಯಾತರಲ್ಲಿ ರಾಜಕೀಯ ಪರಂಪರೆಯುಳ್ಳವರಾಗಿರುವರು.

೨. ಈ ಸಮುದಾಯವು ಹೆಚ್ಚು ಇದ್ದು, ಎಲ್ಲಾ ಕಡೆ ಹೆಚ್ಚು ಕಡಿಮೆ ಸಮಾನವಾಗಿ ಜಿಲ್ಲೆಯಾದ್ಯಂತ ಹಂಚಿಕೆಯಾಗಿರುವದು ಕಂಡುಬರುತ್ತದೆ.

೩. ಈ ಸಮುದಾಯದವರಲ್ಲಿ ಹೆಚ್ಚು ಅಕ್ಷರಜ್ಞಾನ ಹೊಂದಿದವರು ಇದ್ದು, ಬಾಹ್ಯ ಪ್ರಪಂಚದ ತಿಳುವಳಿಕೆ ಹೊಂದಿದ್ದಾರೆ.

೪. ಈ ಸಮುದಾಯದ ಜನರು ಸಾಮಾನ್ಯವಾಗಿ ಧೈರ್ಯವಂತರು, ಶೂರರು, ಮತ್ತು ಹೋರಾಟದ ಮನೋಭ್ವಾನೆಯನ್ನು ಬೆಳಸಿಕೊಂಡಿದ್ದಾರೆ.

೫. ಈ ಸಮುದಾಯದಲ್ಲಿ ಆರ್ಥಿಕ ಭದ್ರತೆಯುಳ್ಳವರು ಲಭ್ಯವಾಗುವರು.

೬. ಈ ಸಮುದಾಯದಲ್ಲಿ ತಮ್ಮ ಸಂಘ ಸಂಸ್ಥೆಯನ್ನು ರಚಿಸಿಕೊಂಡು ಇರತ ಸಮುದಾಯಗಳ ಜೊತೆಗೆ ಸ್ಪರ್ಧಿಸಲು ಅರ್ಹರಾಗಿದ್ದಾರೆ.

**ಇತರ ಬುಡ ಕಟ್ಟುಗಳು ರಾಜಕೀಯದಿಂದ ದೂರ ಉಳಿಯಲು ಕಾರಣಗಳು**

೧. ಕೆಲವು ಬುಡಕಟ್ಟುಗಳು ಬೇರೆ ರಾಜ್ಯದಿಂದ ವಲಸೆ ಬಂದಿದ್ದು ಅಲ್ಪ ಸ್ವಲ್ಪ ಜನಸಂಖ್ಯೆಯನ್ನು ಹೊಂದಿದೆ.

೨. ಈ ಬುಡಕಟ್ಟುಗಳು ಸ್ಥಿರಾಸ್ತಿ ಹೊಂದಿರದಿರುವದು ರಾಜಕೀಯವಾಗಿ ದೂರಉಳಿಯಲು ಮತ್ತೊಂದು ಕಾರಣ.

೩. ಆರ್ಥಿಕವಾಗಿ ತೀರ ಹಿಂದೂಳಿದ ಬುಡಕಟ್ಟುಗಳು ಇರುವದರಿಂದ ರಾಜಕೀಯ ಗಂಧ ಗೊತ್ತಿರುವದಿಲ್ಲ.

೪. ಇತರ ಸಮುದಾಯಗಳಲ್ಲಿ ಅಕ್ಷರ ಜ್ಞಾನವೇ ಇರುವದಿಲ್ಲ ಇದರಿಂದ ರಾಜಕೀಯ ಆಸಕ್ತಿ, ಕುತೂಹಲ ಕಡಿಮೆಗೆ ಒಂದು ಕಾರಣ.

೫. ಈ ಬುಡಕಟ್ಟುಗಳಲ್ಲಿ ತಮ್ಮ ತಮ್ಮ ಜಾತಿಯ ಸಂಘಟನೆಗಳನ್ನು ರಚಿಸಿಕೊಂಡು ಇತರ ಜಾತಿಗಳ ಜೊತೆ ಹೋರಾಟ ಮಾಡಲಾರವು.

೬. ಚುನಾವಣೆಯ ವೇಳೆಯಲ್ಲಿ ಜಾತಿ ಪ್ರಮಾಣ ಪತ್ರ ದೊರೆಯದಿರುವದು ಮತ್ತೊಂದು ಕಾರಣ.

೭. ಪ್ರಜಾಪ್ರಭುತ್ವದ ತತ್ವಗಳಾದ, ಸ್ವಾತಂತ್ರ್ಯ ಸಮಾನತೆ, ಭ್ರಾತೃತ್ವ,ಮತ್ತು ಹಕ್ಕು ಇವುಗಳ ಬಗ್ಗೆ ಕಲ್ಪನೆ ಇರುವದಿಲ್ಲ.

೮. ಕೆಲವು ಬುಡಕಟ್ಟು ಜನಸಂಖ್ಯೆ ಹೆಚ್ಚಿನ ಪ್ರಮಾಣದಲ್ಲಿ ಇದ್ದರೂ ಸಹಿತ ರಾಜಕೀಯದಲ್ಲಿ ಭಾಗವಹಿಸಲು ಆಸಕ್ತಿ ಇರುವದಿಲ್ಲ. ಏಕೆಂದರೆ ಜಾತಿ ಪ್ರಮಾಣ ಪತ್ರ ದೊರೆಯದಿರುವದು, ರಾಜಕೀಯವು ಅಕ್ಷರ, ಆರ್ಥಿಕ ಅಭಿವೃದ್ಧಿ ಇವುಗಳನ್ನು ಅವಲಂಭಿಸಿರದೆ, ಆಸಕ್ತಿ ಅಧಿಕಾರದ ದಾಹ ಮತ್ತು ಜನ ಸೇವಾ ಮನೋಭಾವನೆಯನ್ನು ಅವಲಂಬಿಸಿದೆ ಎಂಬುವದು ಸ್ಪಷ್ಟ. ಆದರೆ ಹೆಚ್ಚಿನ ಬುಡಕಟ್ಟುಗಳು ರಾಜಕೀಯದಿಂದ ದೂರ ಉಳಿಯಲು ಈಗಾಗಲೇ ಹಲವಾರು ಕಾರಣಗಳನ್ನು ನೀಡಲಾಗಿದೆ. ಆದರೆ ಇಂದಲ್ಲ ನಾಳೆ ಎಲ್ಲಾ ಬುಡಕಟ್ಟುಗಳು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವದು ತಮ್ಮ ಕರ್ತವ್ಯ ಎಂದು ಭಾವಿಸುವ ಕಾಲ ದೂರವಿಲ್ಲ.

ಏಕೆಂದರೆ ಇಂದು ಎಲ್ಲಾ ಬುಡಕಟ್ಟು ಸಮುದಾಯಗಳು ಅಕ್ಷರ ಜ್ಞಾನ ಸ್ವಾತಂತ್ರ್ಯ, ಸಮಾನತೆ, ಹಕ್ಕು ಮತ್ತು ಕರ್ತವ್ಯಗಳ ಕಲ್ಪನೆ ಮೂಡಿರುವದು ಪ್ರಸ್ತುತ ಸಮೀಕ್ಷೆಯಿಂದ ತಿಳಿದು ಬಂದಿದೆ. ಮಾನವನ್ನು ರಾಜಕೀಯ ಜೀವಿಯಾಗಿದ್ದಾನೆ ಎಂಬುವಂತೆ ಇಂದು ಪ್ರತಿಯೊಬ್ಬ ವ್ಯಕ್ತಿಯು ಅಧಿಕಾರಕ್ಕಾಗಿ ಹೋರಾಟ ಮಾಡುವ ಮನೋಭಾವನ್ನು ಬೆಳೆಸಿಕೊಂಡು, ಆಡಳಿತ, ಅಧಿಕಾರ, ಅಂತಸ್ತು ಇತ್ಯಾದಿಗಳ ಮಹತ್ವ ಅರಿತುಕೊಂಡು ಅವುಗಳನ್ನು ಪಡೆಯುವ ಸಲುವಾಗಿ ನಿರಂತರ ಹೋರಾಟ ಮಾಡುತ್ತಿದ್ದಾನೆ.

## ೪.೮. ಗ್ರಾಮ ಪಂಚಾಯಿತಿ ಬುಡಕಟ್ಟು ಸದಸ್ಯರು ಹಾಗೂ ರಾಜಕೀಯ ಪಕ್ಷಗಳು

"ಪಕ್ಷ ರಹಿತ ರಾಜಕೀಯ ಸತ್ವ ರಹಿತವಾದದ್ದು." ಎಂಬುವ ಹಾಗೆ ಕೆಲವು ರಾಜಕೀಯ ತತ್ವಜ್ಞಾನಿಗಳು ರಾಜಕೀಯವನ್ನು ಪಕ್ಷ ರಾಜಕೀಯ ಎಂದಿದ್ದಾರೆ. ಯಾವದೇ ಒಂದು ರಾಜಕೀಯ ಪಕ್ಷ ಚುನಾವಣೆಯಲ್ಲಿ ಗೆಲುವು ಸಾಧಿಸಿ ಆಡಳಿತದಲ್ಲಿ ಸಕ್ರಿಯವಾಗಿ ಕಾರ್ಯ ನಿರ್ವಹಿಸಲು ಅದರ ಆದರ್ಶಗಳು ಮತ್ತು ಚಾರಿತ್ರಿಕ ಹಿನ್ನೆಲೆ ಹಾಗೂ ಪ್ರಣಾಳಿಕೆಗಳು, ಇತ್ಯಾದಿ ಅಂಶಗಳು ಮಹತ್ವದ ಪಾತ್ರ ನಿರ್ವಹಿಸುತ್ತಿರುವದು ಗಮನಾರ್ಹ ಸಂಗತಿಯಾಗಿದೆ. ಅದೇ ರೀತಿಯಾಗಿ ೧೯೯೩ರ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ನಾಯಕರಿಗೆ ಬೆಂಬಲಿಸಿ ಗೆಲವು ಸಾಧಿಸಲು ಶ್ರಮಿಸಿದ ಕೆಲವು ರಾಜಕೀಯ ಪಕ್ಷಗಳ ಬಲಾಬಲವನ್ನು ಕುರಿತು ಪ್ರಸ್ತುತ ಸಮೀ ಕ್ಷೆಯಿಂದ ಸಂಗ್ರಹಿಸಿದ ಮಾಹಿತಿಯ ವರದಿ. (ಕೋಷ್ಟಕ ೪.೬ ನೋಡಿ)

೧೯೯೩ರಲ್ಲಿ ಜಿಲ್ಲೆಯ ೨೮೩ ಬುಡಕುಟ್ಟು ಸಮುದಾಯದ ಸದಸ್ಯರು ಸ್ಪರ್ಧಿಸಲು ಬೆಂಬಲಿಸಿದ ರಾಜಕೀಯ ಪಕ್ಷಗಳು ಆರು (೦೬) ಇದ್ದು ಅತೀ ಹೆಚ್ಚು ಸದಸ್ಯರನ್ನು ಆಯ್ಕೆ ಮಾಡಲು ಶ್ರಮಿಸಿದ ಕೀರ್ತಿ ಕಾಂಗ್ರೇಸ್ ಪಕ್ಷಕ್ಕೆ ಸಲ್ಲುತ್ತದೆ. ಈ ಪಕ್ಷ ೧೬೪ ಸ್ಥಾನಗಳನ್ನು ಪಡೆದು ಪ್ರಥಮ ಸ್ಥಾನದಲ್ಲಿ ಇದೆ. ಜನತಾ ದಳ ಎರಡನೆಯ ಸ್ಥಾನ ಎಂದರೆ ೯೦ ಸದಸ್ಯರನ್ನು ಆಯ್ಕೆ ಮಾಡಿದರೆ ಮತ್ತೊಂದು ಪಕ್ಷ ಎಂದರೆ ಬಿ.ಜೆ.ಪಿ. ತೃತೀಯ ಸ್ಥಾನವನ್ನು ಪಡೆದಿದೆ. ೦೭ ಸ್ಥಾನವನ್ನು ಗಳಿಸಿದ ಸ್ವಾತಂತ್ರ್ಯ ಪಕ್ಷ. ಇನ್ನು ರೈತಸಂಘ ೨ ಸ್ಥಾನಗಳು, ಕರ್ನಾಟಕ ಕಾಂಗ್ರೇಸ್ ೦೧ ಸ್ಥಾನವನ್ನು ಗಳಿಸಿ ತಮ್ಮ ಪಕ್ಷ ಹೆಸರನ್ನು ಉಳಿಸಿರುವದು ಕಂಡು ಬರುತ್ತದೆ. ಗುಲಬರ್ಗಾ ಜಿಲ್ಲೆಯಲ್ಲಿ ಕಾಂಗ್ರೇಸ್ ಪಕ್ಷ ಕೇವಲ ಸ್ಥಳೀಯ ಚುನಾವಣೆಗಳಲ್ಲಿ ಮಾತ್ರವಲ್ಲದೆ, ವಿಧಾನ ಸಭೆ ಮತ್ತು ಲೋಕ ಸಭೆಯ ಚುನಾವಣೆಯಲ್ಲಿ ಸಹಿತ ಪ್ರಚಂಡ ಬಹುಮತ ಪಡೆದು ಗೆಲುವು ಸಾಧಿಸಿರುವದು ನಮಗೆ ತಳಿದುಬರುತ್ತದೆ. ಇನ್ನು ಕೆಲವು ಭಾಗದಲ್ಲಿ ಮಾತ್ರ ಜನತಾದಳ ಹಾಗೂ ಬಿ.ಜೆ.ಪಿ. ಗೆಲವು ಸಾಧಿಸಿರುವ ಮಾಹಿತಿ ಇದೆ. ಇತರ ರಾಜಕೀಯ ಪಕ್ಷಗಳು ಅಲ್ಲೊಂದು ಇಲ್ಲೊಂದು ಸ್ಥಾನಗಳಿಸಿರುವದು ವ್ಯಕ್ತಿಯಿಂದ ಮಾತ್ರ ಪಕ್ಷದಿಂದ ಅಲ್ಲ ಎಂಬುವದು

**ಕೋಷ್ಟಕ ೪.೬**

## ಗುಲಬರ್ಗಾ ಜಿಲ್ಲೆಯ ತಾಲೂಕುವಾರು ಹಾಗೂ ರಾಜಕೀಯ ಪಕ್ಷವಾರು ಗ್ರಾ.ಪ.ಬುಡಕಟ್ಟು ಸದಸ್ಯರ ಪಟ್ಟಿ

| ಕ್ರ.ಸಂ | ರಾಜಕೀಯ ಪಕ್ಷಗಳು | ೦೧ | ೦೨ | ೦೩ | ೦೪ | ೦೫ | ೦೬ | ೦೭ | ೦೮ | ೦೯ | ೧೦ | ಒಟ್ಟು |
|---|---|---|---|---|---|---|---|---|---|---|---|---|
| ೦೧ | ರಾ. ಕಾಂಗ್ರೆಸ್ | ೦೨ | ೦೨ | ೧೭ | ೦೪ | ೦೫ | ೧೨ | ೦೬ | ೨೭ | ೬೦ | ೨೯ | ೧೬೪ |
| ೦೨ | ಜನತಾ ದಳ | ೦೪ | ೦೨ | ೦೪ | ೦೪ | ೦೫ | ೧೨ | ೦೩ | ೨೦ | ೧೭ | ೧೯ | ೯೦ |
| ೦೩ | ಭಾರತಿಯ ಜನತಾ ಪಕ್ಷ | -- | -- | ೦೧ | ೦೨ | ೦೨ | -- | ೦೬ | ೦೬ | ೦೧ | ೦೧ | ೧೯ |
| ೦೪ | ಕರ್ನಾಟಕ ಕಾಂಗ್ರೆಸ್ | -- | -- | -- | -- | -- | ೦೧ | -- | -- | -- | -- | ೦೧ |
| ೦೫ | ಸ್ವತಂತ್ರ ಪಕ್ಷ | -- | -- | -- | -- | -- | -- | -- | -- | -- | ೦೭ | ೦೭ |
| ೦೬ | ರೈತ ಸಂಘ | -- | -- | -- | -- | -- | -- | -- | -- | -- | ೦೨ | ೦೨ |
| ಒಟ್ಟು | ೦೬ | ೦೬ | ೦೪ | ೨೨ | ೧೦ | ೧೨ | ೨೫ | ೧೫ | ೫೩ | ೮೭ | ೪೯ | ೨೮೩ |

ಖಚಿತವಾಗಿದೆ. ಆದರೆ ಸ್ವಾತಂತ್ರ್ಯ ಪಕ್ಷ ನಾಲ್ಕನೇ ಸ್ಥಾನ ಪಡೆದಿರುವದು ಮತದಾರರಲ್ಲಿ ಮತದ ಮೌಲ್ಯ, ಚುನಾವಣೆಯ ಮಹತ್ವ ಅವರಲ್ಲಿ ಮೂಡಿದೆ.

**ಸ್ಥಳೀಯ ಸಂಸ್ಥೆಗಳಿಗೆ ಕಾಂಗ್ರೆಸ್ ಅತೀ ಹೆಚ್ಚು ಮತ ಪಡೆಯಲು ಹಲವಾರು ಕಾರಣಗಳಿವೆ**

೧. ಹಿಂದಿನಿಂದಲೂ ಕೇಂದ್ರ ಮತ್ತು ರಾಜ್ಯ ಮಟ್ಟದಲ್ಲಿ ಕಾಂಗ್ರೆಸ್ ಸಂಪೂರ್ಣ ಅಧಿಕಾರವನ್ನು ಪಡೆದು ಸ್ಥಿರ ಸರಕಾರವನ್ನು ಜನರಿಗೆ ನೀಡಿ ಉತ್ತಮ ಆಡಳಿತವನ್ನು ಜನಗಳಿಗೆ ಒದಗಿಸಿದೆ.

೨. ಸ್ಥಳೀಯ ಮಟ್ಟದಲ್ಲಿ ಹೆಚ್ಚಿನ ಜನರು ಅನಕ್ಷರಸ್ಥರಾಗಿದ್ದು ನೆಹರೂ, ಇಂದಿರಾ ಗಾಂಧಿಯವರ ಧೋರಣೆಯಗಳನ್ನು ಇನ್ನೂ ಜನ ಸ್ಮರಿಸುತ್ತಿದ್ದಾರೆ.

೩. ಶತಮಾನದ ಇತಿಹಾಸವನ್ನು ಹೊಂದಿರುವ ಕಾಂಗ್ರೆಸ್ ಪಕ್ಷ ಹಲವಾರು ಆದರ್ಶಗಳನ್ನು ಜನರಿಗೆ ಪ್ರಚಾರ ಮಾಡಿ ಮತ ಪಡೆಯುವ ತಂತ್ರಗಾರಿಕೆಯನ್ನು ಅಳವಡಿಸಿಕೊಂಡಿದೆ.

೪. ಬೇರೆ ರಾಜಕೀಯ ಪಕ್ಷಗಳ ಕಾಂಗ್ರೆಸ್ ಪಕ್ಷದಂತೆ ಹಲವಾರು ಗುರಿ ಮತ್ತು ಉದ್ದೇಶಗಳನ್ನು ಹೊಂದಿದ್ದು ಜನರಿಗೆ ಸ್ಥಿರ ಸರಕಾರವನ್ನು ನೀಡಬಲ್ಲವು ಎಂಬ ಕಲ್ಪನೆ ಇಲ್ಲ. ಮತದಾರರು ಕಾಂಗ್ರೆಸ್ ಪಕ್ಷ ಒಂದೇ ರಾಜಕೀಯ ಪಕ್ಷ ಎಂದು ತಿಳಿದಿದ್ದಾರೆ. ಕಾಂಗ್ರೆಸ್‌ಪಕ್ಷದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಟಮಾಡಿದ ಪಕ್ಷ ಅದು ಜನಗಳ ಹಿತಕಾಗಿ ತನ್ನ ಧೋರಣೆಗಳನ್ನು ರೂಪಿಸಿ ಕೊಂಡಿರುತ್ತದೆ ಎಂಬ ಭಾವನೆ ಜನರ ತಲೆಯಲ್ಲಿ ಉಳಿದಿರುವದೇ ಈ ಪಕ್ಷದ ಪ್ರಚಂಡ ಬಹುಮತ ಪಡೆಯಲು ಸಾಧನವಾಗಿದೆ.

೬. ಈ ರಾಜಕೀಯ ಪಕ್ಷವು ರೈತರ ಮತ್ತು ಕಾರ್ಮಿಕರ ಏಳ್ಗೆಗಾಗಿ ಶ್ರಮಿಸುವದರೊಂದಿಗೆ ಅಲ್ಪ ಸಂಖ್ಯಾತರ ಮತ್ತು ಹಿಂದುಳಿದ ವರ್ಗದವರ ಹಾಗೂ ಮಹಿಳೆಯರ ಕಲ್ಯಾಣಕ್ಕಾಗಿ ದುಡಿಯುತ್ತದೆ ಎಂಬ ಭಾವನೆ ಜನರಲ್ಲಿ ಇರುವದು ಈ ಸಂಶೋಧನೆಯಿಂದ ತಿಳಿದು ಬರುತ್ತದೆ.

**ಇನ್ನಿತರ ರಾಜಕೀಯ ಪಕ್ಷಗಳ ಬಲಾ ಬಲ**

೧. ಜನತಾ ದಳ ೬೦ ಸ್ಥಾನಗಳನ್ನು ಪಡೆದು ಸ್ಥಳೀಯ ಸರಕಾರಗಳಲ್ಲಿ ದ್ವಿತೀಯ ಸ್ಥಾನ ಪಡೆಯಲು ೧೯೮೩ರಲ್ಲಿ ಕಾಂಗ್ರೆಸ್ ಸರಕಾರದಿಂದ ಬೆಸತ್ತ ಜನರು ದಳ ಸರಕಾರವನ್ನು

ಇಚ್ಚಿಸಿದ್ದಾರೆ ಹಾಗೂ ಕೆಲವು ಹಿರಿಯ ನಾಯಕರ ಆದರ್ಶಗನ್ನು ಸಹಿತ (ಜಯಪ್ರಕಾಶ ನಾರಾಯಣ) ಈ ಪಕ್ಷ ಈಡೇರಿಸಿರುವದೇ ಇದರ ಗೆಲುವಿನ ರಹಸ್ಯವಾಗಿದೆ.

೨. ಕಾಂಗ್ರೆಸ್ ಪಕ್ಷದ ಹೀನ ಸ್ಥಿತಿಯನ್ನು ಮತ್ತು ದುರಾಡಳಿತವನ್ನು ಕಂಡು ಬೇಸತ್ತು ಪಕ್ಷ ತೊರಿದು ಜನತಾದಳ ಸೇರಿಕೊಂಡಿರುವ ಕೆಲವು ಹಿರಿಯ ನಾಯಕರ ಬೆಂಬಲದಿಂದ ಈ ಪಕ್ಷ ಹೆಚ್ಚು ಸ್ಥಾನ ಪಡೆಯಲು ಸಹಾಯವಾಗಿದೆ.

೩. ಗ್ರಾಮೀಣ ಮಟ್ಟದಲ್ಲಿ ಸಹಿತ ರಾಜಕೀಯ ಆಸಕ್ತಿ ಅಧಿಕಾರದ ವ್ಯಾಮೋಹ ಇರುವದರಿಂದ ಪ್ರತಿಯೊಬ್ಬ ವ್ಯಕ್ತಿ ಒಂದಿಲ್ಲ ಒಂದು ರಾಜಕೀಯ ಪಕ್ಷದ ಬೆಂಬಲವನ್ನು ಪಡೆದು ರಾಜಕೀಯದಲ್ಲಿ ಜಯಸಾಧಿಸಲು ಹೋರಾಟ ಮಾಡುತ್ತಿರುವದೇ ಜನತಾದಳ ದ್ವಿತೀಯ ಸ್ಥಾನ ಪಡೆಯಲು ಸಾಧ್ಯವಾಗಿದೆ ಎಂದು ಹೇಳಬಹುದು.

### ಇನ್ನಿತರ ರಾಜಕೀಯ ಪಕ್ಷಗಳು

ಹಲವಾರು ವರ್ಷಗಳಿಂದ ರಾಜಕೀಯ ಅಧಿಕಾರ ಪಡೆಯದೇ ನಿರಂತರ ಹೋರಾಟ ಮಾಡುವ ಭಾರತೀಯ ಜನತಾ ಪಕ್ಷವು ಜಿಲ್ಲೆಯ ಸ್ಥಳೀಯ ಸಂಸ್ಥೆಗಳಲ್ಲಿ ೧೯ ಸ್ಥಾನ ಪಡೆದುಕೊಂಡಿರುವುದು ಜನರಲ್ಲಿ ರಾಜಕೀಯ ಅಭಿರುಚಿಯನ್ನು ತೋರಿಸುತ್ತದೆ. ಅದೇ ರೀತಿ ಕರ್ನಾಟಕ ಕಾಂಗ್ರೆಸ್, ಸಹಿತ ೦೧ ಸ್ಥಾನವನ್ನು ಉಳಿಸಿಕೊಂಡಿದೆ. ಸ್ವತಂತ್ರ ಪಕ್ಷ ೦೭ ಸ್ಥಾನವನ್ನು ಪಡೆದುಕೊಂಡು ಇತರ ಪಕ್ಷಗಳಿಗೆ ತುಂಬಾ ಸವಲಾಗಿದೆ. ಏಕೆಂದರೆ ಈ ಪಕ್ಷದಲ್ಲಿ ಇರುವ ಸದಸ್ಯರು ಯಾವುದೇ ರಾಜಕೀಯ ಪಕ್ಷದ ಹಾಗೂ ಹಿರಿಯ ನಾಯಕರ ಕೃಪಾಶೀರ್ವಾದ ಇಲ್ಲದೆ ಆಯ್ಕೆಯಾಗಿದ್ದು ಇವರಲ್ಲಿ ಸ್ವಂತ ಸಾಮರ್ಥ್ಯ ಮತ್ತು ಸಾರ್ವಜನಿಕ ಸೇವೆ, ಮತ್ತು ಸಂಪರ್ಕ ಹಾಗೂ ಉತ್ತಮ ವ್ಯಕ್ತಿತ್ವವುಳ್ಳವರಾಗಿರುತ್ತಾರೆ. ಇವರು ಬೇರೆ ರಾಜಕೀಯ ಪಕ್ಷದಲ್ಲಿ ಸ್ಥಾನಸಿಗದೆ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಲು ಇಚ್ಚಿರಬಹುದು. ಇಂತಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಿದ ಮತದಾರರು ನಿಜವಾಗಲೂ ಬುದ್ಧಿವಂತರೇ ಸರಿ ಏಕೆಂದರೆ ಪಕ್ಷಕ್ಕೆ ಮಹತ್ವ ಕೊಡದ ವ್ಯಕ್ತಿಯ ವ್ಯಕ್ತಿತ್ವಕ್ಕೆ ಮಹತ್ವ ನೀಡಿದ್ದಾರೆ.

ರೈತ ಸಂಘ ರಾಜಕೀಯ ಪಕ್ಷ ಸಹಿತ ನಿರಂತರವಾಗಿ ರಾಜಕೀಯದಲ್ಲಿ ಶ್ರಮಿಸುತ್ತಿದೆ. ಅಲ್ಲೊಂದು ಇಲ್ಲೊಂದು ಸ್ಥಾನವನ್ನು ಪಡೆದುಕೊಂಡು ಉಸಿರಾಡಿಸುತ್ತಿರುವುದು ತಿಳಿದು ಬಂದಿದೆ.

**ಉಪಸಂಹಾರ**

ಗುಲಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಸದಸ್ಯರನ್ನು ಬೆಂಬಲಿಸಿದ ರಾಜಕೀಯ ಪಕ್ಷಗಳ ಬಲಾಬಲ ಮತ್ತು ವಿವರಣೆಯನ್ನು ಗಮನಿಸಿದರೆ ಗ್ರಾಮೀಣ ಜನರಲ್ಲಿ ಸಾಮಾನ್ಯವಾಗಿ ರಾಜಕೀಯ ಪ್ರಜ್ಞೆ ಮೂಡಿರುವದು ತಿಳಿದುಬರುತ್ತದೆ. ಏಕೆಂದರೆ ಕೇವಲ ಕಾಂಗ್ರೆಸ್ ಪಕ್ಷವಾಗಲೀ ಅಥವಾ ಜನತಾ ದಳವಾಗಲಿ ಸ್ಥಿರ ಸರಕಾರ ನೀಡುತ್ತವೆ ಎಂಬುವದು ಈಗ ಕಣ್ಮರೆಯಾಗಿದ್ದು, ಎಲ್ಲಾ ರಾಜಕೀಯ ಪಕ್ಷಗಳ ಅಧಿಕಾರ ಮತ್ತು ಸರಕಾರದ ನೀತಿ ನಿಯಮಗಳನ್ನು ನೋಡಬೇಕೆಂಬುವ ಕುತುಹಲ ಜನರಲ್ಲಿ ಮೂಡಿರುವದು ಕಂಡು ಬರುತ್ತದೆ.

**Voters are wiser than leaders** ಎನ್ನುವಂತೆ ಮತದಾರರು ಬುದ್ಧಿವಂತರು, ಏಕೆಂದರೆ ಅವರಲ್ಲಿ ಮತದ ಮೌಲ್ಯದ ಬಗ್ಗೆ ಅರಿವು ಇರುವದು ತಿಳಿದುಬಂದಿದೆ. ಸ್ವಾತಂತ್ರ ಪಕ್ಷ ಮತ್ತು ವ್ಯಕ್ತಿ ಸ್ವಾತಂತ್ರ್ಯ ಇತ್ಯಾದಿಗಳ ಪರಿಕಲ್ಪನೆ ಇಂದು ಅನಕ್ಷರಸ್ಥರಿಗೆ ಇದ್ದು, ಮತದ ಮೌಲ್ಯವನ್ನು ಅರಿತವನಾಗಿ, ಅದರ ರಹಸ್ಯವನ್ನು ಕಾಪಾಡಲು ಶ್ರಮಿಸು ತ್ತಿರುವುದು ಈ ಸಮೀಕ್ಷೆಯಿಂದ ತಿಳಿದು ಬಂದಿದೆ.

## ೪.೯. ಗುಲಬರ್ಗಾ ಜಿಲ್ಲೆಯ ೨೮೩ ಬುಡಕಟ್ಟು ಗ್ರಾಮ ಪಂಚಾಯತಿ ಸದಸ್ಯರ ಬೇಡಗುಗಳು

"Man born free but Everywhere he is in Chain" ಎಂಬ ರೂಸೋರ ಹೇಳಿಕೆಯಂತೆ ಪ್ರಾಚೀನ ಕಾಲದಿಂದಲೂ ಮಾನವರು ಗೊತ್ತಿದ್ದು ಅಥವಾ ಗೊತ್ತಿಲ್ಲದೆ ಕೆಲವೊಂದು ರೂಢಿ ಮತ್ತು ಸಂಪ್ರದಾಯಗಳನ್ನು ತಮ್ಮ ಜೀವನದ ಜೊತೆಗೆ ಅನುಸರಿಸಿ ಕೊಸೊಂಡು ಬಂದಿದ್ದಾರೆ. ಈ ಕಟ್ಟಳೆಗಳನ್ನು ಬೇಡಗು ಅಥವಾ ಬಳಿ ಎಂದು ಕರೆಯುತ್ತವೆ. ಈ ಬೇಡಗುಗಳು ವಿಶೇಷವಾಗಿ ಬುಡಕಟ್ಟಿನವರಲ್ಲಿ ಕಂಡುಬರುತ್ತವೆ. ಆದಿವಾಸಿ ಸಮುದಾಯದ

ಸಾಮಾಜಿಕ ಅಥವಾ ಕೌಟುಂಬಿಕ ಬದುಕಿನೊಂದಿಗೆ ಈ ಬೆಡಗುಗಳು ಜೀವನಾಡಿಯಾಗಿದೆ. ಈ ಎಲ್ಲಾ ಬೆಡಗುಗಳು ಸಹಿತ ಮಾನವನೂ ರಾಜಕೀಯ ಜೀವನಕ್ಕೆ ಪೂರಕವಾಗಿವೆ ಎಂಬುವದನ್ನು ಕುರಿತು ಅರಿಯುವದು ಪ್ರಸ್ತುತ ಸಂಶೋಧನೆಯ ಗುರಿಗಳಲ್ಲೊಂದಾಗಿದೆ.

ಸಂಶೋಧನೆಯ ಅಂಗವಾಗಿ ಜಿಲ್ಲೆಯಾದಂತ ಹತ್ತು ತಾಲೂಕಿನಲ್ಲಿ ವಿವಿಧ ಗ್ರಾಮ ಪಂಚಾಯತಿ ೨೮೩ ಬುಡಕಟ್ಟು ಸದಸ್ಯರನ್ನು ಸಂದರ್ಶಿಸಿ ಅವರ ಆರ್ಥಿಕ, ಸಾಮಾಜಿಕ, ರಾಜಕೀಯ ಸ್ಥಿತಿಗತಿಯನ್ನು ಅರಿಯುವದರ ಜೊತೆಗೆ ಆ ಸಮುದಾಯಗಳ ವಿವಿಧ ಸಂಪ್ರದಾಯಗಳು ಮತ್ತು ಜೀವನ ಕ್ರಮವನ್ನು ಕುರಿತು ಸಂಗ್ರಹಿಸಿದ ಮಾಹಿತಿ ಹಾಗೂ ಬೆಡಗುಗಳು ಮತ್ತು ಗೋತ್ರಗಳನ್ನು ಸಹಿತ ಸಂಗ್ರಹಿಸಲಾಯಿತು ೧೯೯೧ರಲ್ಲಿ ಜಿಲ್ಲೆಯ ವ್ಯಾಪ್ತಿಯಲ್ಲಿ ೨೦ ಬುಡಕಟ್ಟುಗಳು ಇವೆ ಎಂದು ವರದಿಯಾಗಿದ್ದು ಒಟ್ಟು ಜನಸಂಖ್ಯೆ ೧,೦೯,೩೬೫ ಇದ್ದು ಆದಿವಾಸಿಗಳಲ್ಲಿ ರಾಜಕೀಯ ಮೀಸಲಾತಿಯನ್ನು ಬಹುಮಟ್ಟಿಗೆ ಸದುಪಯೋಗ ಪಡೆದುಕೊಂಡಿರುವ ಬುಡಕಟ್ಟು ಸಮುದಾಯಗಳು ಕೇವಲ ೨ ಅಥವಾ ೩ ಮಾತ್ರ ಇನ್ನುಳಿದ ಬುಡಟ್ಟುಗಳು ಹಲವಾರು ಕಾರಣಗಳಿಂದ ರಾಜಕೀಯದಿಂದ ದೂರ ಉಳಿದಿವೆ.

ನಾಯಕ ಅಥವಾ ಬೇಡ ಸಮುದಾಯ ಮಾತ್ರ ಸಾಮಾನ್ಯ ಮತ್ತು ಮೀಸಲಾತಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸಿಕೊಂಡಿರುವದು ಪ್ರಸ್ತುತ ಸಮೀಕ್ಷೆಯಿಂದ ತಿಳಿದಿದೆ. ಈ ಸಮುದಾಯದಲ್ಲಿ ಸುಮಾರು ೨೫೦ ಬೆಡಗುಗಳಿದ್ದು ಅದರಲ್ಲಿ ಕೇವಲ ೧೪ ಬೆಡಗುಗಳು ಮಾತ್ರ ಈ ಜಿಲ್ಲೆಯ ಬುಡಕಟ್ಟುಗಳಲ್ಲಿ ಕಂಡುಬಂದಿದ್ದು ರಾಜಕೀಯದಲ್ಲಿ ಸಹಿತ ಈ ಬೆಡಗುಗಳನ್ನು ಹೊಂದಿರುವ ಸದಸ್ಯರು ಕ್ರಿಯಾಶೀಲರಾಗಿದ್ದಾರೆ.

ಈ ನಾಯಕ ಸಮುದಾಯ ಜಿಲ್ಲೆಯ ಎಲ್ಲಾ ಕಡೆಗೆ ಸಮಾನಾಗಿ ಹಂಚಿಕೆಯಾಗಿಲ್ಲ. ಗುಡ್ಡ ಗಾಡಿನಿಂದ ಕೂಡಿರುವ ಪ್ರದೇಶಗಳಾದ ಸುರುಪುರು, ಶಹಾಪೂರ, ಮತ್ತು ಯಾದಗಿರಿ ತಾಲೂಕಿನಲ್ಲಿ ಹೆಚ್ಚಿನ ಜನ ಸಂಖ್ಯೆ ಇದ್ದು, ಉಳಿದ ಕಡೆ ಬೇರೆ ಕಡೆಯಿಂದ ವಲಸೆ ಬಂದಿರುವ ಬುಡಕಟ್ಟು ಜನರಿದ್ದುದು ಪ್ರಸ್ತುತ ಸಮೀಕ್ಷೆಯಿಂದ ಮನವರಿಕೆಯಾಗಿದೆ. ಜಿಲ್ಲೆಯಲ್ಲಿ ಗುಜಲವರು, ಮಿನುಗುಲವರು, ಮಂಡ್ಲವರು, ಮುಮ್ಮಡ್ಲವರು ಮತ್ತು ಜಂಪಲವರು ಎನ್ನುವ

ಬೆಡಗಿನ ಜನರು ಹೆಚ್ಚಾಗಿ ಕಂಡುಬರುತ್ತಿದ್ದು ರಾಜಕೀಯದಲ್ಲಿ ಸಹಿತ ಇವರ ಪಾತ್ರ ಹೆಚ್ಚಿನದಾಗಿದೆ. ಇನ್ನು ಸುರಪುರು ಮತ್ತು ಶಹಾಪೂರ ತಾಲೂಕಿನ ಕೆಲವು ಕಡೆಗಳಲ್ಲಿ ಗೋಸಾಲವರು ಎಂಬ ಬೆಡಗಿನ ಜನರು ಹೆಚ್ಚಾಗಿದ್ದು, ಗೋಪಾಲಸ್ವಾಮಿ ಮತ್ತು ವೆಂಕಟರಮಣ ಇವರ ಮನೆ ದೇವರು. ಈ ಬೆಡಗಿನವರು ದೊರೆಗಳಾಗಿದ್ದು ಪ್ರಾಂತ್ಯವನ್ನು ರಚಿಸಿ ಆಳಿ ಹೋಗಿದ್ದಾರೆ ಎಂದು ಹೇಳಿಕೊಳ್ಳುತ್ತಾರೆ. ಇದರಿಂದ ಗೋಸಾಲ ಬೆಡಗಿನ ಜನರು ಕೆಲವು ಭಾಗದಲ್ಲಿ ಮೀಸಲಾತಿ ಮತ್ತು ಸಾಮಾನ್ಯ ಕ್ಷೇತ್ರದಿಂದ ಪಂಚಾಯಿತಿಗಳಿಗೆ ಆಯ್ಕೆಯಾಗಿ ಸ್ಥಳೀಯ ರಾಜಕೀಯದಲ್ಲಿ ಪ್ರಧಾನ ಪಾತ್ರವನ್ನು ನಿರ್ವಹಿಸುತ್ತಾರೆ.

ಈ ಗೋಸಾಲ ವಂಶದ ಬೆಡಗಿನವರು ರಾಜಕೀಯ, ಅಧಿಕಾರ ಮತ್ತು ಆಡಳಿತ ಇವು ಅವರ ಜೀವನದಲ್ಲಿ ಹುಟ್ಟಿನಿಂದ ಕರಗತವಾಗಿ ಬಂದಿವೆ ಎಂದು ಹೇಳಿಕೆ ನೀಡುತ್ತಾರೆ. ಇನ್ನು ಅಲ್ಪಸ್ವಲ್ಪ ಸದಸ್ಯರು ಮಾತ್ರ ಜಿಲ್ಲೆಯ ಗಡಿ ಭಾಗದ ಗ್ರಾಮಗಳಿಗೆ ಬೇರೆ ರಾಜ್ಯ ಅಥವಾ ಜಿಲ್ಲೆಯಿಂದ ವಲಸೆ ಬಂದವರು ಎಂಬುವದು ಈ ಸಮೀಕ್ಷೆಯಿಂದ ತಿಳಿದುಬಂದ ವಿಷಯವಾಗಿದೆ. ಈ ಬುಡಕಟ್ಟುಗಳು ಅದೇ ಬೆಡಗಿನ ವೈವಾಹಿಕ ಸಂಬಂಧವನ್ನು ಹೊಂದದೆ ಬೇರೆ ಬೆಡಗಿನ ಜೊತೆಗೆ ವೈವಾಹಿಕ ಸಂಬಂಧವನ್ನು ಹೊಂದಿರುತ್ತಾರೆ. ಇನ್ನುಳಿದ ಕೆಲವು ಸದಸ್ಯರು ಮೇದ ಸಮುದಾಯಕ್ಕೆ ಸೇರಿದವರಾಗಿದ್ದು, ಕನಕಪ್ಪ ಮತ್ತು ಸಾತೇವರು ಎಂಬ ಬೆಡಗಿನವರಾಗಿದ್ದು ಇವರ ರಾಜಕೀಯ ಚಟುವಟಿಕೆಗಳು ಅಷ್ಟೊಂದು ಕ್ರಿಯಾಶೀಲದಾಗಿರಲಿಲ್ಲ ಎಂಬುವದು ಅವರ ಆಸಕ್ತಿ ಮತ್ತು ರಾಜಕೀಯ ಪರಿಕಲ್ಪನೆಯಿಂದ ಕಂಡುಕೊಳ್ಳಲಾಗಿದೆ.

## ೪.೧೦. ಬುಡಕಟ್ಟು ಸಮುದಾಯದ ಆರ್ಥಿಕ ಸ್ಥಿತಿ-ಗತಿ ಕ್ಷೇತ್ರ ಕಾರ್ಯದ ಸಮಗ್ರ ಮಾಹಿತಿಯ ವಿವರಣೆ

"Economy Determines Politics" ಆರ್ಥಿಕತೆ ರಾಜಕೀಯವನ್ನು ನಿರ್ಧರಿಸುತ್ತದೆ ಎಂಬ ಮಾತಿನಂತೆ ಗುಲ್ಬರ್ಗಾ ಜಿಲ್ಲೆಯ ಬುಡಕಟ್ಟು ರಾಜಕೀಯ ಅಧ್ಯಯನ, ಈ ವಿಷಯಕ್ಕೆ ಸಂಬಂಧಿಸಿದ ಕ್ಷೇತ್ರ ಕಾರ್ಯವನ್ನು ಕೈಗೊಂಡು ಜಿಲ್ಲೆಯ ಹತ್ತು ತಾಲೂಕಿನಲ್ಲಿ ೨೪೩ ಬುಡಕಟ್ಟು ಗ್ರಾಮ ಪಂಚಾಯಿತಿ ಸದಸ್ಯರಿಗೆ ಪ್ರತ್ಯಕ್ಷವಾಗಿ ಭೇಟಿಯಾಗಿ ಸಂದರ್ಶಿಸಿ ಸಂಗ್ರಹಿಸಿದ ಮಾಹಿತಿಯನ್ನು ಪಟ್ಟಿಯ ಮೂಲಕ ಹಾಗೂ ವಿವರಣಾತ್ಮಕವಾಗಿ ವಿವರಿಸಲಾಗಿದೆ.

ಬುಡಕಟ್ಟು ಸಮುದಾಯದ ಆರ್ಥಿಕ ಜೀವನ ಮತ್ತು ಅವರ ಜೀವನಕ್ಕೆ ಮೂಲಾಧಾರವಾದ ವಿವಿಧ ಸಂಪತ್ತಿನ ಆಧಾರಗಳನ್ನು ಹಾಗೂ ಅವರ ಆರ್ಥಿ ಕಭದ್ರತೆ ರಾಜಕೀಯ ಬದುಕಿನ ಬುನಾದಿಗೆ ಹೇಗೆ ಕಾರಣವಾಯಿತೆಂಬುದನ್ನು ವಿವರಿಸುವ ಕ್ಷೇತ್ರಕಾರ್ಯದ ಸಮಗ್ರ ಮಾಹಿತಿಯನ್ನು ವಿವರಿಸಲಾಗಿದೆ.(ಕೋಷ್ಟಕ ೪.೭,೪.೮, ೪.೯ ನೋಡಿ)

**ಪಶು ಸಂಗೋಪನೆ**

೧. "ಕೃಷಿಯು ಬುಡಕಟ್ಟು ಸಮುದಾಯದ ಜೀವಾಳ" ಎಂಬಂತೆ ಬುಡಕಟ್ಟು ಸಮುದಾಯದ ಆರ್ಥಿಕ ಬೆನ್ನೆಲುಬು ಕೃಷಿ ಮತ್ತು ಪ್ರಾಣಿ ಸಾಕಾಣಿಕೆಯೆಂಬುದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಆದರೆ ಕ್ಷೇತ್ರ ಕಾರ್ಯದಲ್ಲಿ ೨೮೩ ಕುಟುಂಬಗಳ ಆರ್ಥಿಕ ಸ್ಥಿತಿ-ಗತಿಯನ್ನು ಕುರಿತು ಸಮೀಕ್ಷೆ ಮಾಡಿದಾಗ ಅಧ್ಯಯನ ಮಾಡಿದಾಗ ಭೂಮಿ ಸಾಗುವಳಿಗೋಸ್ಕರ ಹೊಂದಿರುವ ಎತ್ತುಗಳ ಸಂಖ್ಯೆ ೫೮೬ ಎಂದರೆ ಶೇಕಡಾ ೭೫ ಕುಟುಂಬಗಳು ಎತ್ತುಗಳನ್ನು ಹೊಂದಿದ್ದು ವ್ಯವಸಾಯವನ್ನು ಮುಖ್ಯ ಉದ್ಯೋಗವಾಗಿ ಮಾಡಿಕೊಂಡಿವೆ. ಉಳಿದ ಕುಟುಂಬಗಳು ಎತ್ತುಗಳನ್ನು ಹೊಂದಿಲ್ಲದಿರುವುದಕ್ಕೆ ಹತ್ತು ಹಲವಾರು ಕಾರಣಗಳಿವೆ. ಕೆಲವು ಕುಟುಂಬಗಳು ಭೂರಹಿತವಾಗಿವೆ, ಮತ್ತೆ ಕೆಲವರು ಆರ್ಥಿಕವಾಗಿ ಎತ್ತುಗಳನ್ನು ಹೊಂದಲು ಅಶಕ್ತರಾಗಿದ್ದಾರೆ. ಮತ್ತೆ ಕೆಲವು ಕುಟುಂಬಗಳು ಬ್ಯಾಂಕ್ ಸಾಲದ ಮುಖಾಂತರ ಎತ್ತುಗಳನ್ನು ಪಡೆದು ಕುಟುಂಬದ ಅಡಚಣೆಗಾಗಿ ಎತ್ತುಗಳನ್ನೇ ಮಾರಿಕೊಂಡ ಉದಾಹರಣೆಗಳು ಇವೆ. ಬುಡಕಟ್ಟು ಬಾಂಧವರ ಇನ್ನಿತರ ಆರ್ಥಿಕ ಮೂಲಗಳೆಂದರೆ ಎಮ್ಮೆ, ಆಕಳು, ಕುರಿ, ಮೇಕೆ ಹಾಗೂ ಕೋಳಿ ಮುಂತಾದ ಪ್ರಾಣಿ ಸಾಕಾಣಿಕೆಯು ಬುಡಕಟ್ಟು ಸಮುದಾಯದ ಬದುಕಿನೊಂದಿಗೆ ಬೆಸೆದುಕೊಂಡಿವೆ. ಈ ಜನರು ಕೃಷಿಯನ್ನು ಅರಿಯುವುದುಕ್ಕಿಂತ ಮುಂಚೆ ಪ್ರಾಣಿಗಳನ್ನು ಸಾಕುವುದು ಅವರ ಜೀವನದ ಅವಿಭಾಜ್ಯ ಅಂಗವಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ಬುಡಕಟ್ಟು ಸಮುದಾಯದಲ್ಲಿ ಪ್ರಾಣಿ ಸಾಕಾಣಿಕೆಯಂತಹ ಉದ್ಯೋಗ ಕ್ಷಿಣಿಸುತ್ತಿರುವುದು ಕಂಡುಬರುತ್ತಿದೆ. ಅಷ್ಟೇ ಅಲ್ಲದೆ ಈಗಿನ ದಿನಗಳಲ್ಲಿ ಪ್ರಾಣಿಗಳನ್ನು ಸಾಕುವುದರಲ್ಲಿ ಆಸಕ್ತಿಯನ್ನು ಕಳೆದು ಕೊಂಡಿರುವುದರ ಪರಿಣಾಮವಾಗಿ ಗಂಭೀರ ಸಮಸ್ಯೆಯನ್ನು ಎದುರಿಸುತ್ತಿದಾರೆ. ಹಾಗೂ ಹಲವಾರು ಬುಡಕಟ್ಟು

## ಕೋಷ್ಟಕ ೪.೭

## ಗುಲಬರ್ಗಾ ಜಿಲ್ಲೆಯ ೨೮೩ ಬುಡಕಟ್ಟು ಗ್ರಾಮ ಪಂಚಾಯತ ಸದಸ್ಯರ ಹೊಂದಿರು ಪಶುಸಂಪತ್ತನ್ನು ತೋರಿಸುವ ಪಟ್ಟಿ

| ಕ್ರ. ಸಂ. | ತಾಲೂಕ ಹೆಸರು | ಕುಟಂಬಗಳ ಸಂಖ್ಯೆ | ಎತ್ತು | ಎಮ್ಮೆ | ಆಕಳು | ಕುರಿ | ಮೇಕೆ | ಕೋಳಿ | ಒಟ್ಟು |
|---|---|---|---|---|---|---|---|---|---|
| ೦೧ | ಅಫಜಲಪುರ | ೦೬ | ೧೨ | ೩೦ | ೩೪ | -- | ೨೦ | ೨೦ | ೧೧೬ |
| ೦೨ | ಆಳಂದ | ೦೪ | ೦೬ | ೦೬ | ೧೮ | -- | ೪೫ | ೨೦ | ೯೫ |
| ೦೩ | ಚಿಂಚೋಳಿ | ೨೨ | ೨೨ | ೧೮ | ೩೧ | -- | ೭೦ | ೭೭ | ೨೧೮ |
| ೦೪ | ಚಿತ್ತಾಪುರ | ೧೦ | ೧೦ | ೧೧ | ೦೯ | -- | ೬೫ | ೫೫ | ೧೫೦ |
| ೦೫ | ಗುಲಬರ್ಗಾ | ೧೨ | ೧೮ | ೧೩ | ೩೧ | -- | ೧೦ | ೧೦ | ೮೨ |
| ೦೬ | ಜೇವರ್ಗಿ | ೨೫ | ೨೬ | ೫೧ | ೭೪ | -- | ೮೦ | ೧೫೧ | ೩೮೨ |
| ೦೭ | ಸೇಡಂ | ೧೫ | ೨೪ | ೧೧ | ೩೫ | ೦೩ | ೮೨ | ೮೫ | ೨೪೦ |
| ೦೮ | ಶಹಾಪುರ | ೫೩ | ೧೮೮ | ೯೩ | ೨೦೧ | ೪೨ | ೧೦೨ | ೧೪೨ | ೭೬೮ |
| ೦೯ | ಸುರಪುರ | ೮೭ | ೨೧೦ | ೨೫೫ | ೩೬೪ | ೨೭೦ | ೨೧೮ | ೫೨೯ | ೧೮೪೬ |
| ೧೦ | ಯಾದಗಿರಿ | ೪೯ | ೯೪ | ೧೧೮ | ೧೫೨ | ೮೦ | ೧೦೭ | ೬೦ | ೬೧೧ |
| | ಒಟ್ಟು | ೨೮೩ | ೬೧೦ | ೬೦೬ | ೯೪೯ | ೩೯೫ | ೭೯೯ | ೧೧೪೯ | ೪೫೦೮ |

## ಕೋಷ್ಟಕ ೪.೮

### ಗುಲಬರ್ಗಾ ಜಿಲ್ಲೆಯ ೨೮೩ ಬುಡಕಟ್ಟು ಗ್ರಾಮ ಪಂಚಾಯತಿಯ ಮನೆಯ ಮಾದರಿಯನ್ನು ಸುಚಿಸುವ ಪಟ್ಟಿ

| ಕ್ರ. ಸಂ. | ತಾಲೂಕ ಹೆಸರು | ಕುಟುಂಬಗಳ ಸಂಖ್ಯೆ | ಗುಢಾರ | ಗುಡಿಸಲು | ಟಿನ್ ಮನೆ | ಧಾಬಾ ಮಳಿಗೆ | ಆರ್.ಸಿ.ಸಿ. | ಹಂಚಿನ ಮನೆ | ಪಡಿತರ ಚೀಟಿ | ಮನೆ | | ನಿವೇಶನ | | ವಿದ್ಯುತ್ | |
|---|---|---|---|---|---|---|---|---|---|---|---|---|---|---|---|
| | | | | | | | | | | ಸ್ವಂತ | ಸರಕಾರಿ | ಸ್ವಂತ | ಸರಕಾರಿ | ಸ್ವಂತ | ಸರಕಾರಿ |
| ೦೧ | ಅಫಜಲಪುರ | ೦೬ | -- | -- | ೦೧ | ೦೫ | ೦೨ | -- | ೦೩ | ೦೩ | ೦೩ | ೦೨ | ೦೪ | ೦೩ | ೦೩ |
| ೦೨ | ಆಳಂದ | ೦೪ | -- | -- | ೦೧ | ೦೪ | -- | -- | ೦೩ | ೦೪ | ೦೦ | ೦೪ | -- | -- | ೦೪ |
| ೦೩ | ಚಿಂಚೋಳಿ | ೨೨ | -- | ೦೭ | -- | ೧೩ | ೦೨ | -- | ೨೦ | ೨೦ | ೦೨ | ೧೮ | ೦೪ | ೦೨ | ೧೮ |
| ೦೪ | ಚಿತ್ತಾಪುರ | ೧೦ | -- | ೦೧ | ೦೬ | ೦೧ | ೦೨ | -- | ೦೯ | ೦೪ | ೦೬ | ೦೩ | ೦೭ | ೦೨ | ೦೭ |
| ೦೫ | ಗುಲಬರ್ಗಾ | ೧೨ | -- | -- | ೦೪ | ೦೮ | -- | -- | ೧೨ | ೦೮ | ೦೪ | ೦೮ | ೦೪ | -- | ೧೨ |
| ೦೬ | ಜೇವರ್ಗಿ | ೨೫ | -- | ೦೫ | ೦೨ | ೧೩ | ೦೬ | ೦೩ | ೨೧ | ೧೮ | ೦೬ | ೧೮ | ೦೭ | ೦೧ | ೨೪ |
| ೦೭ | ಸೇಡಂ | ೧೫ | -- | ೦೨ | ೦೬ | ೦೯ | -- | ೦೨ | ೧೧ | ೧೦ | ೦೫ | ೧೦ | ೦೫ | ೦೧ | ೧೪ |
| ೦೮ | ಶಹಾಪುರ | ೫೩ | ೦೨ | ೦೨ | ೧೦ | ೩೨ | ೦೮ | ೦೩ | ೫೦ | ೪೨ | ೧೦ | ೪೨ | ೧೧ | ೧೭ | ೪೨ |
| ೦೯ | ಸುರಪುರ | ೮೭ | ೦೧ | ೦೧ | ೦೮ | ೭೧ | ೨೨ | -- | ೮೩ | ೭೬ | ೦೩ | ೭೬ | ೦೭ | ೩೫ | ೪೮ |
| ೧೦ | ಯಾದಗಿರಿ | ೪೯ | -- | ೦೨ | ೦೯ | ೩೩ | ೦೪ | ೧೧ | ೪೪ | ೩೬ | ೧೦ | ೩೬ | ೧೩ | ೧೩ | ೩೫ |
| | ಒಟ್ಟು | ೨೮೩ | ೦೩ | ೨೦ | ೪೭ | ೧೮೯ | ೪೬ | ೧೯ | ೨೫೬ | ೨೨೭ | ೫೦ | ೨೧೭ | ೬೨ | ೭೪ | ೨೦೭ |

## ಕೋಷ್ಟಕ ೪.೯

## ಗುಲಬರ್ಗಾ ಜಿಲ್ಲೆಯ ೨೮೩ ಬುಡಕಟ್ಟು ಗ್ರಾಮ ಪಂಚಾಯತಿ ಸದಸ್ಯರು ಹೊಂದಿರುವ ಮನೋರಂಜನೆಯ ಯಂತ್ರಗಳು

| ಕ್ರ.ಸಂ | ತಾಲೂಕು ಹೆಸರು | ಕುಟುಂಬಗಳ ಸಂಖ್ಯೆ | ಬಂಡಿ | ಸೈಕಲ್ | ಸ್ಕೂಟರ್ | ಆಟೋ | ಟ್ರಕ್ಟರ್ | ರೆಡಿಯೋ | ಟೇಪ | ಟಿ.ವಿ. | ಫೋನ್ | ಸೈಕಲ್ - ಮೋಟರ್ |
|---|---|---|---|---|---|---|---|---|---|---|---|---|
| ೦೧ | ಅಫಜಲಪುರ | ೦೬ | ೦೩ | ೦೧ | ೦೨ | -- | ೦೧ | ೦೪ | ೦೧ | ೦೨ | -- | -- |
| ೦೨ | ಆಳಂದ | ೦೪ | ೦೩ | -- | -- | -- | -- | ೦೨ | -- | -- | -- | -- |
| ೦೩ | ಚಿಂಚೋಳಿ | ೨೨ | ೦೩ | ೦೬ | ೦೩ | -- | ೦೧ | ೧೧ | ೦೬ | ೦೪ | -- | ೦೧ |
| ೦೪ | ಚಿತ್ತಾಪುರ | ೧೦ | ೦೨ | ೦೨ | ೦೩ | -- | -- | ೦೪ | ೦೩ | ೦೨ | -- | -- |
| ೦೫ | ಗುಲಬರ್ಗಾ | ೧೨ | ೦೩ | ೦೨ | ೦೧ | -- | -- | ೦೫ | ೦೩ | ೦೧ | -- | -- |
| ೦೬ | ಜೇವರ್ಗಿ | ೨೫ | ೦೫ | ೦೬ | ೦೭ | ೦೧ | ೦೨ | ೧೮ | ೧೦ | ೦೯ | ೦೨ | -- |
| ೦೭ | ಸೇಡಂ | ೧೫ | ೦೧ | ೦೧ | ೦೧ | -- | -- | ೦೪ | ೦೩ | -- | -- | -- |
| ೦೮ | ಶಹಾಪುರ | ೫೩ | ೨೧ | ೦೨ | ೦೫ | ೦೧ | ೦೨ | ೨೫ | ೧೦ | ೦೬ | ೦೧ | ೦೩ |
| ೦೯ | ಸುರಪುರ | ೮೭ | ೩೪ | ೦೯ | ೧೦ | -- | ೦೫ | ೪೫ | ೩೯ | ೨೪ | ೦೩ | ೦೯ |
| ೧೦ | ಯಾದಗಿರಿ | ೪೯ | ೨೧ | ೦೪ | ೦೫ | -- | ೦೧ | ೦೫ | ೧೫ | ೧೧ | -- | ೦೧ |
| ಒಟ್ಟು | | ೨೮೩ | ೯೬ | ೩೩ | ೩೮ | ೦೨ | ೧೨ | ೧೨೩ | ೯೦ | ೫೯ | ೦೬ | ೧೪ |

ಕುಟುಂಬಗಳು ಪ್ರಾಣಿಗಳನ್ನು ಸಾಕದೆ ಕೂಲಿಗೆ ಮೊರೆ ಹೋಗುತ್ತಿದ್ದಾರೆ. ಈ ಕುರಿತಾಗಿ ಮಾಹಿತಿ ಸಂಗ್ರಹಿಸಲು ಕ್ಷೇತ್ರ ಕಾರ್ಯದಲ್ಲಿ ಹಲವಾರು ಪ್ರಶ್ನೆಗಳನ್ನು ಕೇಳಲಾಗಿದ್ದು ನೀಡಿದ ಪ್ರತಿಕ್ರಿಯನ್ನು ಕೆಳಗಿನಂತೆ ಸಂಗ್ರಹಿಸಲಾಗಿದೆ.

**ಪಶುಸಂಗೋಪನೆಗೆ ಅಡ್ಡಿಯಾದ ಸಮಸ್ಯೆಗಳು**

೧. ಸರಕಾರದಿಂದ ಭೂರಹಿತರಿಗೆ ಭೂಮಿಯ ವಿತರಣೆ.

೨. ಪಶುಸಂಗೋಪನೆಯ ಅಭಿವೃದ್ಧಿಗೆ ಅಡ್ಡಿಯಾಗಿರುವ ನೈಸರ್ಗಿಕ ರೋಗಗಳು.

೩. ಪಶು ಸಂಗೋಪನೆಗೆ ಸುಲಭವಾಗಿ ದೊರೆಯದಿರುವ ಸರಕಾರದ ಸೌಲಭ್ಯಗಳ ಕೊರತೆ.

೪. ಪ್ರಾಣಿಗಳ ಮಾರಾಟಕ್ಕೆ ಸ್ಥಳೀಯ ಮಾರುಕಟ್ಟೆಯ ಕೊರತೆ ಮತ್ತು ಬೇಡಿಕೆ ಇಲ್ಲದಿರುವುದು.

೫. ವೇಗವಾಗಿ ಬೆಳೆಯುತ್ತಿರುವ ನಗರಗಳ ಆಕರ್ಷಣೆ ಬುಡಕಟ್ಟು ಜನರ ಪ್ರಾಣಿ ಸಾಕಾಣಿಕೆಗೆ ಆಡ್ಡಿಯುಂಟುಮಾಡುತ್ತಿವೆ.

೬. ನೈಸರ್ಗಿಕ ಹವಾಮಾನದಲ್ಲಿ ವಿಪರೀತ ಏರು-ಪೇರು.

೭. ಉಚಿತ ಮತ್ತು ಸೂಕ್ತ ಔಷಧೋಪಚಾರ ಲಭ್ಯವಾಗದಿರುವುದು.

೮. ವಿಜ್ಞಾನ ಮತ್ತು ತಂತ್ರಜ್ಞಾನದ ತೀವ್ರ ಅಭಿವೃದ್ಧಿ.

೯. ಪ್ರಾಣಿ ಸಾಕಾಣಿಕೆಯಲ್ಲಿ ತಂತ್ರಜ್ಞಾನದ ಅಭಾವ.

೧೦. ಸರಕಾರ ಪಶುಸಂಗೋಪನೆಗೆ ಯಾವುದೇ ರೀತಿಯ ಯೋಜನೆ ಹಾಕಿಕೊಂಡು ಅದನ್ನು ಪರಿಣಾಮಕಾರಿಯಾಗಿ ಜಾರಿಗೆ ತರದಿರುವುದು. ಇತ್ಯಾದಿ.

ಹೀಗೆ ಹಲವಾರು ಕಾರಣಗಳಿಂದ ಬುಡಕಟ್ಟು ಸಮುದಾಯ ಪಶುಸಂಗೋಪನೆಯಲ್ಲಿ ಆಸಕ್ತಿ ಕಳೆದುಕೊಂಡು ಬಡತನ ರೇಖೆಯ ಕೆಳಗೆ ಜೀವಿಸುತ್ತಿರುವುದು ಕಂಡುಬರುತ್ತಿದೆ.

## ಬುಡಕಟ್ಟು ವಸತಿ ವ್ಯವಸ್ಥೆ

ಗುಲ್ಬರ್ಗಾ ಜಿಲ್ಲೆಯ ಬುಡಕಟ್ಟು ಸಮುದಾಯದ ವಸತಿ ವ್ಯವಸ್ಥೆಯ ಆಧಾರದ ಮೇಲೆ ಆ ಸಮುದಾಯದ ಆರ್ಥಿಕ ಸ್ಥಿತಿ-ಗತಿಯ ಸ್ಪಷ್ಟ ಚಿತ್ರವನ್ನು ತಿಳಿಯಬಹುದು. ೨೮೩ ಗ್ರಾಮ ಪಂಚಾಯಿತಿಯ ಸದಸ್ಯರ ವಸತಿಗಳನ್ನು ನೋಡಿದಾಗ ವಿವಿಧ ವಿನ್ಯಾಸವುಳ್ಳ ಮನೆಗಳ ಸ್ಪಷ್ಟ ಪರಿಚಯ ನಮಗಾಗುತ್ತದೆ. ಒಟ್ಟು ೨೮೩ ಸದಸ್ಯರು ಹೊಂದಿರುವ ಮನೆಗಳಲ್ಲಿ ೦೩ ಗುಡಾರಗಳು, ೨೦ ಗುಡಿಸಲುಗಳು, ೪೭ ಟಿನ್ ಮನೆಗಳು ಹಾಗೂ ೧೮೯ ಮಣ್ಣಿನ ಮಾಳಿಗೆಗಳು ಮತ್ತು ೪೬ ಆರ್.ಸಿ.ಸಿ. ಹಾಗೂ ೧೯ ಹಂಚಿನ ಮನೆಗಳು ಇರುವುದು ಪ್ರಸ್ತುತ ಸಮೀಕ್ಷೆಯಿಂದ ಕಂಡುಬಂದಿದೆ.

ಪ್ರಾಚೀನ ಕಾಲದಿಂದಲೂ ಕಾಡಿನಲ್ಲಿ ಗಿರಿ ಗುಹೆಗಳಲ್ಲಿ ವಾಸಿಸುವ ಬುಡಕಟ್ಟು ಸಮುದಾಯವು ಇಂದು ಗ್ರಾಮೀಣ ಬದುಕಿಗೆ ಮಾರುಹೋಗಿ, ಕಾಡನ್ನು ತೊರೆದು ನಾಡನ್ನು ಸೇರಿದ್ದಾರೆ. ವಾಸಿಸಲು ಒಂದು ಮನೆ ಇದ್ದರೆ ಸಾಕು ಎಂದು ಮೊದ ಮೊದಲು ಭಾವಿಸುತ್ತಿದ್ದ ಈ ಇಂದು ಆರ್.ಸಿ.ಸಿ. ಹಾಗೂ ಸಕಲ ಸೌಲಭ್ಯ ಭರಿತ, ಸುಸಜ್ಜಿತ ಮನೆಯನ್ನು ನಿರ್ಮಿಸಿಕೊಳ್ಳುವ ಆಕಾಂಕ್ಷೆ ಹೊಂದಿ ಆ ದಿಶೆಯಲ್ಲಿ ಮುಂದಾಗಿದ್ದಾರೆ.

ಬುಡಕಟ್ಟು ಸಮುದಾಯ ಹೊಂದಿರುವ ಮನೆಗಳು ಎಂದರೆ ಮಣ್ಣಿನ ಮಾಳಿಗೆಗಳು. ಈ ಮನೆಗಳು ಕಡಿಮೆ ಖರ್ಚಿನಿಂದ ತಯಾರಾಗುತ್ತವೆ. ಮಧ್ಯಮವರ್ಗದ ಕುಟುಂಬಗಳಿಗೆ ಅನುಕೂಲ ಸಿಂಧುವಾದ ಮತ್ತು ಸೂಕ್ತವಾದ ಮನೆಗಳಾಗಿರುತ್ತವೆ. ಕೇವಲ ಕೆಲವೇ ಕುಟುಂಬಗಳು ಮಾತ್ರ ಹೆಚ್ಚಿನ ವೆಚ್ಚದಾಯಕ ಮತ್ತು ನವೀನ ರೀತಿಯ ಮನೆಗಳನ್ನು ನಿರ್ಮಿಸಿ ಕೊಂಡಿದ್ದಾರೆ. ಒಟ್ಟಾರೆ ಮನೆಗಳ ವಿನ್ಯಾಸವನ್ನು ಅರಿಯುವುದರ ಮೂಲಕ ಬುಡಕಟ್ಟು ಸಮುದಾಯದ ಆರ್ಥಿಕ ಬದುಕು ತಕ್ಕ ಮಟ್ಟಿಗೆ ಉತ್ತಮವಾಗಿರುವುದು ಗೋಚರವಾಗುತ್ತದೆ.

## ಬುಡಕಟ್ಟು ಸಮುದಾಯ ಹೊಂದಿರುವ ಇತರ ಸೌಲಭ್ಯಗಳ

ಗುಲ್ಬರ್ಗಾ ಜಿಲ್ಲೆಯ ಬುಡಕಟ್ಟು ಜನರು ಸರಕಾರದಿಂದ ಪಡೆದುಕೊಂಡ ಸೌಲಭ್ಯಗಳನ್ನು ಸಮೀಕ್ಷಿಸಿದಾಗ ಇನ್ನೂ ಸಾಕಷ್ಟು ಸೌಲಭ್ಯಗಳ ಅವಶ್ಯಕತೆ ಇದೆ ಎಂಬುದು ತಿಳಿದುಬರುತ್ತದೆ.

**೧. ಸರಕಾರಿ ಮನೆ ಮತ್ತು ನಿವೇಶನ :** ೨೮೩ ಕುಟುಂಬಗಳನ್ನು ಪರಿವೀಕ್ಷಿಸಿದಾಗ ೨೨೭ ಕುಟುಂಬಗಳು ಸ್ವಂತ ಮನೆಯನ್ನು ಹೊಂದಿದ್ದು ಕಂಡುಬರುತ್ತದೆ ಉಳಿದ ೫೬ ಕುಟುಂಬಗಳು ಸರಕಾರದ ವಿವಿಧ ಯೋಜನೆಗಳ ಅಡಿಯಲ್ಲಿ ಮನೆಗಳನ್ನು ಹೊಂದಿದ್ದಾರೆ. ಇದರಿಂದ ತಿಳಿಯುವುದೇನೆಂದರೆ ಬುಡಕಟ್ಟು ಸಮುದಾಯವು ಮಣ್ಣಿನ ಮಾಳಿಗೆಯ ಮನೆಗಳನ್ನು ಹೆಚ್ಚಾಗಿ ಹೊಂದಿದ್ದು, ಆಶ್ರಯ ಯೋಜನೆಯಲ್ಲಿ ದೊರೆಯಬೇಕಾದ ಸಂಪೂರ್ಣ ಸೌಲಭ್ಯಗಳನ್ನು ಸದ್ವಿನಿಯೋಗ ಮಾಡಿಕೊಳ್ಳುವುದರಲ್ಲಿ ಈ ಸಮುದಾಯವು ಬಹಳಷ್ಟು ವಿಫಲವಾಗಿದ್ದು ಕಂಡುಬರುತ್ತದೆ. ಇದಕ್ಕೆ ಕಾರಣಗಳು ಹತ್ತು - ಹಲವು. ಈ ಸಮುದಾಯಕ್ಕೆ ಸರಕಾರಿ ಸೌಲಭ್ಯ ಪಡೆಯುವ ಸೂಕ್ತ ಪರಿಜ್ಞಾನ ಇರಲಿಕ್ಕಿಲ್ಲವೆನಿಸುತ್ತದೆ ಅಥವಾ ರಾಜಕೀಯ ಧುರೀಣರ ಒತ್ತಡ, ಅಧಿಕಾರಿಗಳ ಬೇಜವಾಬ್ದಾರಿಯಿಂದ ಈ ಸಮುದಾಯದ ಜನರಿಗೆ ಸೌಲಭ್ಯ ದೊರೆತಿರಲಿಕ್ಕಿಲ್ಲ ಎಂಬ ಸಂಶಯ ಬಲವಾಗಿ ಕಾಡುತ್ತದೆ.

**೨. ನಿವೇಶನ :** ಗ್ರಾಮೀಣ ಪ್ರದೇಶದಲ್ಲಿ ನಿವೇಶನಗಳಿಗೆ ಹೆಚ್ಚಿನ ಮಹತ್ವವಿದೆ. ಈ ನಿವೇಶನ ಗಳು ವ್ಯಕ್ತಿಯ ಅಂತಸ್ತಿನ ಸಂಕೇತವಾಗಿರುತ್ತವೆ. ಅದಕ್ಕಿಂತ ಹೆಚ್ಚಾಗಿ ನಿವೇಶನಗಳು ಹಳ್ಳಿಗಳಲ್ಲಿ ಬಲು ಉಪಯೋಗಕಾರಿ. ಹಾಗೂ ಸ್ಥಿರಾಸ್ತಿಯಾಗಿರುತ್ತವೆ. ಇಂತಹ ನಿವೇಶನಗಳನ್ನು ೨೧೭ ಕುಟುಂಬಗಳು ಹೊಂದಿದ್ದು, ಉಳಿದ ೬೨ ಕುಟುಂಬಗಳು ಸರಕಾರದಿಂದ ಪಡೆದುಕೊಂಡ ನಿವೇಶನಗಳ ಮಾಲೀಕತ್ವ ಹೊಂದಿದ್ದಾರೆ.

**೩. ವಿದ್ಯುತ್ :** ಇಂದಿನ ಸರಕಾರಗಳು ಕಲ್ಯಾಣ ರಾಷ್ಟ್ರದ ಗುರಿಯನ್ನು ಹೊಂದಿವೆ. ಪ್ರತಿಯೊಬ್ಬ ನಾಗರಿಕನ ಮೂಲಭೂತ ಬೇಡಿಕೆಗಳನ್ನು ಈಡೇರಿಸುವುದೆ ಸರಕಾರದ ಪ್ರಮುಖ ಗುರಿಯಾಗಿದೆ. ಈ ನಿಟ್ಟಿನಲ್ಲಿ ಪರಿಶಿಷ್ಟ ಪಂಗಡಗಳಿಗೆ ಸರಕಾರದಿಂದ ಉಚಿತ ವಿದ್ಯುತ್ ಸರಬರಾಜು ಮಾಡುವ ಭಾಗ್ಯಜ್ಯೋತಿ ಯೋಜನೆ ಜಾರಿಯಲ್ಲಿದೆ. ಈ ಯೋಜನೆಯಡಿಯಲ್ಲಿ ವಿದ್ಯುತ್ ಸರಬರಾಜು ಪಡೆದಿರುವ ಕುಟುಂಬಗಳು ೨೦೪. ಭಾಗ್ಯಜ್ಯೋತಿ ಯೋಜನೆಯ ಸಂಪೂರ್ಣ ಫಲವನ್ನು ಪಡೆದಿರುವುದು ಕಂಡುಬರುತ್ತಿದ್ದು ಉಳಿದ ೭೪ ಕುಟುಂಬಗಳು ಸ್ವಂತ ವಿದ್ಯುತ್‌ನ್ನು ಹೊಂದಿರುತ್ತವೆ.

**೪. ಎತ್ತು - ಬಂಡಿಗಳು :** ಎತ್ತು ಬಂಡಿಗಳು ಗ್ರಾಮೀಣ ಜೀವನದ ಪ್ರಮುಖ ಸಾರಿಗೆಯ ಮಾಧ್ಯಮ ಎನಿಸಿವೆ. ಎತ್ತು-ಬಂಡಿಗಳು ಬುಡಕಟ್ಟು ಜನರ ಪ್ರಮುಖ ಜೀವನಾಧಾರವಾಗಿದೆ. ಅವರ ಆರ್ಥಿಕ ಸ್ಥಿತಿ-ಗತಿಯನ್ನು ಎತ್ತು-ಬಂಡಿಗಳ ಆಧಾರದಿಂದ ತಿಳಿಯಬಹುದು. ಆದ್ದರಿಂದ ಅವರ ಜೀವನಮಟ್ಟವನ್ನು ಹೆಚ್ಚಿಸಲು ಮತ್ತು ನಗರ ಜೀವನಕ್ಕೆ ಮಾರುಹೋಗುದಂತೆ ಎಲ್ಲಾ ಪರಿಶಿಷ್ಟ ಪಂಗಡದ ರೈತರಿಗೆ ಎತ್ತು-ಬಂಡಿಗಳನ್ನು ಕೊಳ್ಳಲು ಬ್ಯಾಂಕ್ ಸಾಲ ನೀಡುವ ಕ್ರಮ ಜಾರಿಯಲ್ಲಿದೆ. ಈ ಯೋಜನೆಯ ಸೌಲಭ್ಯವನ್ನು ಪಡೆದುಕೊಂಡ ಕುಟುಂಬಗಳು ೯೬ ಮಾತ್ರಾ ಇನ್ನುಳಿದ ಕುಟುಂಬಗಳು ಸ್ವಂತ ಮೂಲದಿಂದ ಹೊಂದಿವೆ. ಇದನ್ನು ಗಮನಿಸಿದರೆ ಪರಿಶಿಷ್ಟ ಪಂಗಡದವರು ಪ್ರಸಕ್ತ ಯೋಜನೆಯ ಪೂರ್ತಿ ಲಾಭ ಪಡೆಯದೇ, ಸಂಕಷ್ಟ ಬದುಕು ಸಾಗಿಸುತ್ತಿರುವುದು ಕಂಡುಬರುತ್ತದೆ.

**೫. ವಾಹನಗಳ ಸೌಲಭ್ಯ :** ತಾಂತ್ರಿಕ ಪ್ರಗತಿಯ ಫಲವಾಗಿ ನಾಯಿಕೊಡೆಗಳಂತೆ ಬೆಳೆಯುತ್ತಿರುವ ದ್ವಿ ಚಕ್ರವಾಹನಗಳ ಸಂಖ್ಯೆ ಇಂದು ಪರಿಶಿಷ್ಟ ಸಮುದಾಯದ ಆರ್ಥಿಕ ಅಭಿವೃದ್ಧಿಯನ್ನು ತೋರಿಸುತ್ತದೆ. ೩೫ ಸೈಕಲ್, ೩೮ ಸ್ಕೂಟರ್, ೨ ಅಟೋರಿಕ್ಷಾ, ೧೨ ಟ್ರ್ಯಾಕ್ಟರ್ ಮತ್ತು ೧೪ ಸೈಕಲ್ ಮೋಟಾರು ಇತ್ಯಾದಿ ವಾಹನಗಳ ಸೌಲಭ್ಯಗಳನ್ನು ಈ ೨೮೫ ಕುಟುಂಬಗಳು ಹೊಂದಿವೆ. ಆದರೂ ಇನ್ನೂ ಸಾಕಷ್ಟು ಆರ್ಥಿಕ ಅಭಿವೃದ್ಧಿಯ ಅವಶ್ಯಕತೆ ಇದೆ ಎನಿಸುತ್ತದೆ.

**೬. ಮನೋರಂಜನೆಯ ಮಾಧ್ಯಮಗಳು :** " Modern life is life of recreation ಎಂಬಂತೆ ಆಧುನಿಕ ಜೀವನವು ಮನೋರಂಜನೆಯನ್ನು ಆಧರಿಸಿದೆ. ಪ್ರತಿಯೊಬ್ಬ ನಾಗರಿಕ ಒಂದಲ್ಲ ಒಂದು ರೀತಿಯ ಮನೋರಂಜನೆಗೆ ಮಾರುಹೋಗಿದ್ದಾನೆ ಮನೋರಂಜನೆರಹಿತ ಜೀವನ ಪ್ರಾಣಿ ಜೀವನಕ್ಕೆ ಸಮಾನ ಎಂಬಂತೆ ಶ್ರೀಮಂತನಾಗಲಿ ಅಥವಾ ಬಡವನಾಗಲಿ ನಗರದಲ್ಲಿರಲಿ ಅಥವಾ ಗ್ರಾಮೀಣ ಪ್ರದೇಶದಲ್ಲಿರಲಿ, ಎಲ್ಲೇ ಇದ್ದರೂ ಅವನಿಗೆ ಮತ್ತು ಅವನ ಅಂತಸ್ತಿಗೆ ತಕ್ಕಂತೆ ಮನೋರಂಜನೆ ಅವಶ್ಯಕತೆ ಇದೆ. ಅದೇ ರೀತಿಯಾಗಿ ಜಿಲ್ಲೆಯ ಬುಡಕಟ್ಟು ಸಮುದಾಯವು ಅವರ ದಿನನಿತ್ಯದ ಜೀವನಕ್ಕಾಗಿ ಹೊಂದಿರುವ ಮನೋರಂಜನೆಯ ಮಾಧ್ಯಮಗಳನ್ನು ತೋರಿಸುವ ಪಟ್ಟಿಯು ಸ್ಪಷ್ಟ ಚಿತ್ರಣವನ್ನು ನೀಡುತ್ತದೆ. ಈ ಸಮುದಾಯವು

ಆಧುನಿಕ ಅಥವಾ ವೈಜ್ಞಾನಿಕ ಬದುಕಿಗೆ ಮಾರುಹೋಗಿ ಹೊಸಹೊಸ ಮನೋರಂಜನೆಯ ಮಾಧ್ಯಮಗಳನ್ನು ಹೊಂದಿದ್ದಾರೆ. ಶೇಕಡಾ ೫೦ಕ್ಕಿಂತ ಹೆಚ್ಚಿನ ಕುಟುಂಬಗಳಲ್ಲಿ ಒಂದಲ್ಲ ಒಂದು ರೀತಿಯ ಮನೋರಂಜನೆಯ ಮಾಧ್ಯಮಗಳನ್ನು ಇಟ್ಟುಕೊಂಡಿದ್ದಾರೆ. ರೇಡಿಯೋ, ಟೇಪ್‌ರಿಕಾರ್ಡರ್ ಮತ್ತು ಬಣ್ಣದ ಟಿ.ವ್ಹಿ. ಇತ್ಯಾದಿ ಹೊಂದಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

ಮೇಲಿನ ಮನೋರಂಜನಾ ಮಾಧ್ಯಮಗಳಿಂದ ಬುಡಕಟ್ಟು ಸಮುದಾಯವು ಕೇವಲ ಮನೋರಂಜನೆಯನ್ನು ಪಡೆಯುವುದರ ಜೊತೆಗೆ ವೇಳೆಯನ್ನು ಹಾಳು ಮಾಡುವುದಿಲ್ಲ, ರಾಜಕೀಯ, ವೈಜ್ಞಾನಿಕ, ಸುದ್ದಿ ಸಮಾಚಾರಗಳನ್ನು ಕೇಳುತ್ತಾರೆ. ಅದೇ ರೀತಿ ಕೃಷಿ ಕಾರ್ಯಕ್ರಮಗಳನ್ನು ಮತ್ತು ರೈತರಿಗೆ ಸಲಹೆಗಳು, ಬೆಳೆಗಳಿಗೆ ತಗಲುವ ವಿವಿಧ ರೋಗರುಜಿನಗಳು ಮತ್ತು ಅವುಗಳಿಗೆ ಪರಿಹಾರೋಪಾಯಗಳು, ಪ್ರಾಣಿ ಮತ್ತು ಮನುಷ್ಯನಿಗೆ ಬರುವರೋಗಗಳು ಹಾಗೂ ಅವುಗಳಿಗೆ ಕಾರಣ ಮತ್ತು ಪರಿಹಾರ ಮಾರ್ಗವನ್ನು ಸಹ ಈ ಬುಡಕಟ್ಟು ಸಮುದಾಯವು ಕೇಳಿ ತಿಳಿದುಕೊಳ್ಳುತ್ತಾರೆಂಬ ಸಂಗತಿ ಸಮಾಧಾನ ತರುವಂತಹದ್ದಾಗಿದೆ.

### ಮೇದ ಸಮುದಾಯ

೧೯೮೧ ಮತ್ತು ೯೧ ಜನಗಣತಿಯ ವರದಿಯ ಪ್ರಕಾರ ಈ ಸಮುದಾಯವು ಅತ್ಯಂತ ಚಿಕ್ಕ ಸಮುದಾಯಗಳಲ್ಲಿ ಒಂದಾಗಿದೆ. ಇವರು ವಾಸವಾಗಿರುವುದು ಸಾಮಾನ್ಯವಾಗಿ ಪಟ್ಟಣ ಮತ್ತು ನಗರಗಳಲ್ಲಿ. ಇವರು ಈಗೀಗ ನೆಲೆ ನಿಂತು ಜೀವನ ಸಾಗಿಸುತ್ತಿದ್ದಾರೆ. ಇವರಿಗೆ ಯಾವುದೇ ರೀತಿಯ ಸ್ಥಿರಾಸ್ತಿಯನ್ನು ಹೊಂದಿರದೆ ಬುಟ್ಟಿ ನೇಯುವುದರ ಮೇಲೆ ಇವರ ಜೀವನ ಅವಲಂಬನೆಯಾಗಿದೆ. ಸರಕಾರ ಈಗ ಇವರಿಗೆ ಆಶ್ರಯ ಯೋಜನೆಯಡಿಯಲ್ಲಿ ಮನೆಗಳನ್ನು ಪಡೆದುಕೊಂಡಿದ್ದಾರೆ. ಸರಕಾರದಿಂದ ಈ ಸಮುದಾಯಕ್ಕೆ ಹೆಚ್ಚಿನ ಸೌಲಭ್ಯಗಳೇನು ದೊರೆತಿಲ್ಲ. ೧೯೯೩ರ ಚುನಾವಣೆಯಲ್ಲಿ ಜಿಲ್ಲೆಯಲ್ಲಿ ಕೇವಲ ೨ ಜನ ಸದಸ್ಯರು ಆಯ್ಕೆಯಾಗಿದ್ದಾರೆ. ಸೇಡಂ ತಾಲೂಕಿನ ಮುಧೋಳ ಗ್ರಾಮ ಪಂಚಾಯಿತಿ ಉಪಾಧ್ಯಕ್ಷ ಸ್ಥಾನವನ್ನು ಹೊಂದಿದ್ದು ಯಾವುದೇ ರೀತಿಯ ರಾಜಕೀಯ ಆಸಕ್ತಿಯನ್ನು ಹೊಂದಿರದಿರುವುದು ಅವರ ಆರ್ಥಿಕ

ಕೊರತೆಯನ್ನು ತೋರಿಸುತ್ತದೆ. ಈಗ ಇವರ ಬುಟ್ಟಿ ನೇಯುವುದು ಸಹಿತ ಹಲವಾರು ಅಡಚಣೆಗೆ ತುತ್ತಾಗಿದೆ. ಈಗ ಸುಲಭವಾಗಿ ಬಿದುರಿನ ಸಾಮಗ್ರಿ ದೊರೆಯದಿರುವುದು ಮತ್ತು ಆಧುನೀಕರಣದಿಂದ ಇವರ ಬುಟ್ಟಿಗಳಿಗೆ ಮಾರುಕಟ್ಟೆಯಲ್ಲಿ ಬೇಡಿಕೆ ಕಡಿಮೆಯಾಗುತ್ತದೆ.

ಆಧುನಿಕ ಮನೋರಂಜನೆಯ ವಸ್ತುಗಳಾದ ರೇಡಿಯೋ, ಟಿ.ವಿ., ಟೇಪ್‌ರೀಕಾರ್ಡ್ ಇತ್ಯಾದಿ ಹೊಂದಿರುವುದು ಸಹಜ. ಆದರೆ ಸಾಮಾಜಿಕ ಬದುಕಿಗೆ ಆಗತ್ಯವಾದ ಯಾವುದೇ ರೀತಿಯ ಆರ್ಥಿಕ ಸಹಾಯ ಸರಕಾರದಿಂದ ಆಗಿರುವುದಿಲ್ಲ. ಆದರೂ ಸಹಿತ ರಾಜಕೀಯ ಪ್ರಕ್ರಿಯೆಗೆ ಯಾವುದೇ ರೀತಿಯ ಕೊರತೆ ಇರದಿರುವುದು ಕಂಡುಬರುವುದಿಲ್ಲ.

**"ಬುಡಕಟ್ಟು ಜನರ ಆರ್ಥಿಕತೆಯು ರಾಜಕೀಯದಲ್ಲಿ ಭಾಗವಹಿಸಲು ಸಹಾಯಕ ವಾಗಿದೆಯೇ ?"**

"ಕ್ಷೇತ್ರ ಕಾರ್ಯವು ಸಂಶೋಧನೆಯ ಹೃದಯವಿದ್ದಂತೆ " ಎಂಬ ಹೇಳಿಕೆಯನ್ನು ಪ್ರಸ್ತುತ ಕ್ಷೇತ್ರ ಕಾರ್ಯವನ್ನು ಕೈಗೊಂಡು ಜಿಲ್ಲೆಯ ಹತ್ತು ತಾಲೂಕಿನ ಗ್ರಾಮ ಪಂಚಾಯಿತಿಗೆ ಆಯ್ಕೆಯಾದ ಬುಡಕಟ್ಟು ಸದಸ್ಯರನ್ನು ಪ್ರತ್ಯೇಕವಾಗಿ ಭೇಟಿಯಾಗಿ ಅವರ ಕೌಟುಂಬಿಕ ಸ್ಥಿತಿ ಹಾಗೂ ಆರ್ಥಿಕ ಜೀವನದ ಮೂಲಾಧಾರವನ್ನು ವೀಕ್ಷಿಸಿ ಸಂಗ್ರಹಿಸಿದ ಮಾಹಿತಿಯ ಪ್ರಕಾರ ಅವರ ರಾಜಕೀಯ ಆಸಕ್ತಿಯನ್ನು ಸುಲಭವಾಗಿ ತಿಳಿಯಬಹುದು.

ಜಿಲ್ಲೆಯ ಹೆಚ್ಚಿನ ಪರಿಶಿಷ್ಟ ಪಂಗಡದ ಕುಟುಂಬಗಳು ಬಡತನ ರೇಖೆಯ ಕೆಳಗಡೆ ಜೀವಿಸುತ್ತಿದ್ದು ರಾಜಕೀಯದಲ್ಲಿ ಸಕ್ರಿವಾಗಿ ಭಾಗವಹಿಸಲು ಹಲವಾರು ಅಡೆತಡೆಗಳು ಇರುವುದು ಕಂಡುಬರುತ್ತದೆ. ಹಲವಾರು ಜನ ಗ್ರಾಮ ಪಂಚಾಯಿತಿಯ ಸದಸ್ಯರು ರಾಜಕೀಯದಲ್ಲಿ ಮೀಸಲಾತಿ ಇರುವುದರಿಂದ ಭಾಗವಹಿಸಿದ್ದಾರೆ ಮತ್ತೆ ಕೆಲವು ಸದಸ್ಯರು ಬೇರೆಯವ ಪ್ರೇರಣೆಯಿಂದ ಭಾಗವಹಿಸಿದ್ದಾರೆ. ಇದರಿಂದ ಅವರ ರಾಜಕೀಯ ಆಸಕ್ತಿ, ಅಭಿರುಚಿ ಮತ್ತು ಪ್ರಜ್ಞೆಯನ್ನು ಅರಿಯಬೇಕಾದರೆ ಪ್ರಶ್ನಾವಳಿಗಳ ಮೂಲಕ ರಾಜಕೀಯ ಮತ್ತು ಅರ್ಥಿಕ ಬದುಕಿಗೆ ಸಂಬಂಧಿಸಿದ ಹಲವಾರು ಪ್ರಶ್ನೆಗಳನ್ನು ಕೇಳಿ ಸಂಗ್ರಹಿಸಿದ ಆಧಾರದ ಮೇಲೆ ಖಂಡಿತವಾಗಿ ರಾಜಕೀಯಕ್ಕೆ ಆರ್ಥಿಕತೆಯು ಬೆನ್ನಲುಬಾಗಿದೆ ಎಂಬುವುದು ತಿಳಿದು ಬರುತ್ತದೆ. ಏಕೆಂದರೆ ಯಾವುದೇ ವ್ಯಕ್ತಿಯು ಆರ್ಥಿಕವಾಗಿ ಅಭಿವೃದ್ಧಿಹೊಂದಿದರೆ ಅವನಿಗೆ ಬಿಡುವಿನ ವೇಳೆ ದೊರೆಯುತ್ತದೆ. ಅಂತಹ ವೇಳೆಯಲ್ಲಿ ಅವನು ಬೇರೆ ಜನರೊಂದಿಗೆ ಬೆರೆತು ರಾಜಕೀಯ

ಮತ್ತು ಸಾರ್ವಜನಿಕ ವಿಷಯಗಳನ್ನು ಚರ್ಚೆಮಾಡಿ, ತನ್ನಿಂದ ಕೈಲಾದ ಜನ ಸೇವೆ ಮಾಡಲು ಅವಕಾಶ ದೊರೆಯುತ್ತದೆ ಎಂಬ ವಿಚಾರವನ್ನು ಸದಸ್ಯರು ತಮ್ಮ ಪ್ರತಿಕ್ರಿಯೆ ವ್ಯಕ್ತಪಡಿಸುದ್ದಾರೆ.

ಪ್ರತಿಯೊಂದು ಗ್ರಾಮ ಹಲವಾರು ಜಾತಿ, ಧರ್ಮ ಮತ್ತು ಜನರನ್ನು ಒಳಗೊಂಡಿರುತ್ತದೆ. ಆಯಾ ಗ್ರಾಮದಲ್ಲಿ ಯಾವ ಜಾತಿಯ ಜನರು ಹೆಚ್ಚಿರುತ್ತಾರೋ ಅವರೇ ರಾಜಕೀಯವನ್ನು ನಿರ್ಧರಿಸುತ್ತಾರೆ. ಮೀಸಲಾತಿ ಅಧಾರದ ಮೇಲೆ ಆಯ್ಕೆಯಾದ ಬುಡಕಟ್ಟು ಸದಸ್ಯರಿದ್ದರು ತೀರ್ಮಾನ ತೆಗೆದುಕೊಳ್ಳುವ ಅಧಿಕಾರ ಬಹುಸಂಖ್ಯಾತರಿಗೆ ಇರುತ್ತದೆ. **"King Maker is Greater Then King"** ಎಂಬುವಂತೆ ರಾಜಕೀಯವು ಯಾವಾಗಲು ಬಹುಸಂಖ್ಯಾತರಿಂದ ನಿರ್ಧರಿಸಲ್ಪಡುತ್ತದೆ. ಬುಡಕಟ್ಟು ಜನರಿಗೆ ರಾಜಕೀಯ ಒಂದು ಮುಳ್ಳಿನ ಹಾಸಿಗೆ ಯಾಗಿರುತ್ತದೆ. ಏಕೆಂದರೆ ಸ್ವಂತ ನಿರ್ಣಯ ವಾಗಲಿ, ಸಾರ್ವಜನಿಕ ಕಾರ್ಯಗಳಾಗಲೀ ನಿರ್ವಹಿಸುವ ಧೈರ್ಯ ಇರುವದಿಲ್ಲ. ಇವರು ಕೇವಲ ಬಹುಸಂಖ್ಯಾತರ ಕೈಗೊಂಬೆಯಾಗಿ ನಟಿಸುತ್ತಿರುವದು ಜಿಲ್ಲೆಯ ಕೆಲವು ಭಾಗದಲ್ಲಿ ಕಂಡುಬಂದಿದೆ.

## ೪.೧೧. ಬುಡಕಟ್ಟು ರಾಜಕೀಯ ಪ್ರಜ್ಞೆ

ಆದಿವಾಸಿ ಬದುಕು ಮಾಯವಾಗಿದೆ. ೨೧ನೆಯ ಶತಮಾನದಲ್ಲಿ ದಾಪುಗಾಲು ಹಾಕುತ್ತಿರುವ ಆದಿವಾಸಿಯು ಇಂದು ನಾಗರಿಕತೆಯ ತುದಿಯಲ್ಲಿ ನಿಂತು ತಾನು ಬುಡಕಟ್ಟಿನ ಸಮುದಾಯಕ್ಕೆ ಸೇರಿದವನು ಎಂಬುದನ್ನು ಮರೆತು, ಎಲ್ಲಾ ಸಮುದಾಯಗಳಂತೆ ಪ್ರತಿಯೊಂದು ಕ್ಷೇತ್ರದಲ್ಲಿ ಅಭಿವೃದ್ಧಿಗೊಳ್ಳುತ್ತಿದ್ದಾನೆ. ಬುಡಕಟ್ಟು ಮಾನವನ ರಾಜಕೀಯ ಪ್ರಜ್ಞೆಯ ಆಳವನ್ನು ಅರಿಯಲು ೩೨ ಪ್ರಶ್ನೆಗಳನ್ನು ಒಳಗೊಂಡ ಪ್ರಶ್ನಾವಳಿಯ ಮೂಲಕ ಜಿಲ್ಲೆಯ ೩೩೮ ಗ್ರಾಮ ಪಂಚಾಯಿತಿಯಲ್ಲಿ ಸಕ್ರಿಯವಾಗಿ ಸೇವೆಯಲ್ಲಿ ನಿರತರಾದ ೨೮೩ ಬುಡಕಟ್ಟು ಸದಸ್ಯರನ್ನು ಸಂದರ್ಶಿಸಲಾಗಿ, ಹೊರಹೊಮ್ಮಿದ ಅಭಿಪ್ರಾಯಗಳ ಸಾರಸಂಗ್ರಹ ಹೀಗಿದೆ.

ಪ್ರತಿಯೊಬ್ಬ ಮನುಷ್ಯನು ಒಂದಲ್ಲ ಒಂದು ರೀತಿಯ ಗುರಿ ಮತ್ತು ಉದ್ದೇಶಗಳನ್ನು ಇಟ್ಟು ಕೊಂಡು ರಾಜಕೀಯವನ್ನು ಸೇರುತ್ತಾನೆ. ಇದನ್ನು ಕುರಿತು ಪ್ರಶ್ನೆಗಳನ್ನು ಕೇಳಿದಾಗ ಪ್ರಸ್ತುತ ಸಂಶೋಧನೆಯ ವ್ಯಾಪ್ತಿಗೆ ಒಳಪಡುವ ೨೮೩ ಗ್ರಾಮ ಪಂಚಾಯಿತಿಯ ಸದಸ್ಯರಲ್ಲಿ ಸ್ವ ಇಚ್ಛೆಯಿಂದ ರಾಜಕೀಯದಲ್ಲಿ ಸೇರಿದ ಸದಸ್ಯರು ಶೇಕಡಾ ೩೫. ಈ ಸದಸ್ಯರಿಗೆ ಅಧಿಕಾರದ ವ್ಯಾಮೋಹ, ಸೇವಾಮನೋಭಾವನೆ, ರಾಜಕೀಯ ಅರಿವು, ಆಸಕ್ತಿ ಇರುವುದರಿಂದ

# ಕೋಷ್ಟಕ ೪.೧೦

## ಪಂಚಾಯತಿ ಸದಸ್ಯರ ರಾಜಕೀಯ ಪ್ರಜ್ಞೆ

| ಕ.ಸಂ. | ೪ | | ೫ | | ೬ | | ೭ | ೮ | ೯ | ೧೦ | | ೧೧ | ೧೨ | ೧೩ | ೧೪ | |
|---|---|---|---|---|---|---|---|---|---|---|---|---|---|---|---|---|
| ೦೧ | [illegible] | [illegible] | [illegible] | [illegible] | [illegible] | [illegible] | ಗೆಲುವಿನ ಭರವಸೆ | ಅಧಿಕಾರದ [illegible] | ಊರಿನ [illegible] | ಹೆಚ್ಚು ರಾಜಕೀಯ ಅನುಭವ | ಕಡಿಮೆ ರಾಜಕೀಯ ಅನುಭವ | ಆಡಳಿತ ಅನುಭವ | [illegible] | [illegible] | ಹೆಚ್ಚು ಚುನಾವಣಾ ವೆಚ್ಚ | ಕಡಿಮೆ ಚುನಾವಣಾ ವೆಚ್ಚ |
| ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ | ೧೨ | ೧೩ | ೧೪ | ೧೫ | ೧೬ | ೧೭ |
| ೦೧ | ೦೨ | ೦೪ | ೦೨ | ೦೪ | -- | ೦೬ | -- | ೦೧ | -- | ೦೬ | ೦೬ | ೦೧ | ೦೧ | -- | ೨೦೦೦ | ೨೦೦ |
| ೦೨ | -- | ೦೪ | ೦೨ | ೦೨ | -- | ೦೪ | -- | -- | -- | ೦೬ | ೦೬ | -- | -- | -- | ೧೨೦೦ | ೧೦೦ |
| ೦೩ | ೦೪ | ೧೮ | ೦೧ | ೨೧ | ೦೫ | ೧೭ | -- | ೦೫ | -- | ೨೦ | ೦೬ | ೦೫ | ೦೪ | ೦೧ | ೧೦೦೦ | ೨೦೦ |
| ೦೪ | ೦೧ | ೦೯ | -- | ೧೦ | ೦೪ | ೦೬ | -- | ೦೧ | -- | ೦೬ | ೦೬ | ೦೧ | -- | -- | ೧೦೦೦ | ೧೫೦ |
| ೦೫ | -- | ೧೨ | -- | ೧೨ | ೦೩ | ೦೯ | -- | ೦೩ | -- | ೦೮ | ೦೬ | ೦೩ | ೦೨ | -- | ೧೦೦೦ | ೧೦೦ |
| ೦೬ | ೦೫ | ೨೦ | -- | ೨೫ | ೦೭ | ೧೮ | -- | ೦೫ | -- | ೧೦ | ೦೬ | ೦೫ | -- | -- | ೧೨೦೦ | ೫೦೦ |
| ೦೭ | ೦೪ | ೧೧ | -- | ೧೫ | ೦೨ | ೧೩ | -- | ೦೨ | -- | ೧೦ | ೦೬ | ೦೨ | ೦೩ | -- | ೨೦೦೦ | ೨೦೦ |
| ೦೮ | ೨೫ | ೨೮ | ೦೮ | ೪೫ | ೨೪ | ೨೯ | -- | ೧೫ | -- | ೩೦ | ೦೬ | ೧೫ | ೦೮ | -- | ೨೦೦೦ | ೧೦೦ |
| ೦೯ | ೪೭ | ೪೦ | ೩೨ | ೫೫ | ೨೨ | ೬೫ | -- | ೧೪ | -- | ೧೫ | ೦೬ | ೧೪ | ೦೬ | -- | ೨೦೦೦ | ೧೫೦ |
| ೧೦ | ೧೩ | ೩೬ | ೦೬ | ೪೩ | ೨೧ | ೨೮ | -- | ೦೭ | -- | ೨೦ | ೦೬ | ೦೭ | ೦೩ | -- | ೨೦೦೦ | ೧೦೦ |
| ಒಟ್ಟು | ೧೦೧ | ೧೮೨ | ೫೧ | ೨೫೨ | ೮೮ | ೧೯೫ | -- | ೫೩ | -- | ೩೦ | ೦೬ | ೫೩ | ೨೭ | ೦೧ | ೨೦೦೦ | ೧೦೦ |

ರಾಜಕೀಯದಲ್ಲಿ ಭಾಗವಹಿಸಿದ್ದಾರೆ ಎಂಬುವುದು ಕಂಡುಬರುತ್ತದೆ(ಭಾವಚಿತ್ರ ೪.೧,೨ ನೋಡಿ) ಉಳಿದ ೬೫ ಪ್ರತಿಶತ ಸದಸ್ಯರು ರಾಜಕೀಯದಲ್ಲಿ ಸೇರಬೇಕಾದರೆ ಊರಿನ ಮುಖಂಡರು, ಮನೆಯ ಯಜಮಾನರು ಮತ್ತು ಮರಿ ಪುಢಾರಿಗಳ ಪ್ರೇರಣೆ ಕಾರಣವಾಗಿದೆ. ಇವರಿಗೆ ಸ್ವಂತ ರಾಜಕೀಯ ತಿಳುವಳಿಕೆಯಾಗಲೀ ಹಾಗೂ ಪ್ರಜಾಪ್ರಭುತ್ವದ ಆಳ-ಅಗಲಗಳಾಗಲೀ ಗೊತ್ತಿಲ್ಲವೆನಿಸುತ್ತದೆ.

೧೯೯೩ ರ ಅಧಿನಿಯಮದ ಆಧಾರದ ಮೇಲೆ ಪ್ರತಿಯೊಂದು ಗ್ರಾಮಪಂಚಾಯಿತಿಯ ವ್ಯಾಪ್ತಿಯಲ್ಲಿ ಪರಿಶಿಷ್ಟ ಪಂಗಡದವರಿಗೆ ಕೆಲವು ಸ್ಥಾನಗಳನ್ನು ಮೀಸಲಿಡಲಾಗಿದೆ ಮತ್ತೆ ಕೆಲವು ಸ್ಥಾನಗಳನ್ನು ಸಾಮಾನ್ಯ ಎಂದು ಪರಿಗಣಿಸಲಾಗಿದೆ. ಸಾಮಾನ್ಯ ಸ್ಥಾನಕ್ಕೆ ಸ್ಪರ್ಧಿಸಿ ಆಯ್ಕೆಯಾದ ಸದಸ್ಯರ ಸಂಖ್ಯೆ ೫೧ (ಶೇಕಡಾ ೧೮). ಇದರಲ್ಲಿ ವಿಶೇಷವಾಗಿ ಸುರುಪುರ ತಾಲೂಕ ಪ್ರಥಮಸ್ಥಾನ, ಶಹಾಪುರ ದ್ವಿತೀಯ ಸ್ಥಾನ ಮತ್ತು ಯಾದಗಿರಿ ಕ್ರಮವಾಗಿ ಮೂರನೇ ಸ್ಥಾನವನ್ನು ಪಡೆಯುತ್ತದೆ, ಇನ್ನು ಕೆಲವು ಕಡೆ ಮೀಸಲಾತಿ ನೀಡಲಾಗಿದ್ದು ಆ ಸಮುದಾಯ ದೊರೆಯದಿದ್ದ ಕಾರಣ ಪಂಚಾಯಿತಿಯಲ್ಲಿ ಆ ಸ್ಥಾನವನ್ನು ಹಾಗೆಯೇ ಖಾಲಿ ಬಿಡಲಾಗಿದೆ. ಮೀಸಲಾತಿಯಿಂದ ಆಯ್ಕೆಯಾದ ಸದಸ್ಯರ ಸಂಖ್ಯೆ ೨೩೨ (೮೨%) ಈ ಸಮುದಾಯದಲ್ಲಿ ರಾಜಕೀಯವಾಗಿ ಮುಂದೆ ಬರಲು ಹಲವಾರು ಅಡ್ಡಿ ಆತಂಕಗಳು ಇವೆಯೆನಿಸುತ್ತದೆ. ಅಲ್ಪ ಸಮುದಾಯ, ಆರ್ಥಿಕವಾಗಿ ಹಿಂದುಳಿದಿರುವುದು, ಶಿಕ್ಷಣದ ಕೊರತೆ, ಬುಡಕಟ್ಟಿನಲ್ಲಿ ಹಲವಾರು ಉಪಜಾತಿಗಳು ಇರುವುದು ಮತ್ತು ರಾಜಕೀಯ ಅಧಿಕಾರದ ರುಚಿಯನ್ನು ಕಾಣದಿರುವುದೇ ಇವರ ರಾಜಕೀಯ ಆಸಕ್ತಿ ಕಡಿಮೆ ಇರಲು ಕಾರಣವಾಗಿದೆ.

೧. ಬುಡಕಟ್ಟು ಸಮುದಾಯ ಜಿಲ್ಲೆಯ ಹತ್ತು ತಾಲೂಕಗಳಲ್ಲಿ ಸಮನಾಗಿ ಹಂಚಿಕೆಯಾಗಿಲ್ಲ.

೨. ಕೆಲವು ಗ್ರಾಮಗಳಲ್ಲಿ ೩ ರಿಂದ ೪ ಮನೆಗಳು ಮಾತ್ರ ಇರುತ್ತವೆ.

೩. ಈ ಸಮುದಾಯ ಅಲೆಮಾರಿಗಳಾಗಿದ್ದು ತಮ್ಮದೇ ಆದ ಸ್ಥಿರಾಸ್ತಿಯನ್ನು ಹೊಂದುವ ಆಸಕ್ತಿ ಇರುವುದಿಲ್ಲ.

೪. ಬುಡಕಟ್ಟಿನವರಲ್ಲಿ ತಮ್ಮ ಸಮುದಾಯದ ಕೀಳರಿಮೆ ಇದ್ದು ಬೇರೆ ಜನಾಂಗದೊಂದಿಗೆ ಬೆರೆಯಲು ಇಷ್ಟಪಡುವುದಿಲ್ಲ.

೫. ಆರ್ಥಿಕವಾಗಿ ಬಹಳ ಹಿಂದುಳಿದಿದ್ದಾರೆ.

೬. ಶೈಕ್ಷಣಿಕವಾಗಿ ಹಿಂದುಳಿದಿರುವಿಕೆ.

ರಾಜಕೀಯದಲ್ಲಿ ಸ್ಪರ್ಧೆ, ಹೋರಾಟ ಇದ್ದರೆ ಮಾತ್ರ ಅದಕ್ಕೆ ಒಂದು ರೀತಿಯ ಕಳೆ ಬರುತ್ತದೆ ಎಂದು ರಾಜಕೀಯ ತಜ್ಞರ ಅಭಿಪ್ರಾಯ ಪಡುತ್ತಾರೆ. ಬುಡಕಟ್ಟು ಸದಸ್ಯರಲ್ಲಿ ಗ್ರಾಮ ಪಂಚಾಯಿತಿಗೆ ಆಯ್ಕೆಯಾಗಬೇಕಾದಲ್ಲಿ ಸಾಕಷ್ಟು ತುರುಸಿನ ಸ್ಪರ್ಧೆಯನ್ನು ಹೆದುರಿಸಿದ್ದಾರೆ. ಜಿಲ್ಲೆಯಲ್ಲಿ ೨೮೩(೩೧%) ಗ್ರಾಮ ಪಂಚಾಯಿತಿ ಸದಸ್ಯರಲ್ಲಿ ಸ್ಪರ್ಧಾತ್ಮಕವಾಗಿ ೮೮ ಜನ ಸದಸ್ಯರು ಆಯ್ಕೆಯಾಗಿರುವುದು ಇತರ ಸಮುದಾಯದವರಿಗೆ ಹೆದರಿಕೆಯನ್ನು ಹುಟ್ಟಿಸಿದೆ. ಏಕೆಂದರೆ ಇವರಲ್ಲಿ ಸಹ ಸ್ಪರ್ಧಾ ಮನೋಭಾವನೆ ಬೆಳೆದಿದೆ. ಉಳಿದ (೬೮%) ಸದಸ್ಯರು ಒಮ್ಮತದಿಂದ ಆಯ್ಕೆಯಾಗಿದ್ದಾರೆ. ಏಕೆಂದರೆ ಕೆಲವು ಕಡೆ ಈ ಬುಡಕಟ್ಟು ಸದಸ್ಯರು ಸಿಗುವುದು ಬಹಳ ವಿರಳ ಆದರೂ ಸಹ ಪ್ರಸ್ತುತ ಸಮೀಕ್ಷೆಯಿಂದ ಈ ಸಮುದಾಯದಲ್ಲಿ ರಾಜಕೀಯ ಕೊರತೆ ಕಂಡುಬರುತ್ತದೆ.

ಗೆಲುವಿನ ರಹಸ್ಯವನ್ನು ಕುರಿತು ಪ್ರಶ್ನಿಸಲಾಗಿ ಹಲವಾರು ಸದಸ್ಯರು ಒಂದೇ ರೀತಿಯ ಪ್ರತಿಕ್ರಿಯೆಯನ್ನು ತೋರಿಸಿದ್ದುಂಟು. ಅವರ ಉತ್ತರದ ಸಾರಾಂಶವನ್ನು ಈ ರೀತಿ ಸಂಗ್ರಹಿಸಲಾಗಿದೆ.

೧. ಪರಿಶಿಷ್ಟ ಪಂಗಡಕ್ಕೆ ಮೀಸಲು ಇರುವುದರಿಂದ ನಮಗೆ ಅವಕಾಶ ದೊರೆತಿದೆ.

೨. ಅಲ್ಪ-ಸ್ವಲ್ಪ ರಾಜಕೀಯ ತಿಳುವಳಿಕೆ, ಅರಿವು ಇದೆ ಎಂಬ ಭಾವನೆಯಿಂದ ಜನ ನಮ್ಮನ್ನು ಚುನಾಯಿಸಿದ್ದಾರೆ.

೩. ಆರ್ಥಿಕವಾಗಿ ನಾವು ಅಭಿವೃದ್ಧಿ ಹೊಂದಿದ್ದೇವೆ ಎಂಬ ಭಾವನೆಯಿಂದ ಜನ ನಮ್ಮನ್ನು ಆಯ್ಕೆ ಮಾಡಿದ್ದಾರೆ.

೪. ಅಕ್ಷರಸ್ಥರು, ಸೇವಾ ಮನೋಭಾವನೆಯುಳ್ಳವರು, ಜನರ ಬಗ್ಗೆ ಕಳಕಳಿ ಉಳ್ಳವರು ಎಂಬ ಭಾವನೆಯಿಂದ ಅವಕಾಶ ನೀಡಿದ್ದಾರೆ.

೫. ಜಿಲ್ಲೆಯ ಕೆಲವು ಭಾಗಗಳಲ್ಲಿ ನಮ್ಮ ಸಮುದಾಯಗಳು ಸಂಸ್ಥಾನವನ್ನು ಕಟ್ಟಿ ಆಳಿ ಹೋಗಿದ್ದಾರೆ. ಆ ಒಂದು ಕಾರಣದಿಂದ ನಮಗೆ ಅವಕಾಶ ದೊರೆತಿದೆ.

೬. ವಿಶೇಷವಾಗಿ ಶಹಾಪುರ ಮತ್ತು ಸುರುಪುರ ತಾಲೂಕಿನಲ್ಲಿ ನಮ್ಮ ಸಮುದಾಯ ಹೆಚ್ಚಿದ್ದು ಗ್ರಾಮ ಪಂಚಾಯಿತಿಯಲ್ಲಿ ನಮಗೆ ಸ್ಥಾನ ಕೊಡುವುದು ಅನಿರ್ವಾಯವಾಗಿದೆ.

"ರಾಜಕೀಯ ಕೊನೆಯ ಗುರಿ ಅಧಿಕಾರ" ಎಂಬಂತೆ ರಾಜಕೀಯದಲ್ಲಿ ಭಾಗವಹಿಸಿದ ಪ್ರತಿಯೊಬ್ಬ ವ್ಯಕ್ತಿಯು ಒಂದಲ್ಲ ಒಂದು ರೀತಿಯ ಅಧಿಕಾರವನ್ನು ಪಡೆಯುವ ಗುರಿಯನ್ನು ಹೊಂದಿರುತ್ತಾನೆ. ಇಂತಹ ಅವಕಾಶಗಳು ೧೯೯೩ರ ಚುನಾವಣೆಯ ಅಧಿನಿಯಮದಂತೆ ಬುಡಕಟ್ಟಿನ ಕೆಲವು ಗ್ರಾಮ ಪಂಚಾಯಿತಿಯಲ್ಲಿ ಇಂತಹ ಅವಕಾಶಗಳನ್ನು ಪಡೆದುಕೊಂಡು ಸಕ್ರೀಯವಾಗಿ ಮತ್ತು ಆಸಕ್ತಿಯಿಂದ ಅಧಿಕಾರ ನಡೆಸುವ ಸದಸ್ಯರು ೫೩ ಜನ ಇದ್ದು ಕೆಲವರು ೬ ವರ್ಷ ಅಧಿಕಾರವನ್ನು ಚಲಾಯಿಸಿದ್ದಾರೆ. ಇವರ ಅಧಿಕಾರವು ಪರಿಣಾಮಕಾರಿಯಾಗಿ ಆಡಳಿತಾತ್ಮಕ ನೆಲೆಯಲ್ಲಿ ನಡೆದಿರುವುದು ಗೋಚರವಾಗುತ್ತದೆ.

ರಾಜಕೀಯವು ಮನುಷ್ಯನಿಗೆ ಹುಟ್ಟಿದಾಗಿನಿಂದ ಪ್ರಾರಂಭವಾಗಿ ಸಾಯುವವರೆಗೆ ಇರುತ್ತದೆ. ಎಲ್ಲರಿಗೆ ಒಂದಲ್ಲ ಒಂದು ರೀತಿಯ ರಾಜಕೀಯ ಅನುಭವ ಇರಬೇಕು. " Experience is Knowlegde " ಎಂಬುವಂತೆ ಸದಸ್ಯನು ಯಾವುದೇ ಸಂಸ್ಥೆಯ ಸದಸ್ಯತ್ವವನ್ನು ಪಡೆದುಕೊಂಡಾಗ ಮಾತ್ರ ಆ ಅನುಭವ ಬರುತ್ತದೆ. ಅದೇ ರೀತಿಯಾಗಿ ೧೯೮೫ರ ನಂತರ ಮೀಸಲಾತಿಯನ್ನು ಗ್ರಾಮ ಪಂಚಾಯಿತಿಯಲ್ಲಿ ಖಡ್ಡಾಯಗೊಳಿಸಿದ ನಂತರ ಪರಿಶಿಷ್ಟ ಪಂಗಡದವರಿಗೆ ಅಲ್ಪ-ಸ್ವಲ್ಪ ರಾಜಕೀಯ ಅನುಭವ ದೊರೆಯಿತು ಏಕೆಂದರೆ ಅದಕ್ಕಿಂತ ಮುಂಚೆ ನಮ್ಮ ಪಂಚಾಯಿತಿ ವ್ಯವಸ್ಥೆಯಲ್ಲಿ ಅವಕಾಶಗಳು ಬಹಳ ಕಡಿಮೆ ಇದ್ದವು. ಮನೆತನ ಮತ್ತು ಶಿಕ್ಷಣದ ಸಹಾಯದಿಂದ ೧೦ ವರ್ಷಕ್ಕಿಂತ ಹೆಚ್ಚು ರಾಜಕೀಯ ಅನುಭವ ಪಡೆದರೆ, ಇನ್ನು ಪ್ರಸ್ತುತ ರಾಜಕೀಯದಲ್ಲಿ ಪದಾರ್ಪಣೆ ಮಾಡಿದ ಸದಸ್ಯರು ೬ ವರ್ಷ ಮಾತ್ರ ರಾಜಕೀಯ ಅನುಭವ ಪಡೆದಿರುವುದು ಈ ಸಂಶೋಧನೆಯಿಂದ ತಿಳಿದು ಬರುತ್ತದೆ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಅಧಿಕಾರ ಸಂವಿಧಾನಾತ್ಮಕವಾಗಿ ೫ ವರ್ಷಗಳು ಇದ್ದರೂ, ಪಂಚಾಯಿತಿಯ ಸದಸ್ಯರು ಒಪ್ಪಿಗೆ ಇರುವವರೆಗೆ ಅಧಿಕಾರದಲ್ಲಿ ಇರಬೇಕು. ಬೆಂಬಲ ಕಳೆದುಕೊಂಡ ಕೂಡಲೆ ಅಧಿಕಾರಕ್ಕೆ ರಾಜೀನಾಮೆ ಕೊಡಬೇಕು. ಆದ್ದರಿಂದ ಬುಡಕಟ್ಟು ಸದಸ್ಯರು ಯಾವುದೇ ರೀತಿಯ ನಿರ್ದಿಷ್ಟ ಆಡಳಿತದ ಅನುಭವ ಪಡೆದುಕೊಂಡಿಲ್ಲ. ಕೆಲವು ಸದಸ್ಯರು ೧೨ ವರ್ಷಗಳ ಅನುಭವ ಪಡೆದಿದ್ದರೆ ಮತ್ತೆ ಕೆಲವರು ೨೪ ವರ್ಷ ಹಾಗೂ ಇನ್ನುಳಿದವರು ೬ ವರ್ಷಗಳ ಪಂಚಾಯಿತಿಯಲ್ಲಿ ಆಡಳಿತದ ಅನುಭವ ಹೊಂದಿದ್ದಾರೆ. ಇನ್ನು ಹೆಚ್ಚಿನ ಸದಸ್ಯರು ೬ ವರ್ಷಕ್ಕಿಂತ ಕಡಿಮೆ ರಾಜಕೀಯ ಅನುಭವನ್ನು ಪಡೆದಿದ್ದಾರೆ.

ಕೆಲವು ಪ್ರಶ್ನೆಗಳಿಗೆ ಉತ್ತರಿಸಲು ಬಹಳಷ್ಟು ಸದಸ್ಯರು ನಕಾರಾತ್ಮಕ ಭಾವವನ್ನು ತೋರಿಸಿದ್ದಾರೆ. ಏಕೆಂದರೆ ಆ ಜನರಲ್ಲಿ ಭಯದ ವಾತಾವರಣ ಕಂಡುಬರುತ್ತಿತ್ತು.

ಎಲ್ಲಿ ರಾಜಕೀಯ ಅನುಭವ, ಆಸಕ್ತಿ, ಉತ್ಸಾಹ, ಜ್ಞಾನ, ತಿಳುವಳಿಕೆ ಕಂಡು ಬರುತ್ತದೆಯೋ ಅಲ್ಲಿ ಚುನಾವಣೆಯ ವೆಚ್ಚ ಕನಿಷ್ಠ ಎಂದರೂ ೨೦೦೦ ಇರುವುದು ಕಂಡುಬರುತ್ತದೆ. ಅದೇ ರೀತಿಯಾಗಿ ರಾಜಕೀಯ ಅನುಭವ ಕಡಿಮೆ ಇರುವ ಕಡೆ ರಾಜಕೀಯದಲ್ಲಿ ಭಾಗವಹಿಸುವವರ ಸಂಖ್ಯೆ ಕಡಿಮೆ ಇರುತ್ತದೆ, ಜೊತೆಗೆ ಒತ್ತಾಯ ಪೂರ್ವಕವಾಗಿ ಸ್ಪರ್ಧೆಗೆ ನಿಲ್ಲಿಸುವ ಸಂದರ್ಭ ಬರುತ್ತದೆ.

ಈ ಎಲ್ಲಾ ಪ್ರಶ್ನೆಗಳ ಮಾಹಿತಿಯನ್ನು ಗ್ರಾಮ ಪಂಚಾಯಿತಿಯ ಸದಸ್ಯರ ಪ್ರತ್ಯಕ್ಷ ಸಂದರ್ಶನದಿಂದ ಸಂಗ್ರಹಿಸಲಾಗಿದೆ.

## ೪.೧೨. ಬುಡಕಟ್ಟು ಸದಸ್ಯರ ರಾಜಕೀಯ ಕುರಿತು ಪ್ರತಿಕ್ರಿಯೆ

ಸಂಶೋಧನೆಯ ಅಂಗವಾಗಿ ಹಮ್ಮಿಕೊಂಡ ಕ್ಷೇತ್ರಕಾರ್ಯದ ವ್ಯಾಪ್ತಿಯಲ್ಲಿ ಗುಲ್ಬರ್ಗಾ ಜಿಲ್ಲೆಯ ಹತ್ತು ತಾಲೂಕುಗಳು ಒಳಗೊಂಡ ೩೩೮ ಗ್ರಾಮ ಪಂಚಾಯಿತಿಯಲ್ಲಿ ಸಕಿಯವಾಗಿ ಜನ ಸೇವೆ ಮಾಡುತ್ತಿರುವ ೨೮೩ ಬುಡಕಟ್ಟು ಸದಸ್ಯರ ರಾಜಕೀಯ ಅರಿವು, ಆಸಕ್ತಿ ಮತ್ತು ಅಭಿರುಚಿಯನ್ನು ಕುರಿತು ಮಾರ್ಗದರ್ಶಕರ ನಿರ್ದೇಶನದಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ವಿವಿಧ ಪ್ರಶ್ನೆಗಳಿಗೆ ಅನುಸಾರವಾಗಿ ವಿವರಿಸಲಾಗಿದೆ.

ಯಾವುದೇ ಕ್ಷೇತ್ರದಲ್ಲಿ ಮಾನವನು ಏನಾದರೂ ಸಾಧಿಸಬೇಕಾದರೆ ಅವನ ಕಾರ್ಯಗಳಲ್ಲಿ ಹಲವಾರು ಅಡೆತಡೆಗಳು ಬರುವುದು ಸಹಜ. ಅದೇ ರೀತಿ ಬುಡಕಟ್ಟು ಸಮುದಾಯದ ಸದಸ್ಯರು ರಾಜಕೀಯ ಜ್ಞಾನವನ್ನು ಕುರಿತು ಮಾಹಿತಿ ಸಂಗ್ರಹಿಸುವಾಗ ಹಲವಾರು ತೊಡಕುಗಳು ಸಂಶೋಧಕನಿಗೆ ಬಂದವು. ಪ್ರಶ್ನೆಗಳಿಗೆ ಪ್ರತಿಕ್ರಿಯೆ ವ್ಯಕ್ತಪಡಿಸಿದ ವಿಧಾನವು ಬಹಳ ಸೂಕ್ತ ವಾಗಿದ್ದು, ಒಂದೇ ರೀತಿಯ ಅಭಿಪ್ರಾಯ ವ್ಯಕ್ತವಾಗಿದೆ. ಬುಡಕಟ್ಟು ರಾಜಕೀಯಕ್ಕೆ ಸಂಬಂಧ ಪಟ್ಟಂತೆ ೨೮೩ ಸದಸ್ಯರನ್ನು ಸಂದರ್ಶಿಸಿದಾಗ ಈ ಪ್ರಶ್ನೆಗೆ ಸಕಾರಾತ್ಮಕವಾಗಿ ಅಭಿಪ್ರಾಯ ವ್ಯಕ್ತಪಡಿಸಿದ ಸದಸ್ಯರು ೧೯೫ (೬೮%). ಉಳಿದ ೮೮ (೩೨%) ಸದಸ್ಯರು ನಕಾರಾತ್ಮಕವಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅದಕ್ಕೆ ಹಲವಾರು ಕಾರಣಗಳು ನಮ್ಮ ಗಮನಕ್ಕೆ ಬಂದಿರುತ್ತವೆ. ಇನ್ನು ಉತ್ತರಿಸಿದ ಸದಸ್ಯರ ಅಭಿಪ್ರಾಯಗಳನ್ನು ಈ ರೀತಿ ವಿವರಿಸಲಾಗಿದೆ. (ಕೋಷ್ಟಕ ೪.೧೧ ನೋಡಿ)

೧. ಜನಸೇವೆ ಮಾಡಲು ಒಳ್ಳೆಯ ಅವಕಾಶ ದೊರೆತಿದೆ.

೨. ಸಾಮಾಜಿಕ ಮತ್ತು ರಾಜಕೀಯ ವ್ಯಕ್ತಿತ್ವವನ್ನು ಬೆಳಸಿಕೊಳ್ಳಲು ಒಳ್ಳೆಯ ಅವಕಾಶ.

೩. ರಾಜಕೀಯ ಅಧಿಕಾರದ ಅನುಭವ ಬೆಳೆಸಿಕೊಳ್ಳಲು ಒಳ್ಳೆಯ ಅವಕಾಶ ದೊರೆತಿದೆ.

೪. ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಅವಕಾಶ ದೊರೆತಿದೆ.

೫. ರಾಜಕೀಯ ಕ್ಷೇತ್ರದಲ್ಲಿ ಉನ್ನತ ಗುರಿ ಮುಟ್ಟಲು ಅವಕಾಶ ಒದಗಿದೆ.

೬. ರಾಜಕೀಯದಲ್ಲಿ ಸ್ವಜನರಿಗೆ ಸೇವೆ ಮಾಡಲು, ಕಾನೂನು ಅರಿಯಲು, ರಾಷ್ಟ್ರೀಯ ಮತ್ತು ಅಂತರರಾಷ್ಟ್ರಿಯ ರಾಜಕೀಯವನ್ನು ತಿಳಿದುಕೊಳ್ಳಲು ಅನುಕೂಲವಾಗಿದೆ.

ರಾಜಕೀಯದಲ್ಲಿ ಅನುಕೂಲಗಳು ಇರುವಂತೆ ಅನಾನುಕೂಲಗಳೂ ಇವೆ, ಎಂಬುದು ಪ್ರಸ್ತುತ ಕ್ಷೇತ್ರಕಾರ್ಯದಿಂದ ಸ್ವಷ್ಟವಾಗಿ ಮನವರಿಕೆಯಾಗಿದೆ. ಏಕೆಂದರೆ ಪ್ರಸ್ತುತ ಸಂಶೋಧನೆಯ ವ್ಯಾಪ್ತಿಯಲ್ಲಿ ಬರುವ ೨೮೩ ಗ್ರಾಮ ಪಂಚಾಯಿತಿ ಸದಸ್ಯರಲ್ಲಿ ರಾಜಕೀಯ ಅನಾನುಕುಲದ ಬಗ್ಗೆ ಪ್ರತಿಕ್ರಿಯೆ ನೀಡಿದ ಸದಸ್ಯರ ಸಂಖ್ಯೆ ೮೮ (೩೨%). ಇದರಿಂದ ಹೆಚ್ಚಿನ ಸದಸ್ಯರು ತಟಸ್ಥವಾಗಿ ಉಳಿದಿದ್ದಾರೆ, ಪ್ರಸ್ತುತ ಸಮೀಕ್ಷೆಯಿಂದ ಗಮನಕ್ಕೆ ಬಂದ ಸತ್ಯಾಂಶವೇನೆಂದರೆ ಹೆಚ್ಚಿನ ಸದಸ್ಯರಿಗೆ ರಾಜಕೀಯ ಪ್ರವೇಶದ ಅನುಕೂಲಗಳು ಮಾತ್ರಗೊತ್ತಿದ್ದು, ಅನಾನುಕೂಲದ ಪರಿಕಲ್ಪನೆ ಅವರಿಗೆ ಗೊತ್ತಿರಲ್ಲಿಕ್ಕಿಲ್ಲ ಅಥವಾ ಶೈಕ್ಷಣಿಕ ಕೊರತೆಯಿಂದ ಉತ್ತರಿಸುವ ಅಥವಾ ಆಲೋಚನೆ ಮಾಡಲು ಅವಕಾಶ ದೊರೆತಿಲ್ಲ ಎನಿಸುತ್ತದೆ. ಸದಸ್ಯರು ಉತ್ತರಿಸಿದ ಕೆಲವು ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ.

೧. ಸದಸ್ಯರಿಗೆ ನಿರಂತರ ಮಾನಸಿಕ ಅಶಾಂತಿ, ಕೆಲಸದ ಒತ್ತಡ ಹೆಚ್ಚಾಗಿದ್ದು ಮನಸ್ಸಿಗೆ ಶಾಂತಿ-ನೆಮ್ಮದಿ ಇರುವುದಿಲ್ಲ.

೨. ಮಹಿಳೆಯರಿಗೆ ರಾಜಕೀಯ ಸಲ್ಲದು ಏಕೆಂದರೆ ಅವರಿಗೆ ಸಕ್ರಿಯವಾಗಿ ಭಾಗವಹಿಸಲು ಆಗುವುದಿಲ್ಲ.

೩. ರಾಜಕೀಯ ಪ್ರವೇಶದಿಂದ ಸಂಬಂಧಿಕರಲ್ಲಿ, ಸ್ನೇಹಿತರಲ್ಲಿ ಮತ್ತು ಆತ್ಮೀಯರಲ್ಲಿ ದ್ವೇಷ ಭಾವನೆ ಬೆಳೆಸಿಕೊಳ್ಳುವದು ಅನಿವಾರ್ಯವಾಗಿರುತ್ತದೆ.

೪. ನೈತಿಕತೆಯ ಜೀವನವನ್ನು ರಾಜಕೀಯದಲ್ಲಿ ನಡೆಸುವುದು ಬಹಳ ಕಷ್ಟದಾಯಕವಾದದ್ದು.

೫. ನಿರಂತರವಾಗಿ ಜನರೊಂದಿಗೆ ಜಗಳ, ಭಯದ ವಾತಾವರಣ ಕೋರ್ಟು, ಕಛೇರಿ ಇತ್ಯಾದಿ ಅಂಶಗಳು ಸರ್ವೇಸಾಮಾನ್ಯ ವಾಗಿರುತ್ತವೆ.

೬. ಸ್ವಂತ ಮನೆಯ ಕೆಲಸಗಳಿಗೆ ಗಮನಕೊಡಲು ಆಗುವುದಿಲ್ಲ ಮತ್ತು ಮನೆಯವರ ಆತ್ಮೀಯತೆಯನ್ನು ಕಳೆದುಕೊಳ್ಳಬೇಕಾಗುತ್ತದೆ.

೭. ಆರ್ಥಿಕ, ಸಾಮಾಜಿಕ ಏಳು ಬೀಳುಗಳು ಸಹಜವಾಗಿದ್ದು ಆರ್ಥಿಕ ಅಭಿವೃದ್ಧಿ ಹೊಂದುವುದು ಸಾಧ್ಯವಿಲ್ಲ.

ಈ ಮೇಲಿನ ರೀತಿಯ ಉತ್ತರಗಳು ಸದಸ್ಯರು ಖುದ್ದಾಗಿ ವಿವರಿಸಿದ್ದು, ಪ್ರಸ್ತುತ ಸಮೀಕ್ಷೆಯಿಂದ ಸಂಗ್ರಹಿಸಲಾಗಿದೆ.

ಜಿಲ್ಲೆಯ ಗ್ರಾಮಪಂಚಾಯಿತಿಯ ಸದಸ್ಯರು ಸಾಧಿಸಿದ ಸಾಧನೆಗಳನ್ನು ಕುರಿತು ಮಾಹಿತಿಯನ್ನು ಸಂಗ್ರಹಿಸಲು ಕೇಳಿದ ಪ್ರಶ್ನೆಗಳಿಗೆ ಕೆಳ ಹಂತದಿಂದ ಮೇಲಿನ ಹಂತಕ್ಕೆ ಏರಬೇಕೆಂಬುದು ಪ್ರತಿಯೊಬ್ಬ ಸದಸ್ಯನ ಪ್ರಮುಖ ಗುರಿಯಾಗಿರುತ್ತದೆ. ಆದರೆ ಅವಕಾಶಗಳು ದೊರೆಯುವುದು ಮತ್ತು ದೊರೆತ ಅವಕಾಶಗಳನ್ನು ಸದ್ವಿನಿಯೋಗಮಾಡಿಕೊಳ್ಳುವುದು ಎಲ್ಲಾ ಸದಸ್ಯರಿಗೆ ಅಸಾಧ್ಯವಾದದ್ದು ಎಂದು ಉತ್ತರಿಸಿದ್ದಾರೆ. ಏಕೆಂದರೆ ಇಂದು ಸಂವಿಧಾನತ್ಮಕವಾಗಿ ಸೌಲಭ್ಯಗಳು ನಿರ್ಧರಿಸಲ್ಪಡುತ್ತವೆ . ಅದೇ ರೀತಿ ವಿವಿಧ ಗ್ರಾಪಂಚಾಯಿತಿಯಲ್ಲಿ ಬುಡಕಟ್ಟು ಸದಸ್ಯರಿಗೆ ಕೆಲವು ಅಧ್ಯಕ್ಷ ಮತ್ತು ಉಪಾಧ್ಯಕ್ಷ ಸ್ಥಾನಗಳು ಮೀಸಲಿಡಲಾಗಿದ್ದು ಅವುಗಳನ್ನು ಮಾತ್ರ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ. ಅಂತಹ ಸಾಧನೆಮಾಡಿದ ಸದಸ್ಯರ ಸಂಖ್ಯೆ ೬೬ ಇನ್ನು ಉಳಿದ ಸದಸ್ಯರು ಇಂತಹ ಸಾಧನೆ ಮಾಡುವುದರಲ್ಲಿ ಅಥವಾ ಸೌಲಭ್ಯ ಪಡೆಯುವುದರಲ್ಲಿ ವಂಚಿತರಾಗಿದ್ದಾರೆ. ಏಕೆಂದರೆ ಈ ಬುಡಕಟ್ಟು ಸಮುದಾಯ ಕಡಿಮೆ ಇದ್ದು ಮೇಲಿನ ಜಾತಿಯವರೊಡನೆ ಸ್ಪರ್ಧಿಸಿ ರಾಜಕೀಯ ಸಾಧನೆ ಮಾಡುವುದು ಕನಸಿನ ಮಾತಾಗಿದೆ ಎಂಬುವುದು ಈ ಕ್ಷೇತ್ರ ಕಾರ್ಯದಿಂದ ಸ್ಪಷ್ಟವಾಗಿದೆ.

ಗ್ರಾಮಪಂಚಾಯಿತಿ ಚುನಾವಣೆಯಲ್ಲಿ ಸ್ಪರ್ಧಿಸಿ, ಚುನಾಯಿತರಾಗಿ ಸೇವೆಯಲ್ಲಿ ನಿರತರಾಗಿರುವ ಸದಸ್ಯರು ೨೧೧ ಜನರಿದ್ದು ಉಳಿದ ಸದಸ್ಯರು ಹಲವಾರು ಕಾರಣಗಳಿಂದ ಜನಸೇವೆ ಮತ್ತು ಸಾರ್ವಜನಿಕ ಕಾರ್ಯಗಳನ್ನು ನಿರ್ವಹಿಸಲು ಆಗದಿರುವುದು ತಿಳಿದು ಬರುತ್ತದೆ. ಸಕ್ರಿಯವಾಗಿ ರಾಜಕೀಯದಲ್ಲಿ ಭಾಗವಹಿಸಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಮಾಡಿದ ಸದಸ್ಯರ ಸೇವಾ ವಿವರಣೆಗಳು ಈ ರೀತಿಯಾಗಿವೆ.

೧. ಬಡವರಿಗೆ ಹಾಗೂ ಕಡುಬಡವರಿಗೆ ಹಾಗೂ ಮನೆಯಿಲ್ಲದವರಿಗೆ ಆಶ್ರಯ ಯೋಜನೆ ಯಡಿಯಲ್ಲಿ ಮನೆಗಳನ್ನು ಮಾಡಿಸಿದ್ದೇವೆ.

೨. ಬುಡಕಟ್ಟಿನ ಪ್ರತಿಯೊಂದು ಮನೆಗೆ ಕಡಿಮೆದರದಲ್ಲಿ ರೇಷನ್ ಕೊಡಿಸುವುದರ ಸಲುವಾಗಿ ಹಸಿರು ಕಾರ್ಡ್ ಮಾಡಿಸಿದ್ದೇವೆ.

೩. ವೃದ್ಧರನ್ನು ಪತ್ತೆಹಚ್ಚಿ ಅವರಿಗೆ ವೃಧ್ಯಾಪ್ಯವೇತನವನ್ನು ದೊರಕುವಂತ ಮಾಡಿದ್ದೇವೆ.

೪. ಬಡತನ ರೇಖೆಯ ಕೆಳಗೆ ಜೀವಿಸುತ್ತಿರುವ ಜನರಿಗೆ ಭಾಗ್ಯಜ್ಯೋತಿಯ ವ್ಯವಸ್ಥೆಮಾಡಿಸಿ, ಕತ್ತಲೆಯ ಬಾಳಿಗೆ ಬೆಳಕು ನೀಡಲಾಗಿದೆ.

೫. ಚಿಕ್ಕವಯಸ್ಸಿನಲ್ಲಿ ವಿಧವೆಯರಾದ ಹೆಂಗಸರಿಗೆ ಜೀವನಾಧಾರವಾಗಿ ವಿಧವಾ ವೇತನ ಮಾಡಿಸಿದ್ದೇವೆ.

೬. ಭೂ ರಹಿತ ಬುಡಕಟ್ಟಿನ ಸಮುದಾಯಕ್ಕೆ ಸರಕಾರಿ ಭೂಮಿಯನ್ನು ಕೊಡಿಸಿದ್ದೇವೆ.

೭. ೫ ಎಕರೆಗಳಿಗಿಂತ ಕಡಿಮೆ ಭೂಮಿ ಇರುವ ಬಡ ರೈತರ ಜೀವನ ಮಟ್ಟವನ್ನು ಹೆಚ್ಚಿಸಲು ಸರಕಾರದ ಹಲವಾರು ಯೋಜನೆಗಳನ್ನು ಬುಡಕಟ್ಟು ಸದಸ್ಯರಿಗೆ ಸೂಕ್ತವಾದ ರೀತಿಯಲ್ಲಿ ದೊರೆಯುವಂತೆ ಮಾಡಿದ್ದೇವೆ.

ಉದಾ: ರಾಸಾಯನಿಕ ಗೊಬ್ಬರ, ಬ್ಯಾಂಕಿನಿಂದ ಎತ್ತುಗಳ ಸಲುವಾಗಿ ಸಾಲ ಹಾಗೂ ಪಶುಸಂಗೋಪನೆಗೆ ಅನುಕೂಲವಾಗುವ ಹಲವಾರು ರೀತಿಯ ಸೌಲಭ್ಯಗಳನ್ನು ಮಾಡಿಸಿದ್ದೇವೆ

**ಸಾಮೂಹಿಕ ಕಾರ್ಯಗಳು**

೧. ರಸ್ತೆಗಳ ನಿರ್ಮಾಣ ಮತ್ತು ದುರಸ್ತಿ.

೨. ಕುಡಿಯುವ ನೀರಿಗಾಗಿ ಕೊಳವೆ ಬಾವಿಗಳ ವ್ಯವಸ್ಥೆಮಾಡಿಸಲಾಗಿದೆ.

೩. ಕುಡಿಯುವ ನೀರಿಗೆ ಹಳೆಬಾವಿಗಳ ದುರಸ್ತಿ ಮತ್ತು ಹೊಸ ಬಾವಿಗಳ ನಿರ್ಮಾಣ.

೪. ಚರಂಡಿಗಳ ನಿರ್ಮಾಣ ಮತ್ತು ದುರಸ್ತಿ ಮಾಡಿಸಿದ್ದೇವೆ.

೫. ಸಾರ್ವಜನಿಕ ಕಟ್ಟಡಗಳಾದ ಶಾಲೆ, ಆಸ್ಪತ್ರೆ, ಪಂಚಾಯಿತಿ ಕಾರ್ಯಲಯ ಇತ್ಯಾದಿಗಳ ರಚನೆ ಮತ್ತು ದುರಸ್ತಿಮಾಡಿಸಿದ್ದೇವೆ.

೬. ನೀರನ ಟ್ಯಾಂಕ್, ಪೈಪ್‌ಲೈನ್ ವ್ಯವಸ್ಥೆ, ಗ್ರಂಥಾಲಯ ಇತ್ಯಾದಿಗಳ ನಿರ್ಮಾಣ.

೭. ದಾರಿ ದೀಪಗಳ ವ್ಯವಸ್ಥೆ .

೮. ಪ್ರಾಣಿಗಳ ಕುಡಿಯುವ ನೀರಿಗಾಗಿ ಸಾರ್ವಜನಿಕ ನೀರಿನ ತೊಟ್ಟಿಗಳನ್ನು ಮಾಡಿಸಿದ್ದೇವೆ.

೯. ಬಸ್ ನಿಲ್ದಾಣ, ಬಸ್ ವ್ಯವಸ್ಥೆ ಮತ್ತು ಮಹಿಳೆಯರ ಶೌಚಾಲಯಗಳನ್ನು ನಿರ್ಮಿಸಿದ್ದೇವೆ.

೧೦. ದೇವಾಲಯದ ಹಳೆಯ ಕಟ್ಟಡಗಳ ದುರಸ್ತಿಗಾಗಿ ಶ್ರಮಿಸಿದ್ದೇವೆ.

ಈ ಎಲ್ಲಾ ಕಾರ್ಯಗಳನ್ನು ಬುಡಕಟ್ಟು ಸದಸ್ಯರು ಸಾರ್ವಜನಿಕರಿಗಾಗಿ ನಿರ್ವಹಿಸಿದ್ದಾರೆ ಎನ್ನುವುದು ಪ್ರಸ್ತುತ ಸಮೀಕ್ಷೆಯಿಂದ ಕಂಡುಬಂದಿದೆ.

ಬುಡಕಟ್ಟು ಸಮುದಾಯದ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಸಮಸ್ಯೆಗಳು ಇರುವಂತೆ ರಾಜಕೀಯ ಜೀವನದಲ್ಲಿಯೂ ಸಮಸ್ಯೆಗಳು ಮತ್ತು ಅಡ್ಡಿಆತಂಕಗಳು ಇವೇ ಎಂಬುವುದು ಮನವರಿಕೆಯಾಗಿದೆ.

ಉತ್ತರಿಸಿದ ವಿಧಾನ ಮತ್ತು ಪ್ರತಿಕ್ರೀಯೆಗಳ ಆಧಾರದ ಮೇಲೆ ಸಂಗ್ರಹಿಸಿದ ಮಾಹಿತಿಯನ್ನು ಈ ರೀತಿಯಾಗಿ ವಿವರಿಸಲಾಗಿದೆ. ಅ ವಿಷಯಕ್ಕೆ ಸಂಬಂಧಿಸಿದಂತೆ ಬುಡಕಟ್ಟು ಸದಸ್ಯರು.

ಪ್ರಸ್ತುತ ಸಂಶೋಧನೆಯ ವ್ಯಾಪ್ತಿಗೆ ಸಂಬಂಧಿಸಿದ ಅಥವಾ ಒಳಪಟ್ಟ ಸದಸ್ಯರಲ್ಲಿ ೧೨೫ ಸದಸ್ಯರು ಅಲ್ಪ-ಸ್ವಲ್ಪ ಉತ್ತರಿಸಿದ್ದು, ಉಳಿದ ಸದಸ್ಯರು ಅದರ ಬಗ್ಗೆ ಯಾವುದೇ ರೀತಿಯ

ಪ್ರತಿಕ್ರೀಯ ತೋರಿಸಿರುವುದಿಲ್ಲ. ಇದರಿಂದ ರಾಜಕೀಯ ಪರಿಕಲ್ಪನೆ ಮತ್ತು ಅದರ ಸಮಸ್ಯೆಗಳ ಬಗ್ಗೆ ಬುಡಕಟ್ಟು ಸದಸ್ಯರಿಗೆ ತಿಳುವಳಿಕೆ ಕಡಿಮೆ ಇದೆ ಎಂದರೆ ತಪ್ಪಾಗಲಿಕ್ಕಿಲ್ಲ.

೧. ಬುಡಕಟ್ಟು ಸಮುದಾಯದ ಅಲ್ಪ ಜನಸಂಖ್ಯೆ ಇದ್ದು ಕೆಲವು ಊರುಗಳಲ್ಲಿ ಕೇವಲ ಒಂದು ಅಥವಾ ಎರಡು ಮನೆಗಳಿದ್ದು ಅವು ರಾಜಕೀಯ ದಿಂದ ದೂರ ಉಳಿದಿವೆ.

೨. ಬುಡಕಟ್ಟು ಸಮುದಾಯ ಈಗೀಗ ಗ್ರಾಮೀಣ ಬದುಕಿಗೆ ಮಾರುಹೋಗಿದ್ದು, ಅವರಿಗೆ ಸ್ವಂತ ಮನೆ, ಹೊಲ ಇಲ್ಲದಿರುವುದರಿಂದ ಆರ್ಥಿಕವಾಗಿ ತೀರಾ ಹಿಂದುಳಿದಿದ್ದಾರೆ.

೩. ಈ ಸಮುದಾಯದಲ್ಲಿ ಕೀಳರಿಮೆ ಹೆಚ್ಚಾಗಿದ್ದು ತಾವು ಕಡಿಮೆ ಎಂದು ಭಾವಿಸಿಕೊಂಡಿದ್ದಾರೆ.

೪. ಅಕ್ಷರ ಜ್ಞಾನ ಇಲ್ಲದಿರುವುದರಿಂದ ರಾಜಕೀಯವನ್ನು ತಿಳಿದುಕೊಳ್ಳುವುದು ಬಹಳ ಕಷ್ಟದಾಯಕವಾಗಿದೆ.

೫. ಮೇಲಿನ ಜಾತಿಯವರು ಈ ಸಮುದಾಯದವರನ್ನು ರಾಜಕೀಯವಾಗಿ ಬೆಳೆಯಲು ಬಿಡುವುದಿಲ್ಲ.

೬. ಇವರು ರಾಜಕೀಯವಾಗಿ ಬೆಳೆಯಲು ಗಾಡ್‌ಫಾದರ್ ಇಲ್ಲದಿರುವುದು ಮತ್ತೊಂದು ದೊಡ್ಡ ಸಮಸ್ಯೆಯಾಗಿದೆ.

೭. ಬುಡಕಟ್ಟನಲ್ಲಿ ಹಲವಾರು ಸಮುದಾಯಗಳು ಇರುವುದರಿಂದ ರಾಜಕೀಯವಾಗಿ ಬೆಳೆಯಲು ಬುಡಕಟ್ಟಿಗೆ ಸಮಸ್ಯೆ ಇದೆ.

**ರಾಜಕೀಯ ಮೀಸಲಾತಿಯಿಂದ ಬುಡಕಟ್ಟಿಗಾಗಿರುವ ಪ್ರಯೋಜನಗಳು**

ರಾಜಕೀಯ ಮತ್ತು ಅಧಿಕಾರದ ಗಂಧವೇ ಗೊತ್ತಿಲ್ಲದೆ ಬುಡಕಟ್ಟಿನವರಿಗೆ ಸರಕಾರ ರಾಜಕೀಯ ಕ್ಷೇತ್ರದಲ್ಲಿ ಮೀಸಲಾತಿಯನ್ನು ನಿರ್ಧರಿಸಿದೆ. ಪ್ರತಿಯೊಂದು ಸಮುದಾಯವು ರಾಜಕೀಯದಲ್ಲಿ ಭಾಗವಹಿಸಿ, ಕಾಯಿದೆ ಕಾನೂನುಗಳನ್ನು ಮಾಡುವುದರಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲಿ, ಪ್ರಜಾಪ್ರಭುತ್ವದ ಯಶಸ್ವಿಗೆ ಎಲ್ಲರೂ ಭಾಗವಹಿಸಬೇಕು ಎಂಬ ಉದ್ದೇಶದಿಂದ ಸಂವಿಧಾನಾತ್ಮಕವಾಗಿ ಈ ತೀರ್ಮಾನವನ್ನು ಕೈಗೊಂಡಿತು. ಇದರಿಂದ

ಇಂದು ಎಲ್ಲಾ ಸಮುದಾಯದವರು ಗ್ರಾಮ ಪಂಚಾಯಿತಿ, ತಾಲೂಕ ಪಂಚಾಯಿತಿ ಮತ್ತು ಜಿಲ್ಲಾ ಪಂಚಾಯಿತಿಗಳಲ್ಲಿ ಮೀಸಲಾತಿಯನ್ನು ಪಡೆದುಕೊಂಡಿದ್ದಾರೆ. ಬುಡಕಟ್ಟಿನವರಿಗೆ ಹಲವಾರು ರಾಜಕೀಯ ಸೌಲಭ್ಯಗಳನ್ನು ನೀಡಲಾಗಿದೆ. ಇಂತಹ ಸೌಲಭ್ಯ ಪಡೆದ ಸದಸ್ಯರಲ್ಲಿ ೮೩ ಜನರು ಮಾತ್ರ ಈ ಪ್ರಶ್ನೆಗೆ ಉತ್ತರಿಸಿದ್ದು ಅದರ ವಿವರಣೆ ಈ ರೀತಿ ನೀಡಲಾಗಿದೆ.

೧. ಪ್ರತಿಯೊಬ್ಬ ಬುಡಕಟ್ಟಿನ ಸದಸ್ಯರು ಸರಕಾರದ ಸೌಲಭ್ಯವನ್ನು ನ್ಯಾಯಯುತವಾಗಿ ಪಡೆದು ಕೊಳ್ಳಲಾಗಿದೆ.

೨. ಬುಡಕಟ್ಟು ಸಮುದಾಯಕ್ಕೆ ರಾಜಕೀಯ ಪ್ರಜ್ಞೆ, ಅನುಭವ, ಆಸಕ್ತಿ ಬೆಳೆಸಿಕೊಳ್ಳಲು ಬಹಳ ಅನುಕೂಲವಾಗಿದೆ.

೩. ಸದಸ್ಯರಿಗೆ ತಮ್ಮ ಹಕ್ಕು ಮತ್ತು ಕರ್ತವ್ಯಗಳನ್ನು ತಿಳಿದುಕೊಳ್ಳಲು ಪ್ರಯೋಜನಕಾರಿಯಾಗಿದೆ.

೪. ಬುಡಕಟ್ಟು ಬಾಂಧವರಲ್ಲಿ ಐಕ್ಯತೆಯನ್ನು ಬೆಳೆಸಲು ಅನುಕೂಲವಾಗಿದೆ.

೫. ರಾಜಕೀಯ ಅಧಿಕಾರ, ಆಡಳಿತ, ಜನಸೇವೆ, ಸಮುದಾಯದ ಸೇವೆ ಇತ್ಯಾದಿ ಸೇವೆ ಮಾಡಲು ಅವಕಾಶ ದೊರೆತಿದೆ

೬. ಮುಂಬರುವ ಬುಡಕಟ್ಟು ಸಮುದಾಯದ ಯುವ ಪೀಳಿಗೆಗೆ ರಾಜಕೀಯವಾಗಿ ಬೆಳೆಯಲು ಉತ್ತಮ ಅವಕಾಶ ದೊರೆತಿದೆ.

೭. ರಾಜಕೀಯದಿಂದ ಅಲ್ಪ-ಸ್ವಲ್ಪ ಆರ್ಥಿಕ ಅಭಿವೃದ್ಧಿ ಹೊಂದಲು ಅವಕಾಶ ದೊರೆತಂತಾಗಿದೆ.

೮. ಕಾನೂನು, ಕಾಯಿದೆ ಇವುಗಳನ್ನು ತಿಳಿದುಕೊಂಡು ಉತ್ತಮ ನಾಗರಿಕನಾಗಿ ಬಾಳಲು ಅವಕಾಶ ಲಭಿಸಿದಂತಾಗಿದೆ.

ಬುಡಕಟ್ಟು ರಾಜಕೀಯ ಪ್ರಯೋಜನೆಗಳ ಕುರಿತು ಕೇಳಿದಾಗ ಹಲವಾರು ಬುಡಕಟ್ಟಿನ ಗ್ರಾಮ ಪಂಚಾಯಿತಿ ಸದಸ್ಯರಲ್ಲಿ ಹೆಚ್ಚಿನ ಸದಸ್ಯರು ಅನಕ್ಷರಸ್ಥರು ಇದ್ದು, ಆಳವಾದ ಅರ್ಥವನ್ನು ಒಳಗೊಂಡಿರುವ ಈ ಪ್ರಶ್ನೆಗಳಿಗೆ ಉತ್ತರಿಸಲಾಗಿಲ್ಲ. ಕೇವಲ ಕೆಲವು ಸದಸ್ಯರು ಮಾತ್ರ ಉತ್ತರಿಸಿದ್ದು ಇನ್ನುಳಿದ ಸದಸ್ಯರು ಇದರಿಂದ ತಟಸ್ಥವಾಗಿ ಉಳಿದಿದ್ದಾರೆ.

೧. ಸದಸ್ಯರ ಸ್ಥಾನಗಳಿಗೆ ಕಡ್ಡಾಯವಾಗಿ ಮೀಸಲಾತಿಯನ್ನು ಒದಗಿಸುವುದು.

೨. ಆಡಳಿತ ಮತ್ತು ಅಧಿಕಾರದಲ್ಲಿ ಮೀಸಲಾತಿಯನ್ನು ಒದಗಿಸಿ ಬುಡಕಟ್ಟು ಸದಸ್ಯರಿಗೆ ಪ್ರೇರಣೆ- ಪ್ರೋತ್ಸಾಹ ನೀಡುವುದು.

೩. ಸಂವಿಧಾನಾತ್ಮಕವಾಗಿ ಬುಡಕಟ್ಟಿನ ಸಮುದಾಯಕ್ಕೆ ರಾಜಕೀಯ ಸೌಲಭ್ಯಗಳನ್ನು ನೀಡುವುದು.

ಪ್ರಸ್ತುತ ಕ್ಷೇತ್ರ ಕಾರ್ಯದಲ್ಲಿ ಸದಸ್ಯರನ್ನು ಸಂದರ್ಶಿಸಿದಾಗ ಪ್ರತ್ಯೇಕವಾಗಿ ಸದಸ್ಯರಿಂದ ಹೊರಬಿದ್ದ ಪ್ರತಿಕ್ರೀಯೆಗಳನ್ನು ಸಂಗ್ರಹಿಸಲಾಗಿದ್ದು, ೨೬೯ ಜನ ಸದಸ್ಯರು ಸಕರಾತ್ಮಕವಾಗಿ ಉತ್ತರಿಸಿದ್ದಾರೆ. ಉಳಿದ ೧೪ ಜನರು ನಕರಾತ್ಮಕವಾಗಿ ಉತ್ತರಿಸಿದ್ದಾರೆ.

ಮೇಲಿನ ಪ್ರತಿಕ್ರಿಯೆಯನ್ನು ಸಮೀಕ್ಷೆ ಮಾಡಲಾಗಿದ್ದು ಹಲವಾರು ವರ್ಷಗಳಿಂದ ರಾಜಕೀಯವಾಗಿ ಮತ್ತು ಅಭಿವೃದ್ಧಿಯ ದೃಷ್ಟಿಯಿಂದ ಹಿಂದುಳಿದ ಈ ಸಮುದಾಯ ಈಗ ರಾಜಕೀಯ ಮೀಸಲಾತಿಯ ಸೌಲಭ್ಯವನ್ನು ಪಡೆದುಕೊಂಡು ಆಯಾ ಸಮುದಾಯದ ಸೇವೆಯನ್ನು ಪ್ರಾಮಾಣಿಕವಾಗಿ ಮಾಡುತ್ತಿದ್ದಾರೆ ಎಂಬುವುದು ಕಂಡುಬಂದಿದೆ. ಅಷ್ಟೇ ಅಲ್ಲದೆ ಬುಡಕಟ್ಟು ಸಮುದಾಯದ ಬಗ್ಗೆ ಕಳಕಳಿ, ಅನುಕಂಪ, ಸುಧಾರಿಸುವ ಮನೋಭಾವನೆ ಇತ್ಯಾದಿ ಅಂಶಗಳು ಸದಸ್ಯರಲ್ಲಿ ಕಂಡು ಬರುತ್ತದೆ.

**ಬುಡಕಟ್ಟೇತರ ಸದಸ್ಯರು ಬುಡಕಟ್ಟು ಸದಸ್ಯರನ್ನು ನೋಡುವ ದೃಷ್ಟಿಕೋನ**

"ಅಧಿಕಾರಕ್ಕಾಗಿ ಹೋರಾಟ" ಎಂಬುವುದು ರಾಜಕೀಯದಲ್ಲಿ ಒಬ್ಬ ವ್ಯಕ್ತಿಯ ಮತ್ತೊಬ್ಬ ವ್ಯಕ್ತಿಯ ವಿರುದ್ಧ ನಿರಂತರ ಹೋರಾಟ ಮಾಡುತ್ತಲೇ ಇರುತ್ತಾನೆ. ಮತ್ತೊಬ್ಬ ವ್ಯಕ್ತಿಯ ಜಾತಿ, ಆರ್ಥಿಕ ವ್ಯವಸ್ಥೆ, ಸಾಮಾಜಿಕ ಹಂತಸ್ಸು ಇತ್ಯಾದಿ ಸಮಸ್ಯೆಗಳನ್ನು ಜನರ ಮುಂದೆ ಹೇಳಿ ತಾನೇ ಶ್ರೇಷ್ಠ ಎಂಬ ಭಾವನೆಯನ್ನು ಬಿಂಬಿಸುವುದು ಮಾನವನ ಸಹಜ ಗುಣವಾಗಿದೆ. ಇಂತಹ ಮೂಲಾಂಶಗಳನ್ನು ಹೊರತೆಗೆಯಲು ಕೇಳಿದ ಪ್ರಶ್ನೆಗೆ ವಿವರಣೆ ನೀಡಿದ ಸದಸ್ಯರು ಬಹಳ ಕಡಿಮೆ ಏಕೆಂದರೆ ಪ್ರಸ್ತುತ ಸಂದರ್ಶನಕ್ಕೆ ಹೋದಾಗ ಸಂಶೋಧಕನ ಮುಂದೆ ಉತ್ತರಿಸಲು ಕೆಲವು ಸದಸ್ಯರು ಹಿಂಜರಿದಿದ್ದಾರೆ. ಆದರೂ ಸಹ ಧೈರ್ಯಮಾಡಿ ಉತ್ತರಿಸಿದ ಸದಸ್ಯರ ಸಂಖ್ಯೆ ೪೨ (೧೫%) ಇದ್ದು ಅದರ ವಿವರಣೆ ಈ ರೀತಿ ಇದೆ.

೧. ಮೇಲಿನ ಜಾತಿಯ ಸದಸ್ಯರು ಬುಡಕಟ್ಟು ಸದಸ್ಯರನ್ನು ತಮ್ಮ ಕೈಗೊಂಬೆಯಾಗಿ ಮಾಡಿ ಕೊಂಡಿರುತ್ತಾನೆ.

೨. ಬುಡಕಟ್ಟು ಸದಸ್ಯರಿಗೆ ಆಡಳಿತದಲ್ಲಾಗಲ್ಲೀ ಹಾಗೂ ರಾಜಕೀಯದಲ್ಲಾಗಲೀ ಮೋಸ ಕಂಡುಬರುವುದಿಲ್ಲ. ಆದ್ದರಿಂದ ಈ ಜನರಿಗೆ ರಾಜಕೀಯ ಪರಿಕಲ್ಪನೆ ಇಲ್ಲ ಎಂದು ಭಾವಿಸುತ್ತಾರೆ.

೩. ಈ ಬುಡಕಟ್ಟು ಸಮುದಾಯವು ನೈತಿಕತೆಯಿಂದ ರಾಜಕೀಯ ನಡೆಸುವುದಿಲ್ಲ. ಆದ್ದರಿಂದ ಈ ಸಮುದಾಯವನ್ನು ಮುಂದೆ ಮಾಡಿ ಇತರ ಜಾತಿಯ ಸದಸ್ಯರು ಹಲವಾರು ಸೌಲಭ್ಯಗಳನ್ನು ಪಡೆದುಕೊಂಡಿದ್ದು ನಮ್ಮ ಗಮನಕ್ಕೆ ಬಂದಿದೆ.

**ಬುಡಕಟ್ಟು ರಾಜಕಾರಣಿಗಳಿಗೆ ಆಡಳಿತಾಂಗದ ಬೆಂಬಲ!**

"ರಾಜಕೀಯ ಮತ್ತು ಆಡಳಿತಾಂಗ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ" ಎಂಬ ಹೇಳಿಕೆಯಂತೆ, ಜನಸೇವೆ ಮಾಡಲು ರಾಜಕೀಯ ನಾಯಕರಿಗೆ ಆಡಳಿತಾಂಗದ ಬೆಂಬಲ ಬೇಕು. ಏಕೆಂದರೆ ರಾಜಕಾರಣಿಗಳ ಬೆಳವಣಿಗೆ ಆಡಳಿತಾಂಗದ ಬೆಂಬಲವು ಇಂಧನ ಇದ್ದಂತೆ. ಶೇಕಡಾ ೮೭ ಜನ ಸದಸ್ಯರು ರಾಜಕೀಯಕ್ಕೆ ಅಡಳಿತಾಂಗದ ಬೆಂಬಲ ಪಡೆದು ಕೊಂಡರೆ ಉಳಿದ ೧೩ ಪ್ರತಿಶತ ಸದಸ್ಯರು ಅದರಿಂದ ವಂಚಿತರಾಗಿದ್ದಾರೆ. ಹೆಚ್ಚಿನ ಬುಡಕಟ್ಟು ಸದಸ್ಯರು ಸಕ್ರೀಯವಾಗಿ ಜನಸೇವೆ ಮಾಡಿ ರಾಜಕೀಯದಲ್ಲಿ ಭಾಗವಹಿಸುವುದರಿಂದ ಆಡಳಿತಾಂಗದ ಬೆಂಬಲ ಇದೆ ಎಂದು ಪತ್ತೆಯಾಗಿದೆ.

ನಮ್ಮ ಸಂವಿಧಾನ ಜಾರಿಗೆ ಬಂದಾಗ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಠ ಪಂಗಡದವರ ಅಭಿವೃದ್ಧಿಗಾಗಿ ಕೆಲವು ಸ್ಥಾನಗಳಲ್ಲಿ ಮೀಸಲಾತಿ ನೀಡಲಾಗಿತ್ತು. ಅದೇ ರೀತಿಯಾಗಿ ರಾಜಕೀಯ ಕ್ಷೇತ್ರದಲ್ಲಿ ಕೆಲವು ಮೀಸಲಾತಿ ನಿಗದಿಪಡಿಸಲಾಗಿದೆ. ಒಂದು ವೇಳೆ ಈ ವ್ಯವಸ್ಥೆಯನ್ನು ರದ್ದುಗೊಳಿಸಿದಾಗ ಬಡುಕಟ್ಟು ಸಮುದಾಯ ಮಾಡಿಕೊಳ್ಳಬಯಸುವ ಪ್ರರ್‍ಯಾಯ ವ್ಯವಸ್ಥೆ ಕುರಿತು ಕೆಲವೇ ಸದಸ್ಯರು ಮಾತ್ರ ಉತ್ತರಿಸಿದ್ದಾರೆ. ಹೆಚ್ಚಿನ ಸದಸ್ಯರು ಇದರಿಂದ ತಾಟಸ್ಥ್ಯವಾಗಿ ಉಳಿದಿದ್ದಾರೆ.

೧. ಬುಡಕಟ್ಟು ಸಮುದಾಯದ ಸಂಘಟನೆಗಳನ್ನು ರಚಿಸಿಕೊಳ್ಳುವುದು ಮತ್ತು ಎಲ್ಲಾ ಸದಸ್ಯರು ಇಂತಹ ಸಂಘಟನೆಗಾಗಿ ಶ್ರಮಿಸುವುದು.

೨. ಬುಡಕಟ್ಟು ಸಮುದಾಯದ ಸಂವಿಧಾನಾತ್ಮಕ ಸೌಲಭ್ಯಗಳಿಗಾಗಿ ಶ್ರಮಿಸುವಂತೆ ಪ್ರೇರೇಪಿಸುವುದು.

೩. ಬುಡಕಟ್ಟು ಜನಾಂಗದಲ್ಲಿ ಒಗ್ಗಟ್ಟು, ಐಕ್ಯತೆ ಮೂಡಿಸುವುದು.

೪. ಸಮುದಾಯಗಳಿಗೆ ಕಾನೂನು, ಕಾಯಿದೆ, ಹಕ್ಕುಗಳ ಬಗ್ಗೆ ಪ್ರಜ್ಞೆ ಮೂಡಿಸುವುದು.

೫. ಪ್ರತಿಯೊಬ್ಬ ನಾಗರಿಕನು ಕಡ್ಡಾಯವಾಗಿ ಶಿಕ್ಷಣವನ್ನು ಪಡೆದುಕೊಳ್ಳುವಂತೆ ಒತ್ತಾಯಿಸುವುದು.

ರಾಜಕೀಯದಲ್ಲಿ ಮಹಿಳಾ ಮೀಸಲಾತಿ, “ಮಹಿಳೆ ಅಬಲೆ ಅಲ್ಲ ಸಬಲೆ” ಇದನ್ನು ಸಾಬೀತು ಪಡಿಸಿದವರು ಬುಡಕಟ್ಟು ಸಮುದಾಯದ ಗ್ರಾಮ ಪಂಚಾಯಿತಿ ಸದಸ್ಯರು. ರಾಜಕೀಯದಲ್ಲಿ ಮಹಿಳೆ ಸಕ್ರಿಯವಾಗಿ ಭಾಗವಹಿಸುತ್ತಾಳೆ ಎಂದು ಶೇಕಡಾ ೭೫ ಜನ ಸದಸ್ಯರು ಅಭಿಪ್ರಾಯ ವ್ಯಕ್ತ ಪಡಿಸಿದ್ದಾರೆ. ಇವರು ಮಹಿಳಾ ರಾಜಕೀಯಕ್ಕೆ ಬೆಂಬಲ ನೀಡಿದರೆ ಉಳಿದ ಸದಸ್ಯರು ನಕಾರಾತ್ಮಕ ಉತ್ತರವನ್ನು ನೀಡಿದ್ದಾರೆ. ಇದರಿಂದ ನಮಗೆ ತಿಳಿಯುವುದೇನೆಂದರೆ ಮಹಿಳೆಯೂ ಸಹ ಪುರುಷನಿಗೆ ಸರಿಸಮಾನ ರೀತಿಯಲ್ಲಿ ರಾಜಕೀಯಲ್ಲಿ ಭಾಗವಹಿಸಿ ಅಧಿಕಾರ, ಆಡಳಿತ, ಜನ ಸೇವೆ ಇತ್ಯಾದಿ ಕ್ಷೇತ್ರದಲ್ಲಿ ನಿರಂತರ ಸೇವೆಮಾಡುತ್ತಿರುವುದು ಪ್ರಸ್ತುತ ರಾಜಕೀಯ ವಿದ್ಯಮಾನಗಳಿಂದ ತಿಳಿದು ಬರುತ್ತದೆ.

ರಾಜಕೀಯ ಪಕ್ಷಾಂತರ ಅವಶ್ಯಕ ಅಥವಾ ಅನಾವಶ್ಯಕ ಎಂದು ಕೇಳಿದಾಗ, ಇದಕ್ಕೆ ಉತ್ತರಿಸಿದ ಸದಸ್ಯರ ಸಂಖ್ಯೆ ೧೯೫ (೬೫%) ಜನ ಸದಸ್ಯರು “ರಾಜಕೀಯದಲ್ಲಿ ಯಾರೂ ಸ್ನೇಹಿತರಲ್ಲ ಯಾರೂ ವೈರಿಗಳಲ್ಲ” ಎಂಬುವಂತೆ ಗೆದ್ದ ಎತ್ತಿನ ಬಾಲ ಹಿಡಿಯುವ ಹಲವಾರು ಜನ ಸದಸ್ಯರು ರಾಜಕೀಯದಲ್ಲಿ ಕಂಡು ಬರುವುದು ಸರ್ವೇಸಾಮಾನ್ಯ.

೧. ರಾಜಕೀಯವು ನಿರಂತರವಾಗಿ ಪರಿವರ್ತನೆ ಹೊಂದುತ್ತಿರುತ್ತದೆ.

೨. ಪಕ್ಷ ಬದಲಾಯಿಸಿದರೂ ಆದರ್ಶಗಳನ್ನು ಬದಲಾಯಿಸಬಾರದು.

೩. ಕೆಲವು ಕಡೆ ಪಕ್ಷ ನೋಡಿ ಮತ ನೀಡಿದರೆ, ಮತ್ತೆ ಕೆಲವು ಕಡೆ ವ್ಯಕ್ತಿಯನ್ನು ನೋಡಿ ಮತ ನೀಡುತ್ತಾರೆ.

ರಾಜಕೀಯದಲ್ಲಿ ಸ್ಥಿರತೆ ಇರಬೇಕು ಆಗಮಾತ್ರ ಜನ ಗೌರವಿಸುತ್ತಾರೆ, ಆದರಿಸುತ್ತಾರೆ. ಇಲ್ಲದಿದ್ದರೆ ಗೋಮುಖ ವ್ಯಾಘ್ರ ಎಂದು ಕರೆದು ಮುಂದೆ ಬರುವ ಚುನಾವಣೆಯಲ್ಲಿ ತಕ್ಕ ಪಾಠ ಕಲಿಸುವರು ಎಂಬುದಕ್ಕೆ ಗತಿಸಿಹೋದ ಚುನಾವಣೆಗಳನ್ನು ಪರಿಶೀಲಿಸಿದಾಗ ತಿಳಿದುಬರುತ್ತದೆ. "ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯ" ಎಂಬಂತೆ ಒಂದು ರಾಜಕೀಯ ಪಕ್ಷದಲ್ಲಿ ಇದ್ದುಕೊಂಡು ಜನ ಸೇವೆ ಮಾಡಲು ಆಗದಿರುವ ಸದಸ್ಯರು ಬೇರೆ ಪಕ್ಷ ಸೇರಿಕೊಂಡ ಮಾತ್ರಕ್ಕೆ ಅವರಿಂದ ಸೇವೆ ಸಲ್ಲಿಸಲು ಸಾಧ್ಯವಿಲ್ಲ ಎಂದು ಜನ ಭಾವಿಸಿಕೊಂಡಿರುವುದು ವಿದಿತವಾಗುತ್ತದೆ.

ರಾಜಕೀಯ ಯಾವುದೇ ಹಂತದಲ್ಲಿ ಸದಸ್ಯರ ಹಿರಿಯರಾಗಲಿ ಅಥವಾ ಗಾಡ್‌ಫಾದರ್ ಆಗಲಿ ಇರದಿದ್ದರೆ ಅ ಸಮುದಾಯಕ್ಕೆ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಿ, ರಾಜಕೀಯ ವಾಗಿ ಬೆಳೆಯಲು ಯಾವುದೇ ರೀತಿಯ ಅವಕಾಶಗಳು ಇರುವದಿಲ್ಲ.

ಸರಕಾರ ಸಂವಿಧಾನಾತ್ಮಕವಾಗಿ ಬುಡಕಟ್ಟು ಸದಸ್ಯರಿಗೆ ಮೀಸಲಾತಿ ಆಧಾರದ ಮೇಲೆ ರಾಜಕೀಯದಲ್ಲಿ ಭಾಗವಹಿಸಲು ಅವಕಾಶ ಮಾಡಿರುವುದರಿಂದ ಈಗೀಗ ಜಿಲ್ಲೆಯ ಎಲ್ಲಾ ತಾಲೂಕಗಳಲ್ಲಿ ಬುಡಕಟ್ಟು ಸದಸ್ಯರು ರಾಜಕೀಯದಲ್ಲಿ ಕಾಣಿಸುತ್ತಿರುವುದು, ಈ ಸಮೀಕ್ಷೆ ಯಿಂದ ತಿಳಿದುಬರುತ್ತದೆ.

ರಾಜಕೀಯವು ಹುಟ್ಟಿದಾಗಿನಿಂದ ಪ್ರಾರಂಭವಾಗಿ ಸಾಯುವವರೆಗೆ ಮನುಷ್ಯನ ಜೀವನದಲ್ಲಿ ಅಳವಡಿಸಿಕೊಂಡಿರುತ್ತದೆ ಎಂಬುದು ಈ ಸಮೀಕ್ಷೆಯಿಂದ ತಿಳಿದುಬರುತ್ತದೆ. ಏಕೆಂದರೆ ಈ ಸಂಶೋಧನೆಯ ವ್ಯಾಪ್ತಿಯಲ್ಲಿ ಶೇಕಡಾ ೭೦ ಜನ ಸದಸ್ಯರು ತಮ್ಮ ಮಕ್ಕಳು ರಾಜಕೀಯದಲ್ಲಿ ಭಾಗವಹಿಸಲಿ ಎಂದು ಹೇಳಿದ್ದಾರೆ. ಇದರಿಂದ ಈ ಸದಸ್ಯರಲ್ಲಿ ರಾಜಕೀಯ ಆಸಕ್ತಿ, ಅಭಿರುಚಿ ಮತ್ತು ಸೇವಾ ಮನೋಭಾವನೆ ಮೂಡಿದೆ ಎಂದು ತಿಳಿದುಬರುತ್ತದೆ.

ನಕಾರಾತ್ಮಕವಾಗಿ ಉತ್ತರಿಸಿದ ಉಳಿದ ಸದಸ್ಯರು ತಮ್ಮ ಮಕ್ಕಳು ರಾಜಕೀಯ ಕಪಟತನದಿಂದ ದೂರವಿರಲಿ, ಇದರಲ್ಲಿ ಬರೀ ಮೋಸ, ಅನ್ಯಾಯ ಇತ್ಯಾದಿ ಮನೆಮಾಡಿಕೊಂಡಿದ್ದು

ಆರ್ಥಿಕವಾಗಿ ಅಭಿವೃದ್ಧಿ ಹೊಂದಲು ಹಾಗೂ ಜೀವನದಲ್ಲಿ ನೈತಿಕತೆ ಬೆಳೆಸಿಕೊಳ್ಳಲು, ಶಾಂತಿ ಹಾಗೂ ನೆಮ್ಮದಿಯ ಜೀವನ ನಡೆಸಲು ರಾಜಕೀಯದಿಂದ ಸಾಧ್ಯವಿಲ್ಲ ಎಂದಿದ್ದಾರೆ.

ಪ್ರಾಚೀನ ಕಾಲದಿಂದಲೂ ಆಯಾ ಸಮುದಾಯಗಳಲ್ಲಿ ಜಾತಿ ಪಂಚಾಯಿತಿ ರೂಢಿಯಲ್ಲಿ ಇದ್ದುದು ನಮಗೆ ಇತಿಹಾಸದ ಪುಟಗಳಿಂದ ತಿಳಿದುಬರುತ್ತದೆ. ಆದರೆ ಈಗೀಗ ಕಾಯಿದೆ, ಕಾನೂನು, ಪೋಲೀಸ್ ಸ್ಟೇಷನ್, ನ್ಯಾಯಾಲಯ ಹುಟ್ಟಿಕೊಂಡು ಜಾತಿ ಪಂಚಾಯಿತಿಯು ಗ್ರಾಮೀಣ ಜೀವನದಲ್ಲಿ ಕಣ್ಮರೆಯಾಗುತ್ತಿದ್ದು ತನ್ನ ಮಹತ್ವವನ್ನು ಕಳೆದುಕೊಂಡಿದೆ. ಹಿಂದಿನ ಕಾಲದಲ್ಲಿ ಎಂತಹ ಗಂಭೀರ ಸಮಸ್ಯೆ ಇದ್ದರೂ ಸಹ ಊರಿನ ಪಂಚರ ಸಮ್ಮುಖದಲ್ಲಿ ಸಾಕ್ಷ್ಯಾಧಾರಗಳ ಸಮೇತ ಮುಕ್ತವಾಗಿ ಸಮಸ್ಯೆಯನ್ನು ಪರಿಹಾರ ಮಾಡುತ್ತಿದ್ದರು. ಅಂತಹ ಪಂಚಾಯಿತಿಗಳ ಬಗ್ಗೆ ಪ್ರಶ್ನೆ ಕೇಳಿದಾಗ ಈಗಲೂ ಜಾತಿಪಂಚಾಯಿತಿಗಳು ತಕ್ಕಮಟ್ಟಿಗೆ ಕಾರ್ಯನಿರ್ವಹಿಸುತ್ತಿವೆ ಎಂದು ಹೇಳಿದವರು ಶೇಕಡಾ ೧೦ ಜನ ಸದಸ್ಯರು ಉಳಿದ ೯೦ ಜನ ಸದಸ್ಯರು ಜಾತಿ ಪಂಚಾಯಿತಿ ರೂಢಿಯಲ್ಲಿ ಇಲ್ಲ ಎಂದು ಹೇಳುತ್ತಾರೆ ಎಂದರೆ ಈಗ ಜಾತಿ ಪಂಚಾಯಿತಿ ಕಣ್ಮರೆಯಾಗುತ್ತಿವೆ. ಇನ್ನು ಕೆಲವು ಕಡೆ ಇದ್ದರೂ ಗೊತ್ತಿಲ್ಲದ ರೀತಿಯಲ್ಲಿ ಜನ ಜೀವಿಸುತ್ತಿರುವುದು ಈ ಸಂಶೋಧನೆಯಿಂದ ತಿಳಿದುಬರುತ್ತದೆ. ಸಣ್ಣ ಪುಟ್ಟ ಘಟನೆಗಳನ್ನು ಜನ ಕೋರ್ಟಿನ ಕಟಕಟೆಯಲ್ಲಿ ನಿಂತು ಪರಿಹಾರ ಮಾಡಿಕೊಳ್ಳುತ್ತಾರೆ. ಇದರಿಂದ ಪಂಚಾಯಿತಿ ತನ್ನ ಮಹತ್ವವನ್ನು ಕಳೆದುಕೊಂಡಿದೆ.

ಗುಲ್ಬರ್ಗಾ ಜಿಲ್ಲೆಯ ಕೆಲವು ಭಾಗಗಳಲ್ಲಿ ಇನ್ನೂ ಬುಡಕಟ್ಟು ಸಮುದಾಯದಲ್ಲಿ ಜಾತಿ ಪಂಚಾಯಿತಿಗಳು ಅಲ್ಲಲ್ಲಿ ಕಂಡು ಬರುತ್ತಿವೆ. ಅಷ್ಟೇ ಅಲ್ಲದೆ ಸಮುದಾಯಿಕ ಕಾರ್ಯಗಳನ್ನು ಯಶಸ್ವಿಯಾಗಿ ಮತ್ತು ಮುಕ್ತವಾಗಿ ನಿರ್ವಹಿಸಿದ ಸಂಗತಿಗಳು ಕಂಡುಬಂದಿವೆ. ಈ ಜಾತಿ ಪಂಚಾಯಿತಿ ನಿರ್ವಹಿಸುವ ಕಾರ್ಯಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧. ಬುಡಕಟ್ಟಿನ ಕೌಟುಂಬಿಕ ಕಲಹದ ಸಮಸ್ಯೆಗಳನ್ನು ಮುಕ್ತವಾಗಿ ಪರಿಹಾರ ಮಾಡುವುದು.

೨. ವಿವಾಹ ವಿಚ್ಛೇದನೆ ಮತ್ತು ಮರು ಮದುವೆ ಇತ್ಯಾದಿ ದೂರುಗಳನ್ನು ಆಲೋಚಿಸಿ, ಚರ್ಚಿಸಿ, ತೀರ್ಮಾನಿಸುವುದು.

೩. ಬುಡಕಟ್ಟು ಸಮುದಾಯದಲ್ಲಿ ಉದ್ಭವಿಸುವ ಸಮಸ್ಯೆಗಳಾದ ಮನೆ, ಆಸ್ತಿ ಹಂಚಿಕೆ ಇತ್ಯಾದಿ ಬಗೆಹರಿಸುವುದು.

೪. ಜಾತಿಯಲ್ಲಿ ಬರುವ ವತನುದಾರಿಕೆ, ಉತ್ತರಾಧಿಕಾರ, ಗುಡಿ-ಗುಂಡಾರಗಳ ಪೂಜೆ ಇತ್ಯಾದಿ ಸಮಸ್ಯೆಗಳನ್ನು ನಿರ್ಧರಿಸುವುದು.

ಜಾತಿಪಂಚಾಯಿತಿ ಬೇಕು, ಅವು ಮುಂದುವರಿಯಬೇಕು ಎಂದು ಅಸಕ್ತಿ ತೋರಿಸಿದ ಸದಸ್ಯರು ೧೮೧ (೬೦%) ಇನ್ನುಳಿದ ಸದಸ್ಯರು ಬೇಡ ಎಂದು ಉತ್ತರಿಸಿದ್ದಾರೆ. ಇದರಿಂದ ಹೆಚ್ಚಿನ ಪ್ರಮಾಣದ ಸದಸ್ಯರು ಜಾತಿ ಪಂಚಾಯಿತಿಯ ಮಹತ್ವವನ್ನು ಅರಿತಿದ್ದಾರೆ. ಏಕೆಂದರೆ ಈಗ ಜಾರಿಯಲ್ಲಿರುವ ಪೋಲೀಸ್ ಸ್ಟೇಷನ್ ಹಾಗೂ ಕಛೇರಿಗಳು ಕೊಡುವ ತೊಂದರೆಗಳು ಈ ಸದಸ್ಯರಿಗೆ ಸರಿಯಾಗಿ ಮನವರಿಕೆಯಾಗಿವೆ.

೧. ಬುಡಕಟ್ಟಿನ ಸಮಸ್ಯೆಗಳನ್ನು ಪಂಚಾಯಿತಿಯಲ್ಲಿ ಪಂಚರ ಸಮಕ್ಷಮದಲ್ಲಿ ಸಾಕ್ಷ್ಯಾಧಾರಗಳ ಸಮೇತ ಬಗೆಹರಿಸುವುದು ಸೂಕ್ತ ಎಂದಿದ್ದಾರೆ. ಏಕೆಂದರೆ ಇದರಿಂದ ವೆಚ್ಚ ಉಳಿತಾಯವಾಗು ವುದಲ್ಲದೆ ತಮ್ಮ ಮರ್ಯಾದೆ ಬೀದಿಪಾಲಾಗುವುದು ತಪ್ಪುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾರೆ.

೨. ಮುಕ್ತವಾಗಿ ಹಾಗೂ ಸಮುದಾಯದ ಶ್ರೀಮಂತ ಮತ್ತು ಬಡವರು ಎನ್ನದೆ ಎಲ್ಲರಿಗೂ ನ್ಯಾಯ ದೊರೆಯುವುದು.

೩. ನ್ಯಾಯಾಲಯದಿಂದ ಉಂಟಾಗುವ ಅಲೆದಾಟ, ವೆಚ್ಚವನ್ನು ತಪ್ಪಿಸುವುದಲ್ಲದೆ ಜಾತಿಪಂಚಾಯಿತಿಗೆ ಅಲ್ಲಿನ ಸಮಸ್ಯೆಗಳ ಸ್ಥಿತಿಗತಿ ಸ್ಪಷ್ಟ ಅರಿವು ಇರುವುದರಿಂದ ನಿಶ್ಚಿತವಾಗಿ ಸೂಕ್ತ ನ್ಯಾಯ ಒದಗಿಸುವುದು ಜಾತಿ ಪಂಚಾಯಿತಿಗೆ ಮಾತ್ರ ಸಾಧ್ಯ ಎಂದು ಪ್ರತಿಕ್ರಿಯಿಸಲಾಗಿದೆ.

**ಉಪಸಂಹಾರ**

ಗುಲ್ಬರ್ಗಾ ಜಿಲ್ಲೆಯ ಹತ್ತು ತಾಲೂಕಗಳಲ್ಲಿ ಪ್ರಸ್ತುತವಾಗಿ ಕಾರ್ಯನಿರತರಾದ ೨೮೩ ಗ್ರಾಮ ಪಂಚಾಯಿತಿಯ ಸದಸ್ಯರನ್ನು ಭೇಟಿಮಾಡಿ, ಈ ಕ್ಷೇತ್ರಕಾರ್ಯಕ್ಕಾಗಿ ತಯಾರಿಸಿದ

ಪ್ರಶ್ನಾವಳಿಯ ೩೨ ಪ್ರಶ್ನೆಗಳ ಪಟ್ಟಿಯನ್ನು ಸದಸ್ಯರಿಗೆ ಕೇಳಿ ಸಂಗ್ರಹಿಸಿದ ಬುಡಕಟ್ಟು ಸಮುದಾಯದ ರಾಜಕೀಯ ಪ್ರಜ್ಞೆ, ಆಸಕ್ತಿ ಮತ್ತು ಅಭಿರುಚಿ ಹಾಗೂ ರಾಜಕೀಯ ಮತ್ತು ಆಡಳಿತಾತ್ಮಕ ಕ್ಷೇತ್ರದಲ್ಲಿ ಅವರ ಪಾತ್ರವನ್ನು ಕುರಿತು ಸಂಗ್ರಹಿಸಿದ ಮಾಹಿತಿಯ ವರಧಿಯ ವಿವರಣೆ.

"Something is better than nothing" ಎಂಬುವಂತೆ ಈ ಸಮುದಾಯದ ಹಲವಾರು ಸದಸ್ಯರು ಈ ಪ್ರಶ್ನಾವಳಿಗೆ ನೀಡಿದ ಸಂದರ್ಶನದ ಶೈಲಿಯು ಬಹಳ ಆಕರ್ಷಣೀಯ ವಾಗಿತ್ತು. ಏಕೆಂದರೆ ಅವರು ಉತ್ತರಿಸುವ ರೀತಿ ಗಂಭೀರತೆ, ಬಳಸುವ ಪದಗಳು ಹಿರಿಯ ಮತ್ತು ಅನುಭವಸ್ಥ ರಾಜಕಾರಣಿಗಳನ್ನು ಮೀರಿಸುವಂತಿತ್ತು. ಹಲವಾರುಜನ ಸದಸ್ಯರು ಸೂಕ್ತವಾದ ಮತ್ತು ಯೋಗ್ಯವಾದ ಉತ್ತರಗಳನ್ನು ನೀಡಿದ್ದಾರೆ. ಇದರಿಂದ ತಿಳಿದುಬರುವುದೇ ನೆಂದರೆ ಈ ಸಮುದಾಯಗಳು ಸಹ ದೇಶದ ಮತ್ತು ರಾಜ್ಯದ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಲು ಅರ್ಹರಾಗಿದ್ದಾರೆ. ಸದಸ್ಯರ ಅನುಭವ, ಸೇವಾ ಮನೋಭಾವನೆ ಮತ್ತು ಕಾಯಿದೆ, ಕಾನೂನುಗಳ ಜ್ಞಾನವು ಇವರ ರಾಜಕೀಯ ಬೆಳವಣಿಗೆಗೆ ಪ್ರತ್ಯಕ್ಷ ಸಾಕ್ಷಿಯಾಗಿತ್ತು. "ಜನ ಸೇವೆಯೇ ಜನಾರ್ಧನ ಸೇವೆ " ಎಂಬ ನುಡಿಯನ್ನು ಈ ಬುಡಕಟ್ಟು ಸದಸ್ಯರು ತಮ್ಮ ಜೀವನದಲ್ಲಿ ಅಳವಡಿಸಿ ಕೊಂಡಿದ್ದಾರೆ "ನುಡಿದಂತೆ ನಡೆ " ಎನ್ನುವಂತೆ ಚುನಾವಣೆಗಿಂತ ಮುಂಚೆ ಜನರಿಗೆ ಕೊಟ್ಟ ಮಾತುಗಳನ್ನು ಉಳಿಸಿಕೊಳ್ಳಲು ನಿರಂತರವಾಗಿ ಶ್ರಮಿಸುತ್ತಿರುವುದು ಈ ಸಮೀಕ್ಷೆಯಿಂದ ಕಂಡುಬಂದ ಪ್ರತ್ಯಕ್ಷ ಸಾಕ್ಷಿಯಾಗಿದೆ.

ಅಲ್ಪ ಸ್ವಲ್ಪ ಸದಸ್ಯರು ಈ ಪ್ರಶ್ನಾವಳಿಗೆ ಪ್ರತಿಕ್ರಿಯಿಸದೆ ಇರುವುದು ಎದ್ದು ಕಂಡಿದೆ. ಅನಕ್ಷರತೆ, ಅಜ್ಞಾನ ಮತ್ತು ರಾಜಕೀಯ ಪ್ರಜ್ಞೆ ಇಲ್ಲದಿರುವುದು ಇದಕ್ಕೆ ಕಾರಣವಾಗಿದೆ. ಏನೇ ಆಗಲಿ ಪ್ರಸ್ತುತ ಕ್ಷೇತ್ರ ಕಾರ್ಯ ಮತ್ತು ಸಂಶೋಧನೆಯ ಗುರಿ ಹಾಗೂ ಉದ್ದೇಶಗಳು ಯಶಸ್ವಿಯಾಗಿ ನಿರ್ವಹಿಸಲು ಈ ಬುಡಕಟ್ಟು ಸಮುದಾಯದ ಸದಸ್ಯರು ಸಾಕಷ್ಟು ಸಹಕರಿಸಿದ್ದಾರೆ.

## ೪.೧೩. ಗುಲಬರ್ಗಾ ಜಿಲ್ಲೆಯ ತಾಲೂಕ ಪಂಚಾಯಿತಿ ಮತ್ತು ಬುಡಕಟ್ಟು

### ಗುಲಬರ್ಗಾ ಜಿಲ್ಲೆಯ ೦೯ ಜನ ಟಿ.ಪಿ. ಸದಸ್ಯರ ಸಂಕ್ಷಿಪ್ತ ಮಾಹಿತಿ

### ಕೋಷ್ಟಕ ೪.೧೨

### ಗುಲಬರ್ಗಾ ಜಿಲ್ಲೆಯ ತಾಲೂಕು ಪಂಚಾಯಿತಿ ಬುಡಕಟ್ಟು ಸದಸ್ಯರ ಮಾಹಿತಿ

| ಕ್ರ. ಸಂ. | ಸದಸ್ಯರ ಹೆಸರು | ಸದಸ್ಯತ್ವ | ಸ್ಥಾನ | ಮತಕ್ಷೇತ್ರ | ತಾಲೂಕ | ಸಾಮಾನ್ಯ/ ಮೀಸಲು | ಜಾತಿ | ರಾಜಕೀಯ ಪಕ್ಷ | ವಿದ್ಯಾರ್ಹತೆ |
|---|---|---|---|---|---|---|---|---|---|
| ೦೧ | ಮಹಾದೇವಿ | T. P. | ಸದಸ್ಯರು | ಅವರಾದ್ | ಗುಲಬರ್ಗಾ | ಮೀಸಲು | ಬೇಡರು | ಕಾಂಗ್ರೇಸ್ | ೦೪ |
| ೦೨ | ಶ್ಯಾಮಬಾಯಿ/ಶಿವಣ್ಣ | T. P. | ಸದಸ್ಯರು | ಬಿಬ್ಬಳ್ಳಿ | ಸೇಡಂ | ಮೀಸಲು | ಬೇಡರು | ಕಾಂಗ್ರೇಸ್ | -- |
| ೦೩ | ಹಣ್ಮಂತ್ರಾಯದೊರೆ | T. P. | ಅಧ್ಯಕ್ಷರು (ಸಾಮಾನ್ಯ) | ವನದುರ್ಗಾ | ಶಹಾಪುರ | ಮೀಸಲು | ಬೇಡರು | ಕಾಂಗ್ರೇಸ್ | ೧೦ |
| ೦೪ | ಹಯ್ಯಳಪ್ಪ ನಾಯಕ | T. P. | ಸದಸ್ಯರು | ಹಳಿಸಗರ | ಶಹಾಪುರ | ಮೀಸಲು | ಬೇಡರು | ಕಾಂಗ್ರೇಸ್ | ೧೦ |
| ೦೫ | ದೇವಿಂದ್ರಪ್ಪ ಗೌಡ | T. P. | ಸದಸ್ಯರು | ವಾಗಣಗೇರಿ | ಸುರುಪುರ | ಮೀಸಲು | ಬೇಡರು | ಕಾಂಗ್ರೇಸ್ | ೦೭ |
| ೦೬ | ಗುಂಡಮ್ಮ ಯಂಕಪ್ಪ | T. P. | ಉಪಾಧ್ಯಕ್ಷ (ಮೀಸಲು) | ಗೋಡ್ರ್ಯಾಳ | ಸುರುಪುರ | ಮೀಸಲು | ಬೇಡರು | ಕಾಂಗ್ರೇಸ್ | ೦೫ |
| ೦೭ | ರಾಣಿ ರಂಗಮ್ಮ | T. P. | ಸದಸ್ಯರು | ಕೊಡೇಕಲ್ | ಸುರುಪುರ | ಮೀಸಲು | ಬೇಡರು | ಕಾಂಗ್ರೇಸ್ | ೦೪ |
| ೦೮ | ಬಾಲಪ್ಪ ಬಚವಾರ | T. P. | ಅಧ್ಯಕ್ಷರು ಮತ್ತು ಉಪಾಧ್ಯಕ್ಷ (ಮೀಸಲು) | ಹತ್ತಿಕುಣಿ | ಯಾದಗಿರಿ | ಮೀಸಲು | ಬೇಡರು | ಕಾಂಗ್ರೇಸ್ | ೦೫ |
| ೦೯ | ವಿಜಯಲಕ್ಷ್ಮಿ ಮಹಾದೇವಪ್ಪ | T. P. | ಅಧ್ಯಕ್ಷರು (ಮೀಸಲು) | ವರ್ಕನಹಳ್ಳಿ | ಯಾದಗಿರಿ | ಮೀಸಲು | ಬೇಡರು | ಕಾಂಗ್ರೇಸ್ | ಬಿ. ಎ. |

೧೯೯೩ರ ಪಂಚಾಯಿತ್ ರಾಜ್ ಅಧಿನಿಯಮದ ಪ್ರಕಾರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಹತ್ತು ತಾಲೂಕಗಳಲ್ಲಿ, ತಾಲೂಕ ಪಂಚಾಯಿತ ಸಮಿತಿಗಳನ್ನು ರಚಿಸಲಾಗಿದ್ದು, ತಾಲೂಕಿನ ಎಲ್ಲಾ ಮತದಾರರಿಂದ ಆಯ್ಕೆಯಾದ ಸದಸ್ಯರು ಈ ಸಮೀತಿಯಲ್ಲಿ ಇದ್ದಾರೆ. ಸ್ಥಳೀಯ ಸರಕಾರದ ಎರಡನೇ ಹಂತವೇ ತಾಲೂಕ ಪಂಚಾಯಿತಿ. ಇದರಲ್ಲಿ ಎಲ್ಲಾ ಸಮುದಾಯಗಳಿಗೆ ಮೀಸಲಾತಿ ಯನ್ನು ಒದಗಿಸಿರುವಂತೆ. ಬುಡಕಟ್ಟಿನವರಿಗೆ ಸಹಿತ ಪ್ರತಿ ಶತ ೩% ಮೀಸಲಾತಿಯನ್ನು ನೀಡಲಾಗಿದೆ.

ಜಿಲ್ಲೆಯಲ್ಲಿ ಬುಡಕಟ್ಟು ಸ್ಥಾನಗಳು ಮೀಸಲಿರಿಸಲಾಗಿದ್ದು. ಅವರಿಗೆ ಪ್ರಜಾಪ್ರಭುತ್ವ ಮತ್ತು ರಾಜಕೀಯದಲ್ಲಿ ಸಕ್ರೀಯವಾಗಿ ಭಾಗವಹಿಸುವ ಅವಕಾಶ ಕಲ್ಪಿಸಿ ಕೊಡಲಾಗಿದೆ. ಜಿಲ್ಲೆಯಲ್ಲಿ

ತಾ.ಪಂ. ಸ್ಥಾನಗಳಿಗೆ ಸ್ಪರ್ಧೆಯಾಗಿದ್ದು ಆಯ್ಕೆಯಾಗಿರುವ ಸದಸ್ಯರ ಮಾಹಿತಿಯನ್ನು (ಪಟ್ಟಿನೋಡಿ) ಕೆಳಗಿನಂತೆ ವಿವರಿಸಲಾಗಿದೆ.

**ಸದಸ್ಯರ ಸಂಕ್ಷಿಪ್ತ ಮಾಹಿತಿ :** ಗುಲಬರ್ಗಾ ಜಿಲ್ಲೆಯ ಹತ್ತು ತಾಲೂಕಿನಲ್ಲಿ ೧೯ ಜನ ತಾಲೂಕ ಪಂಚಾಯಿತಿ ಬುಡಕಟ್ಟು ಸದಸ್ಯರಿದ್ದಾರೆ. ಈ ಸ್ಥಾನಗಳನ್ನು ೧೯೯೧ರ ಜನಗಣತಿಯ ಆಧಾರದ ಮೇಲೆ ಮೀಸಲಾತಿಯನ್ನು ನಿರ್ಧರಿಸಲಾಗಿದ್ದು ಬುಡಕಟ್ಟುಗಳಲ್ಲಿ ಕೇವಲ ಒಂದೇ ಬುಡಕಟ್ಟು ಮಾತ್ರ ಈ ರಾಜಕೀಯ ಮೀಸಲಾತಿಯನ್ನು ಪಡೆದುಕೊಂಡಿದ್ದು ಉಳಿದ ಸಮುದಾಯಗಳು ದೂರ ಉಳಿಯಲು ಹಲವಾರು ಕಾರಣಗಳಿವೆ. ತಾಲೂಕ ಪಂಚಾಯತಿಯ ಸಮೀತಿಗೆ ಜಿಲ್ಲೆಯಲ್ಲಿ ಆಯ್ಕೆಯಾಗಿರುವ ಸದಸ್ಯರಲ್ಲಿ ಎಲ್ಲಾ ಸ್ಥಾನಗಳು ಮೀಸಲಾತಿಯಿಂದ ಆಯ್ಕೆಯಾಗಿದ್ದು ಯಾವದೇ ಸ್ಥಾನ ಸಾಮಾನ್ಯ ಕ್ಷೇತ್ರದಿಂದ ಆಯ್ಕೆಯಾಗದಿರುವದು ಪ್ರಸ್ತುತ ಸಮೀಕ್ಷೆಯಿಂದ ಕಂಡುಬಂದಿದೆ.

ತಾ.ಪಂ. ಸದಸ್ಯರಲ್ಲಿ ೫ ಸ್ಥಾನಗಳು ಮಹಿಳೆಯರಿಗೆ ಮೀಸಲಾಗಿದ್ದು ಉಳಿದ ನಾಲ್ಕು (೪) ಸ್ಥಾನಗಳು ಪುರುಷರಿಗೆ ಮೀಸಲಾಗಿವೆ. ಈ ಸದಸ್ಯರ ಪೈಕಿ ಬುಡಕಟ್ಟು ಜನಸಂಖ್ಯೆಯ ಆಧಾರದ ಮೇಲೆ ಅತೀ ಹೆಚ್ಚು ಸ್ಥಾನಗಳು, ಸುರುಪುರು ತಾಲೂಕದಿಂದ ಎಂದರೆ ೦೩ ಸ್ಥಾನಗಳು, ೨ಸ್ಥಾನ ಶಾಹಾಪೂರ, ೨ ಸ್ಥಾನಗಳು ಯಾದಗಿರಿ ಮತ್ತು ಒಂದೊಂದು ಸ್ಥಾನಗಳು ಸೇಡಂ ಮತ್ತು ಗುಲಬರ್ಗಾದಲ್ಲಿ ಇರುವುದು ಕಂಡುಬಂದಿದೆ. ಅದೇ ರೀತಿ ಸುರುಪುರ ಮತ್ತು ಯಾದಗಿರಿ ಸಮಿತಿಯಲ್ಲಿ ಅಧ್ಯಕ್ಷ ಸ್ಥಾನಗಳು ಮೀಸಲಿದ್ದು ಶಹಾಪೂರ ತಾ.ಪಂ.ಯಲ್ಲಿ ಸಾಮಾನ್ಯ ಸ್ಥಾನಕ್ಕೆ ಅಧ್ಯಕ್ಷನಾಗಿ ಆಯ್ಕೆಯಾಗಿರುವದು ಆಶ್ಚರ್ಯದ ಸಂಗತಿಯೇ ಸರಿ. ಏಕೆಂದರೆ ಈ ಬುಡಕಟ್ಟು ಅಭ್ಯರ್ಥಿಯು ಕಾಂಗ್ರೆಸ್ ಪಕ್ಷದಿಂದ ಆಯ್ಕೆಯಾಗಿದ್ದು ಆ ಸಮಯದಲ್ಲಿ ಉತ್ತಮ ನಾಯಕರೆನಿಸಿದ ಶ್ರೀ ಹಣ್ಮಂತ ದೊರೆ ವನದುರ್ಗ ಇವರಿಗೆ ಅವಕಾಶ ದೊರೆತಿರುವದು ಬುಡಕಟ್ಟಿನವರ ರಾಜಕೀಯ ಇತಿಹಾಸಕ್ಕೆ ಒಂದು ಹೊಸ ತಿರುವು ದೊರೆತಂತಾಗಿದೆ. ಏಕೆಂದರೆ ಹಲವಾರು ವರ್ಷಗಳು ಕಾಡಿನಲ್ಲಿ ಅಲೆದು ನಾಗರಿಕತೆಯ ಗಂಧನೆ ಅರಿಯದೆ ಅಲೆಮಾರಿಗಳಿಗೆ ರಾಜಕೀಯದಲ್ಲಿ ಅವಕಾಶ ಸಿಕ್ಕಿರುವದು ಪ್ರಜಾಪ್ರಭುತ್ವದಲ್ಲಿ ಪ್ರಸ್ತುತ ಬದಲಾವಣೆಗಳಲ್ಲಿ ಇದು ಒಂದಾಗಿದೆ.

**ಬೇಡ ಸಮುದಾಯ ತಾ.ಪಂ.ಯಲ್ಲಿ ಸಕ್ರೀಯವಾಗಿ ಭಾಗವಹಿಸಲು ಹಲವಾರು ಕಾರಣಗಳಿವೆ**

೧. ೧೯೯೧ರ ಜನಗಣತಿಯ ಪ್ರಕಾರ ಎಲ್ಲಾ ಬುಡಕಟ್ಟುಗಳಿಗಿಂತ ಬೇಡ ಸಮುದಾಯದ ಜನಸಂಖ್ಯೆ ಹೆಚ್ಚಿದವು ಒಂದು ಪ್ರಮುಖ ಕಾರಣವಾಗಿದೆ.

೨. ಜಿಲ್ಲೆಯ ಆರ್ಥಿಕ ಸ್ಥಿತಿ ಗತಿಯನ್ನು ಕುರಿತು ಸಮೀಕ್ಷೆ ಮಾಡಿದಾಗ ಈ ಸಮುದಾಯ ಎಲ್ಲಾ ಸಮುದಾಯಗಳಿಗಿಂತ ಉತ್ತಮವಾಗಿರುವದು ಕಂಡುಬಂದಿದೆ.

೩. ಈ ಸಮುದಾಯ ಜಿಲ್ಲೆಯ ಎಲ್ಲಾ ತಾಲೂಕಗಳಲ್ಲಿ ವ್ಯಾಪಿಸಿದ್ದು ಮನೆ, ಹೊಲ, ಬಾವಿ ಮತ್ತಿತರ  ಸ್ಥಿರಾಸ್ತಿಯನ್ನು ಹೊಂದಿದ್ದಾರೆ.

೪. ಸಮೀಕ್ಷೆಯ ವ್ಯಾಪ್ತಿಯಲ್ಲಿ ಬರುವ ಬುಡಕಟ್ಟು ಅಕ್ಷರಸ್ತರ ಮತ್ತು ಸರಕಾರಿ ಉದ್ಯೋಗ ಪಡೆದವರ ಸಂಖ್ಯೆಯಲ್ಲಿ ಬೇಡ ಸಮುದಾಯದ ಪ್ರಮಾಣ ೭೦%ರ ಇದೆ.

೫. ಸುರುಪುರ ಮತ್ತು ಶಹಾಪೂರ ಕೆಲವು ಭಾಗದಲ್ಲಿ ಬೇಡ ಸಮುದಾಯ ಪ್ರಾಂತ್ಯಗಳನ್ನು ಕಟ್ಟಿ ಆಡಳಿತ ಮಾಡಿರುವುದು ಇತಿಹಾಸದಿಂದ ಕಂಡುಬಂದಿದೆ. ಆದ್ದರಿಂದ ಆಡಳಿತ, ಅಧಿಕಾರ, ರಾಜಕೀಯ ಇತ್ಯಾದಿಗಳ ಕಲ್ಪನೆ ಈ ಸಮುದಾಯಕ್ಕೆ ಇದೆ. ಇತರ ಸಮುದಾಯಗಳಿಗೆ ಇದರ ಪ್ರಮಾಣ ಬಹಳ ಕಡಿಮೆ ಇರುವುದು ಕಂಡುಬಂದಿದೆ.

೬. ಜಿಲ್ಲೆಯ ಪ್ರಮುಖ ತಾಲೂಕಗಳಾದ ಸುರುಪುರ, ಶಹಾಪೂರ ಮತ್ತು ಯಾದಗಿರಿಯಲ್ಲಿ ಈ ಬೇಡ ಸಮುದಾಯ ಹೆಚ್ಚಿದ್ದು ಎಂ.ಎಲ್.ಎ. ಮತ್ತು ಎಂ.ಪಿ. ಹಾಗೂ ಸಚಿವರಾಗಿ ಸೇವೆ ಸಲ್ಲಿಸಿ ಆಳವಾದ ಅನುಭವ ಪಡೆದಿರುವುದು ಸ್ಥಳೀಯ ಸರಕಾರಗಳಲ್ಲಿ ಪ್ರಮುಖ ಪಾತ್ರ ನಿರ್ವಹಿಸುವುದು ಈ ಸಮುದಾಯದ ಆದ್ಯಕರ್ತವ್ಯ ಎಂಬ ಭಾವನೆ ಬರುವದು ಸಹಜ.

೭. ಜಿಲ್ಲೆಯ ಇತರ ಬುಡಕಟ್ಟುಗಳು ಕಡಿಮೆ ಜನಸಂಖ್ಯೆ ಹೊಂದಿದ್ದು ಈಗೀಗ ಒಂದು ಕಡೆ ನೆಲೆನಿಂತು ಜೀವನ ಸಾಗಿಸುವುದರ ಜೊತೆಗೆ ಯಾವದೇ ರೀತಿಯ ಸ್ಥಿರಾಸ್ತಿ ಹೊಂದದಿರುವುದು ಬೇಡ ಸಮುದಾಯಕ್ಕೆ ಹೆಚ್ಚಿನ ಲಾಭವಾಗಿದೆ.

**ಬುಡಕಟ್ಟು ತಾಲೂಕ ಪಂಚಾಯಿತಿ ಸದಸ್ಯರು ನಿರ್ವಹಿಸಿದ ಕಾರ್ಯಗಳು**

೧. ಆಶ್ರಯ ಯೋಜನೆಯಡಿ ಬಡವರಿಗೆ ಮನೆಗಳ ನಿರ್ಮಾಣ.

೨. ಹಸಿರು ಕಾರ್ಡು ಒದಗಿಸುವದು, ವಿಧವೆಯರಿಗೆ ಮತ್ತು ಮುದುಕರಿಗೆ ಪೆನ್‌ಶನ್ ಕೊಡಿಸುವುದು.

೩. ಪರಿಶಿಷ್ಠ ಪಂಗಡದವರಿಗೆ ಹಾಸ್ಟಲ್, ವಿದ್ಯಾರ್ಥಿ ವೇತನ ಇತ್ಯಾದಿ ಸೌಲಭ್ಯ ದೊರಕಿಸಿ ಕೊಡುವುದು.

೪. ಗಂಗಾ ಕಲ್ಯಾಣ ಯೋಜನೆಯಲ್ಲಿ ಕೊಳವೆ ಬಾವಿ ಮತ್ತು ಪಂಪಸೆಟ್ ಕೊಡಿಸುವುದು.

೫. ಬಡವರಿಗೆ ಸರಕಾರಿ ಜಮೀನು ನೀಡುವುದು.

೬. ಪಶುಸಂಗೋಪನೆಗೆ ಬ್ಯಾಂಕ್‌ನಲ್ಲಿ ಸಾಲ ದೊರಕಿಸಿ ಕೊಡುವುದು.

೭. ಎತ್ತು ಬಂಡಿ, ಇತ್ಯಾದಿ ಕೊಂಡುಕೊಳ್ಳಲು ವಸೂಲಿ ನೀಡುವುದು.

೮. ಜೈವಿಕ ಅನಿಲ ಹೊಂದುವಂತೆ ಸರಕಾರದಿಂದ ಹಣಮಂಜೂರಿ ಮಾಡಿಸುವುದು.

೯. ಬುಡಕಟ್ಟು ಸಮುದಾಯಗಳಿಗೆ ಅನ್ಯಾಯವಾಗದಂತೆ ಸಾಮಾಜಿಕ ನ್ಯಾಯ ಒದಗಿಸುವುದು.

**ಸಾರ್ವಜನಿಕ ಕಾರ್ಯಗಳು**

೧. ರಸ್ತೆ ದುರಸ್ತಿ ಮತ್ತು ನಿರ್ಮಾಣ

೨. ಬಸ್ಸ್ ನಿಲ್ದಾಣಗಳ ರಚನೆ (ಕಟ್ಟುವದು)

೩. ಕುಡಿಯುವ ನೀರಿಗಾಗಿ ಕೊಳವೆಬಾವಿಗಳ ರಚನೆ.

೪. ನೀರಿನ ಅನುಕೂಲಕ್ಕಾಗಿ ಪೈಪ್‌ಲೈನ್ ನಿರ್ಮಾಣ ಮತ್ತು ನೀರಿನ ಟ್ಯಾಂಕ್ ರಚನೆ.

೫. ಚರಂಡಿಗಳ ನಿರ್ಮಾಣ, ಮತ್ತು ಸ್ವಚ್ಛತೆ.

೬. ಗ್ರಂಥಾಲಯಗಳ ರಚನೆ ಮತ್ತು ಮೇಲ್ವಿಚಾರಣೆ.

೭. ಕಡುಬಡವರಿಗೆ ಆಶ್ರಯ ಯೋಜನೆಯಲ್ಲಿ ಮನೆಗಳನ್ನು ಒದಗಿಸುವದು.

೮. ಸರಕಾರಿ ಕಟ್ಟಡಗಳಾದ ಶಾಲೆ, ಆಸ್ಪತ್ರೆ, ಪಂಚಾಯಿತಿ ಇತ್ಯಾದಿಗಳ ದುರಸ್ತಿ ಮತ್ತು ನಿರ್ಮಾಣ.

೯. ಪ್ರಯಾಣಿಕರಿಗೆ ಅನುಕೂಲವಾಗಲು ರಸ್ತೆಯ ಪಕ್ಕದಲ್ಲಿ ಸಾಲು ಮರಗಳ ಸ್ಥಾಪನೆ.

**ಉಪಸಂಹಾರ**

"ಅನುಭವ ಇದ್ದಲ್ಲಿ ಅಮೃತವಿರುತ್ತದೆ". ಎಂಬುವಂತೆ ಬುಡಕಟ್ಟು ಸದಸ್ಯರ ಅನುಭವ ಮತ್ತು ಈ ಸಮೀಕ್ಷೆಯಲ್ಲಿ ಸಂದರ್ಶನದ ವೇಳೆಯಲ್ಲಿ ಅವರು ಬಳಸುವ ಇಂಗ್ಲೀಷ್ ಮತ್ತು ಕನ್ನಡ ಶಬ್ಧಗಳು ಅವರ ರಾಜಕೀಯ ಅನುಭವಕ್ಕೆ ಉತ್ತಮ ಸಾಕ್ಷಿಯಾಗಿದೆ. ಅಲ್ಪ ಸ್ವಲ್ಪ ಅಕ್ಷರ ಕಲಿತ ವ್ಯಕ್ತಿಗಳು ಬಳಸುವ ಆಡಳಿತಾತ್ಮಕ ಮತ್ತು ಕಾಯಿದೆ, ಕಾನುನೂಗಳ ಪದಗಳು ನಿಜವಾಗಲೂ ಆಶ್ಚರ್ಯವನ್ನು ಉಂಟು ಮಾಡಿಸುತ್ತವೆ.

## ೪.೧೪. ಜಿಲ್ಲಾ ಪಂಚಾಯತ್ - ೧೯೯೩ ಗುಲಬರ್ಗಾ ಜಿಲ್ಲೆಯ ಬುಡಕಟ್ಟು ಸದಸ್ಯರ ಮಾಹಿತಿ

ಗ್ರಾಮ ರಾಜ್ಯದ ಸ್ಥಾಪನೆ ಗಾಂಧೀಜಿಯವರ ಕನಸು ನನಸನ್ನಾಗಿ ಮಾಡುವದೇ ಕರ್ನಾಟಕ ಸರಕಾರದ ಗುರಿ. ಈ ನಿಟ್ಟಿನಲ್ಲಿ ಸರಕಾರವು ಅಧಿಕಾರದ ವಿಕೇಂದ್ರಿಕರಣಗೊಳಿಸುವ ಸಲುವಾಗಿ ಮೂರು ಹಂತದ ಸ್ಥಳೀಯ ಸರಕಾರವನ್ನು ರಚಿಸಲಾಗಿದೆ. ಗ್ರಾಮೀಣ ಮಟ್ಟದ ಜನಗಳು ಸರಕಾರಿ ಕಾರ್ಯದಲ್ಲಿ ಸಕ್ರಿಯವಾಗಿ ಭಾಗವಹಿಸಲು ಅವಕಾಶ ಒದಗಿಸುವದೇ ಇದರ ಪ್ರಮುಖ ಗುರಿಯಾಗಿದೆ. ಆದ್ದರಿಂದ ಮೂರು ಹಂತಗಳಲ್ಲಿ ಗ್ರಾ.ಪಂ., ತಾ.ಪಂ. ಮತ್ತು ಜಿ.ಪಂ. ಗಳನ್ನು ರಚಿಸಿ ಬುಡಕಟ್ಟು ಸಮುದಾಯಗಳಿಗೆ ಮೀಸಲಾತಿ ಸೌಲಭ್ಯ ಕಲ್ಪಿಸಿಕೊಡಲಾಗಿದೆ. ಪ್ರಜಾಪ್ರಭುತ್ವದ ಯಶಸ್ವಿ ಕೇವಲ ಒಂದು ಜಾತಿ ಅಥವಾ ಜನಾಂಗವನ್ನು ಅವಲಂಬಿಸಿರದೆ ಎಲ್ಲಾ ಜನಾಂಗವನ್ನು ಮತ್ತು ಜಾತಿಯನ್ನು ಅವಲಂಬಿಸಿದೆ.

೧೯೯೩ರಲ್ಲಿ ಪಂಚಾಯಿತ್ ಅಧಿನಿಯಮದ ಪ್ರಕಾರ ಗುಲಬರ್ಗಾ ಜಿಲ್ಲೆಯ ಜಿ.ಪಂ. ಚುನಾವಣೆಯಲ್ಲಿ ೩% ಸ್ಥಾನಗಳನ್ನು ಬುಡಕಟ್ಟು ಜನಾಂಗದವರಿಗೆ ಮೀಸಲಾತಿ ನೀಡಿ ಸಕ್ರೀಯವಾಗಿ ರಾಜಕೀಯದಲ್ಲಿ ಭಾಗವಹಿಸುವುದರ ಜೊತೆಗೆ ಅಧಿಕಾರದಲ್ಲಿ ಸದುಪಯೋಗ ಪಡೆಯುವಂತೆ ಅವಕಾಶ ಕಲ್ಪಿಸಿಕೊಡಲಾಗಿದೆ. ಪ್ರಸ್ತುತ ಸಂಶೋಧನೆಯ ವ್ಯಾಪ್ತಿಯಲ್ಲಿ ಗುಲಬರ್ಗಾ ಜಿಲ್ಲಾ ಪಂಚಾಯತ್ ಬುಡಕಟ್ಟು ಸದಸ್ಯರನ್ನು ಒಳಗೊಂಡಿದೆ. ಈ ಕ್ಷೇತ್ರ ಕಾರ್ಯದಲ್ಲಿ ಮೂರು ಬುಡಕಟ್ಟು ಸದಸ್ಯರು ಆಯ್ಕೆ ಯಾಗಿರುವುದು ಈ ಸಮೀಕ್ಷೆಯಿಂದ ಗೊತ್ತಾಗಿದೆ. ಈ ಮೂರು ಜನರು ಮೀಸಲಾತಿಯಿಂದ ಆಯ್ಕೆಯಾಗಿದ್ದು, ಇಬ್ಬರು ಮಹಿಳೆಯರು ಮತ್ತು ಒಬ್ಬರು ಪುರುಷರಿದ್ದಾರೆ. ಪ್ರಮುಖ ಸಮುದಾಯವಾದ ಬೇಡ ಸಮುದಾಯದ ಇಬ್ಬರು ಸದಸ್ಯರು ಮತ್ತು ಕಾಡುಕುರುಬ ಸಮುದಾಯದಿಂದ ಒಬ್ಬರು ಆಯ್ಕೆಯಾಗಿದ್ದಾರೆ. ಇನ್ನುಳಿದ ಬುಡಕಟ್ಟು ಸಮುದಾಯಗಳು ಸರಕಾರ ನೀಡಿದ ಮೀಸಲಾತಿಯನ್ನು ಬಳಸಿಕೊಳ್ಳದೆ ಇರಲು ಹಲವಾರು ಕಾರಣಗಳಿವೆ.

**ಕೋಷ್ಟಕ ೪.೧೩**

## ಗುಲಬರ್ಗಾ ಜಿಲ್ಲೆಯ ಜಿಲ್ಲಾ ಪಂಚಾಯಿತಿ ಬುಡಕಟ್ಟು ಸದಸ್ಯರ ಮಾಹಿತಿ

| ಕ್ರ. ಸಂ. | ಸದಸ್ಯರ ಹೆಸರು | ಸದಸ್ಯತ್ವ | ಸ್ಥಾನ | ಮತಕ್ಷೇತ್ರ | ತಾಲೂಕ | ಸಾಮಾನ್ಯ/ ಮೀಸಲು | ಜಾತಿ | ರಾಜಕೀಯ ಪಕ್ಷ | ವಿದ್ಯಾರ್ಹತೆ |
|---|---|---|---|---|---|---|---|---|---|
| ೦೧ | ಬಸವರಾಜ ಕೋಮರ್ | Z.P. | ಸದಸ್ಯರು | ಸೈದಾಪೂರ | ಯಾದಗಿರಿ | ಮೀಸಲು | ಬೇಡರು | ಜನತಾದಳ | B.A. |
| ೦೨ | ಈರಮ್ಮ/ಹಣ್ಮಂತ್ರಾಯ | Z.P. | ಸದಸ್ಯರು | ಹುಣಸಿಗಿ | ಸುರಪೂರ | ಮೀಸಲು | ಬೇಡರು | ಕಾಂಗ್ರೇಸ್ | ೦೭ |
| ೦೩ | ಶಾರದಾಂಬ. ಮಾಳಪ್ಪ | Z.P. | ಸದಸ್ಯರು | ಸಗರ | ಶಹಾಪುರ | ಮೀಸಲು | ಕಾಡು ಕುರುಬ | ಕಾಂಗ್ರೇಸ್ | P.U.C. |

೧. ಬಸವರಾಜ ಕೋಮರ್ - ಸೈದಾಪೂರು

೨. ಈರಮ್ಮ ಹಣ್ಮಂತ್ರಾಯ - ಹುಣಸಗಿ

೩. ಶಾರದಾಂಬ ಮಾಳಪ್ಪ - ಸಗರ

ಈ ಮೇಲಿನ ಮೂರು ಜನ ಸದಸ್ಯರು ಹೆಚ್ಚಿನ ಬುಡಕಟ್ಟು ಸಮುದಾಯವನ್ನು ಹೊಂದಿರುವ ಸುರುಪುರ, ಶಹಾಪೂರ ಮತ್ತು ಯಾದಗಿರಿಯಿಂದ ಆಯ್ಕೆಯಾಗಿದ್ದಾರೆ. ಇಬ್ಬರು ಕಾಂಗ್ರೆಸ್

ಪಕ್ಷದಿಂದ ಮತ್ತೊಬ್ಬರು ಜನತಾದಳ ಪಕ್ಷದ ಬೆಂಬಲವನ್ನು ಪಡೆದು ಆಯ್ಕೆಯಾಗಿದ್ದಾರೆ. ಮೂರು ಜನ ಸದಸ್ಯರು ಉತ್ತಮ ಶಿಕ್ಷಣ ಪಡೆದಿದ್ದು ರಾಜಕೀಯ ಆಸಕ್ತಿ, ಕುತುಹಲ, ಜನ ಸೇವೆ ಇತ್ಯಾದಿ ಗುಣಗಳನ್ನು ಅಳವಡಿಸಿಕೊಂಡಿರುವುದು ಈ ಸಮೀಕ್ಷೆಯಿಂದ ಗೊತ್ತಾಗಿದೆ.

**ಬುಡಕಟ್ಟು ಸಮುದಯಗಳು ಸಾಮಾನ್ಯ ಕ್ಷೇತ್ರಕ್ಕೆ ಸ್ಪರ್ಧಿಸಿ ಜಿಲ್ಲಾ ಪಂಚಾಯಿತಿಗೆ ಆಯ್ಕೆ ಯಾಗದಿರಲು ಕಾರಣಗಳು**

೧. ಆರ್ಥಿಕವಾಗಿ ಈ ಸಮುದಾಯಗಳು ಬಹಳ ಹಿಂದುಳಿದಿದ್ದಾರೆ.

೨. ಆಧುನಿಕ ಚುನಾವಣೆಗಳು ಹಣದ ಮೇಲೆ ಅವಲಂಬಿಸಿರುವುದು ಸಾಮಾನ್ಯವಾಗಿದ್ದು, ಈ ಬುಡಕಟ್ಟುಗಳು ಹೆಚ್ಚಿನ ಹಣವನ್ನು ಖರ್ಚುಮಾಡಿ ಆಯ್ಕೆಯಾಗುವುದು ಬಹಳ ಅಪರೂಪ.

೩. ಅನೇಕ ರೀತಿಯ ಬುಡಕಟ್ಟುಗಳಿರುವುದರಿಂದ ಅಲ್ಪ ಜನ ಸಂಖ್ಯೆಯನ್ನು ಹೊಂದಿರುತ್ತದೆ.

೪. ಈ ಬುಡಕಟ್ಟುಗಳು ಅನಕ್ಷರಸ್ಥರಾಗಿದ್ದು ರಾಜಕೀಯವನ್ನು ಅಲ್ಪ-ಸ್ವಲ್ಪ ಬಲ್ಲವರಾಗಿರುತ್ತಾರೆ.

೫. ಈ ಬುಡಕಟ್ಟಿನವರಿಗೆ ರಾಜಕೀಯ ಮೀಸಲಾತಿ ದೊರೆಯುವುದರಿಂದ ಈಗೀಗ ರಾಜಕೀಯ ಆಸಕ್ತಿ ಮತ್ತು ಅಧಿಕಾರದ ರುಚಿಯನ್ನು ಕಂಡಿದ್ದಾರೆ.

೬. ಸಾಮಾನ್ಯವಾಗಿ ಬುಡಕಟ್ಟಿನವರಿಗೆ ಅಧಿಕಾರ ಹಂತಸ್ತು ಇವುಗಳ ವ್ಯಾಮೋಹ ಕಡಿಮೆ ಇರುತ್ತದೆ ಎಂಬುದು ಈ ಸಮೀಕ್ಷೆಯಿಂದ ಗೊತ್ತಾಗುತ್ತದೆ.

೭. ಜಿ.ಪಂ. ಕ್ಷೇತ್ರ ವಿಶಾಲದ್ದಾಗಿರುವುದರಿಂದ ಈ ಸಮುದಾಯಗಳು ಎಲ್ಲಾ ಜನರ ಜೊತೆಗೆ ಸಂಪರ್ಕ ಇಟ್ಟುಕೊಂಡು ಮತ ಪಡೆಯುವದು ಕನಸೇ ಸರಿ.

೮. ಒಂದು ಬುಡಕಟ್ಟು ಸಮುದಾಯ ಮತ್ತೊಂದು ಬುಡಕಟ್ಟು ಸಮುದಾಯ ಬೆಳೆಯುವುದನ್ನು ಸಹಿಸುವುದಿಲ್ಲ.

೯. ಈ ಸಮುದಾಯಗಳಿಗೆ ಗಾಡ್-ಫಾದರ್ ಇರುವುದಿಲ್ಲ. ರಾಜಕೀಯವಾಗಿ ಬೆಳೆಯಲು ಬಿಡದೆ ಮೊಳಕೆಯಲ್ಲಿಯೇ ಚಿವುಟಿ ಹಾಕಲು ಪ್ರಯತ್ನಿಸುತ್ತಾರೆ.

**ಜಿಲ್ಲಾ ಪಂಚಾಯತ್ ಸದಸ್ಯರು ನಿರ್ವಹಿಸಿದ ಸಾರ್ವಜನಿಕ ಕಾರ್ಯಗಳು**

೧. ಜಿಲ್ಲೆಯಲ್ಲಿ ಅಲ್ಲಲ್ಲಿ ಬೀಜ ಸಂಸ್ಕರಣ ಘಟಕಗಳ ಸ್ಥಾಪನೆ.

೨. ಬಡವರಿಗೆ ಗಂಗಾಯೋಜನೆಯ ಅಡಿಯಲ್ಲಿ ಕೊಳವೆ ಬಾವಿ ಮತ್ತು ಪಂಪಸೆಟ್ ಸರಬರಾಜು ಮಾಡಲಾಗಿದೆ.

೩. ಹಳೆಯ ಕೆರೆಗಳ ಜೀರ್ಣೋದ್ದಾರ ಮತ್ತು ಕೆರೆಗಳ ಹೋಳೇತ್ತುವ ಕಾರ್ಯ ನಿರ್ವಹಿಸಲಾಗಿದೆ.

೪. ಕೊಳವೆ ಬಾವಿಗಳ ದುರಸ್ತಿ ಮಾಡಲಾಗಿದೆ.

೫. ಜಿಲ್ಲೆಯ ಎಲ್ಲಾ ಕಡೆಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಲಾಗಿದೆ.

೬. ಶಾಲಾ ಕಟ್ಟಡ, ಪಂಚಾಯತಿ ಕಾರ್ಯಾಲಯ ಮತ್ತು ಪಶು ವೈದ್ಯ ಕೇಂದ್ರಗಳ ಸ್ಥಾಪನೆ.

೭. ಬಡ ಮಕ್ಕಳ ಹಾಸ್ಟೇಲ್‌ಗಳ ಸ್ಥಾಪನೆ.

೮. ರಸ್ತೆ ದುರಸ್ತಿ, ರಸ್ತೆ ನಿರ್ಮಾಣ ಹಾಗೂ ವಾಹನಗಳ ಸೌಲಭ್ಯ ಒದಗಿಸಿಕೊಡಲಾಗಿದೆ.

೯. ಸೇತುವೆಗಳ ನಿರ್ಮಾಣ ಮತ್ತು ಹಳೆಯ ಸೇತುವೆಗಳ ದುರಸ್ತಿ ಮಾಡಿಸಲಾಗಿದೆ.

೧೦. ಜಿಲ್ಲೆಯ ವ್ಯಾಪ್ತಿಯಲ್ಲಿ ಆರೋಗ್ಯ ತಪಾಸಣಾ ಶಿಬಿರಗಳನ್ನು ಸ್ಥಾಪಿಸಿ ಉಚಿತ ವೈದ್ಯಕೀಯ ಸೌಲಭ್ಯ ನೀಡಲಾಗಿದೆ.

೧೧. ಅರಣ್ಯ, ಗ್ರಂಥಾಲಯ ಇತ್ಯಾದಿಗಳ ಸ್ಥಾಪನೆ ಮಾಡಲಾಗಿದೆ.

ಇನ್ನು ಸಾಕಷ್ಟು ಸಾರ್ವಜನಿಕ ಕಾರ್ಯನಿರ್ವಹಿಸುವ ಕುತೂಹಲ ಇದೆ, ಆದರೆ ಅವಕಾಶ ಒದಗಿಬಂದಿರುವದಿಲ್ಲ ಎಂದು ಈ ಸಮೀಕ್ಷೆಯಲ್ಲಿ ಕೇಳಿದ ಪ್ರಶ್ನೆಗೆ ಪ್ರತಿಕ್ರಿಯೆ ವ್ಯಕ್ತ ಪಡಿಸಿದ್ದರೆ.

# ಬುಡಕಟ್ಟು ಮತ್ತು ಬುಡಕಟ್ಟೇತರ ರಾಜಕೀಯ

ಮನುಷ್ಯನು ರಾಜಕೀಯ ಜೀವಿಯಾಗಿದ್ದಾನೆ ಶ್ರೀಮಂತನಾಗಲೀ, ಬಡವನಾಗಲೀ, ಅಕ್ಷರಸ್ಥಾನಾಗಲೀ ಅನಕ್ಷರಸ್ಥಾನಾಗಲೀ, ಅವನಿಗೆ ರಾಜಕೀಯ ಆಸಕ್ತಿ, ಅಧಿಕಾರದ ವ್ಯಾಮೋಹ ಇದ್ದೆ ಇರುತ್ತದೆ ಆದ್ದರಿಂದ ರಾಬರ್ಟ, ಎ.ದಾಲ್ ಇವರು "ರಾಜಕೀಯವು ಸರ್ವವ್ಯಾಪಿ ಯಾಗಿದೆ" ಎಂದು ವ್ಯಾಖ್ಯಾನಿಸಿದ್ದಾರೆ.

ಜಿಲ್ಲೆಯ ಹತ್ತು ತಾಲೂಕಿನಲ್ಲಿ ಬುಡಕಟ್ಟು ಗ್ರಾಮ ಪಂಚಾಯಿತಿ ಸದಸ್ಯರನ್ನು ರ್‍ಯಾಂಡಮ್ ಸರ್ವೆಗಾಗಿ ಸಂದರ್ಶಿಸಿದಾಗ ಬುಡಕಟ್ಟು ರಾಜಕೀಯ ಆಸಕ್ತಿಗೆ ಹಲವಾರು ಕಾರಣಗಳು ಗಮನಕ್ಕೆ ಬಂದಿವೆ. ಸದಸ್ಯರು ಅವರ ವಯಸ್ಸು, ವಿದ್ಯೆ ಮತ್ತು ಆರ್ಥಿಕ ಸ್ಥಿತಿಗೆ ಅನುಗುಣವಾಗಿ ತಮ್ಮ ಅನುಭವನ್ನು ವ್ಯಕ್ತಗೊಳಿಸಿದ್ದಾರೆ.

ರಾಜಕೀಯ ಆಸಕ್ತಿ, ಅನುಭವ ಮತ್ತು ಕುತುಹಲ ವ್ಯಕ್ತಿಯಿಂದ ವ್ಯಕ್ತಿಗೆ ಮತ್ತು ಸ್ಥಳದಿಂದ ಸ್ಥಳಕ್ಕೆ ಹಾಗೂ ಕಾಲದಿಂದ ಕಾಲಕ್ಕೆ ಪರಿವರ್ತನೆ ಹೊಂದುತ್ತಿರುವದು ಈ ಸಮೀಕ್ಷೆಯಿಂದ

ಕಂಡುಬಂದಿದೆ. ಅದೇ ರೀತಿ ಇನ್ನು ಕೆಲವು ಬಾಹ್ಯ ಕಾರಣಗಳಾದ ಅಕ್ಷರ ಜ್ಞಾನ ಆರ್ಥಿಕ ಪ್ರಗತಿ ಮತ್ತು ಜನಸಂಖ್ಯೆ, ಲಿಂಗ ಮತ್ತು ಭೌಗೋಳಿಕ ಅಂತರಗಳು ಸಹಿತ ಬುಡಕಟ್ಟು ರಾಜಕೀಯ ಪ್ರೇರಣೆಗೆ ಸಹಾಯಕವಾಗಿರುವಂತಹ ಅಂಶಗಳು ಎನ್ನುವದು ಖಚಿತವಾಗಿದೆ.

## ೫.೧. ಬುಡಕಟ್ಟು ರಾಜಕೀಯ(ಗ್ರಾಮಪಂಚಾಯಿತಿ ಸದಸ್ಯರ ವ್ಯಕ್ತಿ ಅಧ್ಯಯನ)

**ಪಾರ್ವತಿ ಬಾಯಿ**(ಭಾವಚಿತ್ರ ೫.೧.ನೋಡಿ)

ಪ್ರಜಾಪ್ರಭುತ್ವದಲ್ಲಿ ಎಲ್ಲಾರಿಗೂ ಸಮಾನ ರಾಜಕೀಯ ಹಕ್ಕುಗಳಿವೆ. ಅಕ್ಷರಸ್ಥನಿರಲಿ, ಅನಕ್ಷರಸ್ಥನಿರಲಿ, ರಾಜಕೀಯದಲ್ಲಿ ಸಕ್ರೀಯವಾಗಿ ಭಾಗವಹಿಸುವ ಅವಕಾಶ ಹೊಂದಿದ್ದಾನೆ. ಆಳಂದ ತಾಲೂಕಿನ ಗ್ರಾ.ಪಂ. ಸದಸ್ಯೆ ಪಾರ್ವತಿಬಾಯಿ ಅವರ ಪಾತ್ರವನ್ನು ಕುರಿತು ಹಲವಾರು ಪ್ರಶ್ನೆಗಳನ್ನು ಕೇಳಲಾಗಿ ಯಾವದೇ ರೀತಿಯ ತೃಪ್ತಿಕರವಾದ ಉತ್ತರ ನೀಡಿರುವದಿಲ್ಲ.

**ವೀರ ಕಂಟೆಪ್ಪಗೌಡ ಎಂ.ಎ. ರಾಜ್ಯಶಾಸ್ತ್ರ**

"Education is mirror of Democracy" ಎಂಬುವಂತೆ ಉನ್ನತ ಪದವಿ ಪಡೆದ ಬುಡಕಟ್ಟು ಸದಸ್ಯನನ್ನು ಕುರಿತು ಸಂಬಂಧ ಪಟ್ಟ ಹಲವಾರು ಪ್ರಶ್ನೆಗಳನ್ನು ಕೇಳಲಾಗಿದೆ. ರಾಜ್ಯಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿ ಪಡೆದ ಬುಡಕಟ್ಟು ಸದಸ್ಯನು, ಪ್ರತಿಯೊಬ್ಬ ನಾಗರಿಕನ ಹಕ್ಕು ಮತ್ತು ಕರ್ತವ್ಯಗಳನ್ನು ಕುರಿತು ಹೇಳುವುದರ ಜೊತೆಗೆ ರಾಜಕೀಯ ಕೇವಲ ಕೆಲವು ವರ್ಗಗಳ ಸ್ವತ್ತಾಗಬಾರದು. ಎಲ್ಲಾ ಜಾತಿ, ಜನಾಂಗ ಮತ್ತು ಸಮುದಾಯದವರಿಗೆ ಸಕ್ರೀಯ ವಾಗಿ ಭಾಗವಹಿಸುವ ಅವಕಾಶವಿರಬೇಕು. ಪ್ಲೇಟೋ, ಅರಿಸ್ಟಾಟಲ್ ಮತ್ತು ಮೆಕೆವಲ್ಲಿಯವರ ರಾಜಕೀಯ ಸಿದ್ಧಾಂತಗಳನ್ನು ಅಳವಡಿಸಿಕೊಳ್ಳುವದರ ಜೊತೆಗೆ ಪ್ರಜೆಗಳ ಕಲ್ಯಾಣಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಳ್ಳಲು ತಾವು ಸದಾಸಿದ್ದರಿದ್ದೇವೆ ಎಂದು ಹೇಳುವ ಮಾತಿನಲ್ಲಿ ಸೇವೆಯ ಮನೋಭಾವನೆ ಅಂತರಾತ್ಮದಿಂದ ಬರುತ್ತಿತ್ತೆ ವಿನಃ ತುಟಿಗಳ ಮೇಲಿನಿಂದ ಅಲ್ಲ ಎನ್ನುವುದು ಮನಗಂಡಿದ್ದೇವೆ.

**ಕೋಷ್ಟಕ ೫.೧**

**ಗುಲಬರ್ಗಾ ಜಿಲ್ಲೆಯ ಹತ್ತು ಜನ ಬುಡಕಟ್ಟು ಗ್ರಾ.ಪ. ಸದಸ್ಯರ ಮಾಹಿತಿ**

| ಕ್ರ. ಸಂ. | ಸದಸ್ಯರ ಹೆಸರು | ಊರು | ತಾಲೂಕ | ಸಮುದಾಯದ ಹೆಸರು | ಗ್ರಾಮ ಪಂಚಾಯಿತಿಯಲ್ಲಿ ಸ್ಥಾನ | ವಕ್ತೃವಿನ ಆಯ್ಕೆಯ ಕಾರಣ |
|---|---|---|---|---|---|---|
| ೦೧ | ವೀರಕಂಟೆಪ್ಪ ಗೌಡ | ಗೌಡಿಗೇರಿ | ಸುರುಪುರು | ಬೇಡ | ಸದಸ್ಯ | ಎಂ. ಎ. ರಾಜ್ಯ ಶಾಸ್ತ್ರ. ಅತೀ ಹೆಚ್ಚು ಓದಿರುವ ಸದಸ್ಯ |
| ೦೨ | ಪಾರ್ವತಿ ಬಾಯಿ | ಹಳ್ಳಿಸಲಗರ | ಆಳಂದ | ಬೇಡ | ಸದಸ್ಯ | ಅಕ್ಷರ ಜ್ಞಾನ ಇಲ್ಲದ ಸದಸ್ಯಳು |
| ೦೩ | ಯಂಕಮ್ಮ ಕಾವಲಿ | ಯಂಕಟಾಪುರ | ಚಿಂಚೋಳಿ | ಬೇಡ | ಸದಸ್ಯ | ನಗರ ಪ್ರದೇಶದಿಂದ ದೂರ ಇರುವ ಸದಸ್ಯಳು |
| ೦೪ | ಗುಂಡಮ್ಮ ಗಳವಿ | ನಂದೂರು | ಗುಲಬರ್ಗಾ | ಬೇಡ | ಸದಸ್ಯ | ನಗರ ಪ್ರದೇಶಕ್ಕೆ ಸಮೀಪ ಇರುವ ಸದಸ್ಯಳು |
| ೦೫ | ಭೀಮರಾಯ (ಬ) | ಹೊಸ್ಸಳ್ಳಿ | ಯಾದಗಿರಿ | ಬೇಡ | ಅಧ್ಯಕ್ಷ | ಪುರುಷನು ಅಧ್ಯಕ್ಷನಾಗಿ ಪಂಚಾಯಿತಿಯಲ್ಲಿ ನಿರ್ವಹಿಸಿದ ಅನುಭವ |
| ೦೬ | ಲಕ್ಷ್ಮಿಬಾಯಿ | ಕಾಳಗಿ | ಚಿತ್ತಾಪುರು | ಬೇಡ | ಅಧ್ಯಕ್ಷೆ | ಸ್ತ್ರೀ ಅಧ್ಯಕ್ಷಳಾಗಿ ಈ ಪಂಚಾಯಿತಿ ಯಲ್ಲಿ ಕಾರ್ಯನಿರ್ವಹಿಸಿದ ಅನುಭವ |
| ೦೭ | ಹಣ್ಮಂತ್ರಾಯ ದೊರೆ | ನೆಲೋಗಿ | ಜೇವರ್ಗಿ | ಬೇಡ | ಉಪಾಧ್ಯಕ್ಷ | ಬೇಡಸಮುದಾಯದವರ ಆಡಳಿತದ ಅನುಭವ |
| ೦೮ | ಲಕ್ಷ್ಮೀಬಾಯಿ | ಮುಧೋಳು | ಸೇಡಂ | ಮೇದ | ಉಪಾಧ್ಯಕ್ಷೆ | ಮೇದ ಸಮುದಾಯದ ಆಡಳಿತದ ಅನುಭವ |
| ೦೯ | ದತ್ತಾತ್ರೇಯ | ತೆಲ್ಲೂರು | ಅಫಜಲಪುರು | ಬೇಡ | ಗ್ರಾ.ಪ.ಸ | ಊರಲ್ಲಿ ಒಂದೇ ಮನೆ ಇದ್ದು ಸದಸ್ಯನಾದ ಅನುಭವ |
| ೧೦ | ಕೊಂಡಯ್ಯ | ವನದುರ್ಗಾ | ಶಹಾಪುರು | ಬೇಡ | ಗ್ರಾ.ಪ.ಸ | ಊರಲ್ಲಿ ಅತೀ ಹೆಚ್ಚು ಬೇಡ ಸಮುದಾಯ ಇದ್ದು ಸದಸ್ಯನಾದ ಅನುಭವ |

**ಯಂಕಮ್ಮ ಕಾವಲಿ (ಭಾವಚಿತ್ರ ೫.೨ ನೋಡಿ)**

ನಗರ ಪ್ರದೇಶದಿಂದ ಸುಮಾರು ೧೧೦ ಕಿ.ಮಿ.ದೂರವಿರುವ ಗ್ರಾ.ಪಂ.ಸದಸ್ಯರನ್ನು ಸಂದರ್ಶಿಸಿದಾಗ ಅವರಲ್ಲಿ ಒಂದು ರೀತಿಯ ಆತಂಕ ಇರುವದು ಕಂಡುಬಂದಿತು. ಈ ಸದಸ್ಯರಿಗೆ ಪ್ರಜಾಪ್ರಭುತ್ವದ ತತ್ವಗಳಾಗಲಿ, ಸಮಾನತೆಯಾಗಲಿ ಗೊತ್ತಿಲ್ಲಎನಿಸುತಿತ್ತು. ಏಕೆಂದರೆ ಇವರು ತಾವು ಗ್ರಾ.ಪಂ.ಸದಸ್ಯಎನ್ನುವದನ್ನು ಮರೆತು ನಮ್ಮ ಪ್ರಶ್ನೆಗಳಿಗೆ ಹೆದರಿ ಉತ್ತರಿಸುತ್ತಿದ್ದರು.

ಗ್ರಾ.ಪಂಚಾಯಿತಿಯಲ್ಲಿ ಅವರ ಕರ್ತವ್ಯವಾಗಲೀ, ಜನಸೇವೆಯಾಗಲಿ ಕೇಳಿದರೆ ನಕರಾತ್ಮಕ ಪ್ರತಿಕ್ರಿಯೆ ಬಂದಿದೆ.

**ಗುಂಡವ್ವ**

ನಗರ ಪ್ರದೇಶಕ್ಕೆ ಸುಮಾರು ೧೨ ಕಿ.ಮಿ. ದೂರವಿರುವ ಗ್ರಾಮದ ಸದಸ್ಯರನ್ನು ಕುರಿತು ಸಂದರ್ಶಸಿದಾಗ ತೃಪ್ತಿಕರವಾದ ಪ್ರತಿಕ್ರಿಯೆ ನಮಗೆ ದೊರೆತಿದೆ. ಗ್ರಾಮೀಣ ಜನಗಳಲ್ಲಿ ಗ್ರಾ.ಪಂಚಾಯಿತಿ ಪಾತ್ರ ಕುರಿತು ಹಲವಾರು ಪ್ರಶ್ನೆಗನ್ನು ಕೇಳಿದಾಗ ಹೆಚ್ಚಿನ ಪ್ರಶ್ನೆಗಳಿಗೆ ಇವರಿಂದ ಸೂಕ್ತ ಮಾಹಿತಿ ಬಂದಿರುವದು ಸಂತೋಷದ ಸಂಗತಿಯೇ ಸರಿ.

ಈ ಸದಸ್ಯರಿಗೆ ಜನ ಸಂಪರ್ಕ, ಮತ್ತು ಸಾರ್ವಜನಿಕ ಮಾಧ್ಯಮಗಳಾದ ರೇಡಿಯೊ, ದೂರದರ್ಶನ ಮತ್ತಿತರ ಸೀನೆಮಾಗಳ ಪ್ರಭಾವದಿಂದ ಹೆಚ್ಚು ಪ್ರಭಾವಿತರಾಗಿದ್ದು, ಆಡಳಿತದ ಮತ್ತು ರಾಜಕೀಯ ಅನುಭವವನ್ನು ಹೊಂದಿದ್ದಾರೆ. ಸಂದರ್ಭಕ್ಕೆ ತಕ್ಕಂತೆ ಭಾಷೆ, ಧ್ವನಿಯ ಏರಿಳಿತ ಮತ್ತು ಕಾಯಿದೆ, ಕಾನೂನುಗಳ ಬಗ್ಗೆ ಇರುವ ಜ್ಞಾನಕಂಡು ಇವರು ಪ್ರಜಾಪ್ರಭುತ್ವದ ಯಶಸ್ವಿಯಲ್ಲಿ ಮಹತ್ವದ ಪಾತ್ರ ನಿರ್ವಹಿಸುತ್ತಾರೆ ಏನಿಸಿದೆ. ಏಕೆಂದರೆ, ಇವರಿಗೆ ಪ್ರಜಾಪ್ರಭುತ್ವದ ಬಗ್ಗೆ ಹೆಮ್ಮೆ ಮತ್ತು ರಾಷ್ಟ್ರ ಪ್ರೇಮ ಸಹಿತ ಪ್ರಸ್ತುತ ಸಂದರ್ಶನದ ವೇಳೆಯಲ್ಲಿ ಕಂಡುಬಂದಿದೆ

**ಲಕ್ಷ್ಮೀಬಾಯಿ**

೧೯೯೩ರ ಪಂಚಾಯತಿ ಕಾಯಿದೆ ಪ್ರಕಾರ ಸ್ತ್ರೀಯರಿಗೆ ವಿಶೇಷ ಮೀಸಲಾತಿ ಕಲ್ಪಿಸಲಾಗಿದೆ. ಆದರೆ ಇಂದು ಹೆಣ್ಣು ಪ್ರತಿಯೊಂದು ಕ್ಷೇತ್ರದಲ್ಲಿ ಮಹತ್ವದ ಪಾತ್ರನಿರ್ವಹಿಸುತ್ತಿದ್ದಾಳೆ ಎಂಬುವದಕ್ಕೆ ಬುಡಕಟ್ಟು ಗ್ರಾ.ಪಂಚಾಯಿತಿ ಅಧ್ಯಕ್ಷರನ್ನು ಸಂದರ್ಶಿಸಿ ಸಂಗ್ರಹಿಸಿದ ಮಾಹಿತಿ ಯಿಂದ ತಿಳಿದುಬಂದಿದೆ. ಗ್ರಾಮದ ಅಭಿವೃದ್ಧಿಗಾಗಿ ಸರಕಾರ ಹಾಕಿಕೊಂಡ ಹಲವಾರು ಯೋಜನೆಗಳ ಬಗ್ಗೆ ಸ್ಪಷ್ಟ ಮಾಹಿತಿಯೊಂದಿದ್ದು ಅವುಗಳ ಈಡೇರಿಕೆಗಾಗಿ ಶ್ರಮಿಸುವ ಚಿತ್ರ ನಮಗೆ ಕಂಡುಬಂದಿದೆ. ಅಧಿಕಾರದ ವ್ಯಾಮೋಹವಿಲ್ಲದೆ ಲಂಚ ರುಸುವತ್ತುಗಳಿಗೆ ಬಲಿಯಾಗದೆ, ಜನ ಸೇವೆಯೊಂದೆ ತಮ್ಮ ಉಸಿರು ಎಂದು ತಿಳಿದು ಆಡಳಿತ ನಡೆಸಿಕೊಂಡು ಹೋಗುವುದರಲ್ಲಿ ಸೈಎನಿಸಿಕೊಂಡಿದ್ದಾರೆ.

**ಗ್ರಾಮ ಪಂಚಾಯಿತಿ ಅಧ್ಯಕ್ಷರ ಅನುಭವ** (ಭಾವಚಿತ್ರ ೫.೩.ನೋಡಿ)

ಪುರುಷರು ಕೆಲವು ಕ್ಷೇತ್ರದಲ್ಲಿ ಸ್ತ್ರಿಯರಿಗಿಂತ ಭಿನ್ನವಾಗಿದ್ದಾರೆ. ಏಕೆಂದರೆ ಅಧಿಕಾರದ ವ್ಯಾಮೋಹ ಇರುವುದರಿಂದ ಜನಗಳಿಗೆ ಮತ್ತು ಸಮಿತಿಯ ಸದಸ್ಯರಿಗೆ ಹೆದರಿಕೊಂಡು ಅಧಿಕಾರ ನಡೆಸುವುದು ನಮ್ಮ ಗಮನಕ್ಕೆ ಬಂದ ಸಂಗತಿಯಾಗಿದೆ. ಆದರೆ ಜನರನ್ನು ಸಂಘಟನೆ ಮತ್ತು ಮರುಳುಮಾಡಿ ಅಧಿಕಾರದ ಸೂತ್ರ ಹಿಡಿಯುವುದರಲ್ಲಿ ಪುರುಷರು ತುಂಬಾ ಬುದ್ಧಿವಂತರು.

ಜನಸೇವೆಯ ನೆಪದಲ್ಲಿ ಹಲವಾರು ತಪ್ಪುದೋಷಗಳು ಸಂಭವಿಸುವುದು ಸರ್ವೆ ಸಾಮಾನ್ಯ. ಆದರೆ ಹಗಲು ರಾತ್ರಿ ಎನ್ನದೆ ನಿರಂತರ ಜನಸೇವೆ ಮತ್ತು ಸರಕಾರಿ ಕೆಲಸಗಳನ್ನು ಗಂಡಸರು ನಿರ್ವಹಿಸಬಹುದೇ ವಿನ: ಸ್ತ್ರೀಯರಿಂದ ಸಾಧ್ಯವಿಲ್ಲ ಎಂಬುದನ್ನು ಸಾಭಿತು ಪಡಿಸಿದ್ದಾರೆ.

ಏನೇ ಆಗಲೀ ಸರಕಾರದ ವಿವಿಧ ನಿಯಮಗಳನ್ನು ತಿಳಿದುಕೊಂಡು ಜನರಿಗೆ ಉತ್ತಮ ಸೇವೆಯನ್ನು ಗಂಡಸರು ಒದಗಿಸ ಬಲ್ಲರು ಎಂಬುವದು ಪ್ರಸ್ತುತ ಸಮೀಕ್ಷೆಯಿಂದ ಮನದಟ್ಟವಾಗಿದೆ.

**ಲಕ್ಷ್ಮೀಬಾಯಿ** (ಭಾವಚಿತ್ರ ೫.೪.ನೋಡಿ) **ಸೇಡಂ**

ಗುಲಬರ್ಗಾ ಜಿಲ್ಲೆಯಲ್ಲಿ ಎಲ್ಲಾ ಬುಡಕಟ್ಟುಗಳು ಈಗ ಅಲೆಮಾರಿ ಜೀವನಕ್ಕೆ ವಿದಾಯ ಹೇಳಿ, ನೆಲೆನಿಲ್ಲಲು ಪ್ರಯತ್ನಿಸುತ್ತಿದ್ದಾರೆ.

ಅದೇ ರೀತಿ ಮೇದ ಬುಡಕಟ್ಟಿನ ಸದಸ್ಯರನ್ನು ಸಂದರ್ಶಿಸಿದಾಗ ಕೆಲವು ಹೊಸ ಅನುಭವಗಳು ನಮಗೆ ದೊರೆತಿವೆ. ಬಿದಿರಿನಿಂದ ಬುಟ್ಟಿ ತಯಾರಿಸಿ ಹೊಟ್ಟೆ ತಂಬಿಸಿಕೊಳ್ಳುವ ಈ ಬುಡಕಟ್ಟಿನವರಿಗೆ, ಮತ, ಆಡಳಿತ, ಆಧಿಕಾರ, ಮತ್ತು ರಾಜಕೀಯ ಇತ್ಯಾದಿ ಅಂಶಗಳು ತೀರ ಹೊಸದಾಗಿದ್ದು, ಅನಿವಾರ್ಯ ಎಂದರೆ ಇತರ ಬುಡಕಟ್ಟಿನವರು ಇಲ್ಲದ ಕಾರಣ ತಮ್ಮನ್ನು ಆಯ್ಕೆ ಮಾಡಿದ್ದಾರೆ ಎಂಬ ಅಂಶ ಈ ಸಮುದಾಯದಿಂದ ತಿಳಿದುಬಂದಿದೆ. ಏಕೆಂದರೆ ಈ ಸಮುದಾಯದಲ್ಲಿ ಬಹಳಷ್ಟು ಅನಕ್ಷರತೆ, ಬಡತನ, ನಿರುದ್ಯೋಗ ಇತ್ಯಾದಿ ಸಮಸ್ಯೆಗಳು ತಾಂಡವಾಡುತ್ತಿದ್ದು ರಾಜಕೀಯದ ಕಡೆಗೆ ಗಮನಕೊಡದಿರುವುದು ತಿಳಿದುಬಂದಿದೆ.

**ಹಣ್ಮಂತ್ರಾಯ ದೊರೆ, ಜೇವರ್ಗಿ**

ಕೆಲವರು ಆಳಲು ಹುಟ್ಟಿದರೆ ಮತ್ತೆ ಕೆಲವರು ಆಳಿಸಿಕೊಳ್ಳಲು ಹುಟ್ಟಿರುತ್ತಾರೆ ಆದರೆ ಈ ಬೇಡ ಬುಡಕಟ್ಟಿನವರು ಆಳಲು ಮತ್ತು ಆಳಿಸಿಕೊಳ್ಳಲು ಹುಟ್ಟಿರುತ್ತಾರೆ. ಎಂದರೆ ಪ್ರಜಾಪ್ರಭುತ್ವದಲ್ಲಿ ಎಲ್ಲಾ ಸದಸ್ಯರಿಗೆ ಸಮಾನ ಹಕ್ಕುಗಳು ಮತ್ತು ಸೌಲಭ್ಯಗಳು ಇರುತ್ತವೆ ಅವುಗಳನ್ನು ಪಡೆದುಕೊಳ್ಳಲು ಎಲ್ಲರೂ ಶ್ರಮಿಸಬೇಕು. ಏಕೆಂದರೆ ಪ್ರಜಾಪ್ರಭುತ್ವದಲ್ಲಿ ಎಲ್ಲಾ ಪ್ರಜೆಗಳು ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವ ಹಕ್ಕನ್ನು ಪಡೆದಿದ್ದಾರೆ. ಯಾರು ಮೇಲು ಅಲ್ಲ, ಯಾರು ಕೀಳು ಅಲ್ಲ ಎಂಬುವದನ್ನು ಎಲ್ಲಾ ಜಾತಿಯವರು, ಜನಾಂಗದವರು ಅರಿತು ಅದರ ಯಶಸ್ವಿಗಾಗಿ ಶ್ರಮಿಸಬೇಕು. ಅಂದಾಗ ಮಾತ್ರ ಪರಿಶುದ್ದ ಪ್ರಜಾಪ್ರಭುತ್ವ ಸ್ಥಾಪನೆ ಸಾಧ್ಯ ಎಂದು ಹೆಮ್ಮೆಯಿಂದ ಈ ಪ್ರಶ್ನೆಗಳಿಗೆ ಉತ್ತರಿಸಿದ್ದಾರೆ. ಜಿಲ್ಲೆಯ ಅಲ್ಲಲ್ಲಿ ಬೇಡ ಸಮುದಾಯದ ಅಧಿಕಾರ, ಆಡಳಿತವನ್ನು ಕುರಿತು ಉದಾಹರಣೆ ಕೊಡುತ್ತ ತಾವು ಯಾರಿಗಿಂತ ಕಡಿಮೆ ಅಲ್ಲ ಎಂದು ಎದೆ ತಟ್ಟಿ ಹೇಳುತ್ತಾರೆ.

**ದತ್ತಾತ್ರೇಯ** (ಭಾವಚಿತ್ರ ೫.೫.ನೋಡಿ) **ಅಫಜಲಪುರ**

೧೯೯೧ರ ಚುನಾವಣೆಯ ನಿಯಮದಂತೆ ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಮೀಸಲಾತಿ ನಿರ್ಧರಿಸಿದ್ದು ಸದಸ್ಯರಿಗೆ ರಾಜಕೀಯ ಆಸಕ್ತಿ ಇಲ್ಲದಿದ್ದರೂ ಹುಡುಕಿ ಆಯ್ಕೆ ಮಾಡಿರುವ ಕೆಲವು ಘಟನೆಗಳು ಈ ಸಮೀಕ್ಷೆಯಿಂದ ಪತ್ತೆಯಾಗಿದೆ. ಕಡಿಮೆ ಬುಡಕಟ್ಟಿನವರು ಇರುವ ಗ್ರಾಮಗಳಲ್ಲಿ ಸದಸ್ಯತ್ವ ಪಡೆದ ನಾಯಕರು ಅಥವಾ ಸದಸ್ಯರು ಊರಿನ ಮುಖಂಡರ ಕೈಗೊಂಬೆಯಾಗಿ ಕಾರ್ಯ ನಿರ್ವಹಿಸುವುದು ತಿಳಿದುಬಂದಿದೆ. ತಮ್ಮ ಕಾರ್ಯ ಚಟುವಟಿಕೆಯನ್ನು ಕುರಿತು ಕೇಳಿದ ಪ್ರಶ್ನೆಗಳಿಗೆ ಸ್ವಇಚ್ಛೆಯಿಂದ, ಧೈರ್ಯವಾಗಿ ಉತ್ತರಿಸದೆ ಪ್ರತಿ ಮಾತಿನಲ್ಲಿ ಊರಿನ ಮುಖಂಡರಿರುವುರು ಎಂದು ಹೇಳಿ ಜಾರಿಕೊಳ್ಳುತ್ತಾರೆ.

**ಕೊಂಡಯ್ಯ, ಶಹಾಪೂರ**

ಸದಸ್ಯರಿರುವ ಗ್ರಾಮಗಳ ವಿಚಾರಗಳನ್ನು ಸಂಗ್ರಹಿಸಿದಾಗ, ಬುಡಕಟ್ಟಿನವರ ತೀರ್ಮಾನವೇ ಅಂತಿಮವಾದದ್ದು. ಇದೇ ಪ್ರಜಾಪ್ರಭುತ್ವ ಎಂದು ಹೇಳುತ್ತಾರೆ. ಸರಕಾರದಿಂದ ಮಂಜೂರಾದ

ಯಾವದೇ ಯೋಜನೆಯ ಲಾಭಗಳು ಯಾರಿಗೆಬೇಕಾದರು ಅಂದರೆ ತಮ್ಮ ಸಮುದಾಯದವರಿಗೆ ಮಾತ್ರ ಕೊಡಬಹುದು ಅದನ್ನು ಇತರ ಸಮುದಾಯದವರಿಗೆ ಪ್ರಶ್ನಿಸುವ ಅವಕಾಶ ಇರುವದಿಲ್ಲ. ಇವರು ಮಾಡಿರುವದೇ ಶಾಸನ, ಕಾಯಿದೆ, ಕಾನೂನು ಅದು ಜಾರಿಗೆ ಬರಲೇಬೇಕು ಅಂತಹ ವ್ಯಕ್ತಿಯನ್ನು ಈ ಗ್ರಾಮದ ಜನಗಳು ಪಂಚಾಯಿತಿಯಲ್ಲಿ ಕಾರ್ಯನಿರ್ವಸಲು ಆಯ್ಕೆ ಮಾಡಿರುತ್ತಾರೆ. ಸಂದರ್ಶನದ ವೇಳೆಯು ತಮ್ಮ ಬುಡಕಟ್ಟಿನ ಮತ್ತು ಊರಿನ ಹಿರಿಮೆ ಕುರಿತು ಹೆಮ್ಮೆಯಿಂದ ಹೇಳಿದ್ದಾರೆ.

## ೫.೨. ಗುಲಬರ್ಗಾ ಜಿಲ್ಲೆಯ ಬುಡಕಟ್ಟೇತರ ರಾಜಕೀಯ

"ಜಾತಿಯು ರಾಜಕೀಯವನ್ನು ಸೃಷ್ಟಿಸುತ್ತದೆ" ಎಂಬುವ ಸಿದ್ಧಾಂತ ಸರ್ವಕಾಲಕ್ಕೂ ಮತ್ತು ಸರ್ವಕಡೆಗೂ ಕಾಣುತ್ತೇವೆ. ವೇದಗಳ ಕಾಲದಿಂದ ಹಿಡಿದು ಇಂದಿನವರೆಗೆ, ಜಾತಿಯು ರಾಜಕೀಯವನ್ನು ನಿರ್ಧರಿಸುತ್ತಬಂದಿದೆ. ಹಿಂದಿನ ಕಾಲದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಷ್ಣವ, ಶೂದ್ರ ಎಂಬ ಸಮಾಜದ ನಾಲ್ಕು ವರ್ಗಗಳಲ್ಲಿ ರಾಜಕೀಯ ಆಡಳಿತ, ಅಧಿಕಾರವು ಕೇವಲ ಕೆಲವು ವರ್ಗಗಳಿಗೆ ಮಾತ್ರ ಸೀಮಿತವಾಗಿತ್ತು.

ಈಗ ಪ್ರಜಾಪ್ರಭುತ್ವ ಜಾರಿಗೆ ಬಂದನಂತರ ರಾಜಕೀಯದಲ್ಲಿ ಜಾತಿಯ ಪಾತ್ರ ಮತ್ತಷ್ಟು ಬಿಗುವಾಗಿದೆ. ನಮ್ಮ ಸಂವಿಧಾನ ರಾಜಕೀಯವು ಕೇವಲ ಕೆಲವು ವರ್ಗಗಳಿಗೆ ಮಾತ್ರ ಸೀಮಿತವಾಗಿರದೆ, ಎಲ್ಲಾ ಜಾತಿಯವರಿಗೆ ಎಲ್ಲಾ ಧರ್ಮದವರಿಗೆ ಸಮಾನವಾಗಿ ಹಾಗೂ ಸಕ್ರಿಯವಾಗಿ ಪಾಲ್ಗೊಳ್ಳುವ ಅವಕಾಶ ಕಲ್ಪಿಸಿದೆ. ಆದ್ದರಿಂದ ೫೦ ವರ್ಷಗಳ ಪ್ರಜಾಪ್ರಭುತ್ವ ಇತಿಹಾಸದಲ್ಲಿ ಹಳ್ಳಿಯಿಂದ ಹಿಡಿದು ದಿಲ್ಲಿಯವರೆಗೆ ಜಾತಿಯ ರಾಜಕಾರಣ ಕಾಣುತ್ತೇವೆ.

ಗುಲಬರ್ಗಾ ಜಿಲ್ಲೆಯ ಹಲವಾರು ಜಾತಿಗಳು, ಧರ್ಮಗಳು ಮತ್ತು ಸಂಸ್ಕೃತಿ, ಪದ್ಧತಿಗಳನ್ನು ಹೊಂದಿದ್ದು, ಕೋಮು ಸೌಹಾರ್ದತೆಯಿಂದ ಕೂಡಿದೆ. ಜಿಲ್ಲೆಯಲ್ಲಿ ಹಲವಾರು ಸಮುದಾಗಳು ಇದ್ದು ಒಂದಲ್ಲ ಒಂದು ರೀತಿಯ ರಾಜಕೀಯ ಪ್ರೇರಣೆಯನ್ನು ನೀಡುತ್ತಿವೆ. ನಮ್ಮ ಅಧ್ಯಯನದ ಅನುಕೂಲಕ್ಕಾಗಿ ಜಿಲ್ಲೆಯ ಹಲವಾರು ಸಮುದಾಯಗಳನ್ನು ೧. ಮುಂದುವರಿದ ಸಮುದಾಯಗಳ ರಾಜಕೀಯ, ೨. ಹಿಂದುಳಿದ ಸಮುದಾಯಗಳ ರಾಜಕೀಯ ೩. ಅಲ್ಪಸಂಖ್ಯಾತರ ರಾಜಕೀಯ

೪. ಪರಿಶಿಷ್ಟ ಜಾತಿಗಳ ರಾಜಕೀಯ ಎಂದು ವರ್ಗೀಕರಿಸಲಾಗಿದೆ. ಜಿಲ್ಲೆಯ ಪ್ರಸ್ತುತ ರಾಜಕೀಯದಲ್ಲಿ ಆವುಗಳ ಪಾತ್ರವನ್ನು ಕುರಿತು ಅಧ್ಯಯನ ಮಾಡಲಾಗಿದೆ.

ರಾಜಕೀಯ ಇತಿಹಾಸವನ್ನು ಅವಲೋಕಿಸಿದಾಗ ಸಾಮಾನ್ಯವಾಗಿ ಹಿಂದೂಳಿದ ಜಾತಿಗಳಲ್ಲಿ ರಾಜಕೀಯ ಸಮಸ್ಯೆಗಳು ಇರುವಂತೆ ಮುಂದುವರಿದ ಜಾತಿಗಳಲ್ಲಿ ಇರುವುದಿಲ್ಲ. ಏಕೆಂದರೆ ಮುಂದುವರಿದ ಸಮುದಾಯಗಳು ಪ್ರತ್ಯೇಕ್ಷವಾಗಲೀ ಅಥವಾ ಪರೋಕ್ಷವಾಗಲೀ ರಾಜಕೀಯ ದಲ್ಲಿ ತೊಡಗಿರುತ್ತವೆ. ಯಾವುದೇ ವ್ಯಕ್ತಿ ಅಧಿಕಾರ ಹೊಂದಿದ್ದರು ಅವನ್ನು ಹಂಚಿಕೊಂಡು ನಡೆಸುವ ತತ್ವವನ್ನು ಅಳವಡಿಸಿಕೊಂಡಿರುತ್ತವೆ. ಆದರೆ ಹಿಂದುಳಿದ ವರ್ಗಗಳಲ್ಲಿ ತಮ್ಮ ವ್ಯಕ್ತಿಗೆ ಅಧಿಕಾರ ದೊರೆತರೆ ಅದನ್ನು ಸಹಿಸಲು ಆಗುವುದಿಲ್ಲ. ಜೊತೆಗೆ ಅವನನ್ನು ಅಧಿಕಾರ ದಿಂದ ಕೆಳಗಿಳಿಸಲು ಅವಕಾಶವನ್ನು ಕಾಯುತ್ತಾರೆ. ಸಾಮಾನ್ಯವಾಗಿ ಸ್ವಾರ್ತತೆ ಕೆಲವರಲ್ಲಿ ಮನೆ ಮಾಡಿಕೊಂಡಿರುತ್ತದೆ. ರಾಜಕೀಯ ಹುಟ್ಟಿದಾಗಿನಿಂದ ಇಲ್ಲಿಯವರೆಗೆ ಹಿಂದುಳಿದ ಸಮುದಾಯ ಗಳು ಬಹುಸಂಖ್ಯಾತರಾಗಿದ್ದರು ಸಾಮಾನ್ಯವಾಗಿ ಆಳಿಸಿಕೊಂಡಿರುವುದು ಕಂಡುಬರುತ್ತದೆ ವಿನಃ ಆಳಿರುವ ಘಟನೆಗಳು ಅಲ್ಪಸ್ವಲ್ಪ ಎಂಬುವುದು ಕಂಡುಬಂದಿದೆ. ಮೇಲು ವರ್ಗದಲ್ಲಿ ಪ್ರಾಚೀನ ಕಾಲದಿಂದ ಆಳುವುದು, ಕಾನೂನು, ಆಡಳಿತ, ನಿಯಂತ್ರಣ ಇತ್ಯಾದಿ. ಆಡಳಿತಾತ್ಮಕ ಕಲೆಗಳ ಜೊತೆಗೆ ರಾಜಕೀಯ ತಂತ್ರ ಅವರಿಗೆ ಗೊತ್ತಿದೆ.

ಇಂದು ಪ್ರಜಾಪ್ರಭುತ್ವಯುಗ. ಪ್ರಜೆಗಳೇ ಪ್ರಭುಗಳು ಎಂಬ ತತ್ವ ನಮ್ಮ ಸಂವಿಧಾನದಲ್ಲಿ ಅಳವಡಿಸಿ ಎಲ್ಲಾ ಸಮುದಾಯದ ಜನರು ರಾಜಕೀಯ ಮತ್ತು ಆಡಳಿತಾತ್ವ ಚಟುವಟಿಕೆಯಲ್ಲಿ ಭಾಗವಹಿಸಲು ಆಸಕ್ತಿ ಮೂಡಿಸಿದೆ. ಒಂದು ವೇಳೆ ರಾಜಕೀಯ ಮೀಸಲಾತಿಯನ್ನು ಜಾರಿಗೆ ತರದಿದ್ದಾರೆ ಇಂದು ಹಿಂದುಳಿದ ಸಮುದಾಯದ ನಾಯಕರಿಗೆ ರಾಜಕೀಯ ಮತ್ತು ಅಧಿಕಾರದ ಅನುಭವ ಆಗುತ್ತಿರಲಿಲ್ಲ. ಆದೇ ರೀತಿ ಗುಲಬರ್ಗಾ ಜಿಲ್ಲೆಯಲ್ಲಿ ಸಾಮಾನ್ಯವಾಗಿ ರಾಜಕೀಯವು ಕೆಲವೇ ಜಾತಿಗಳಿಂದ ನಿಯಂತ್ರಿಸಲ್ಪಟ್ಟು, ಬಹುಸಂಖ್ಯಾತ ಜಾತಿಗಳು ರಾಜಕೀಯದಿಂದ ವಂಚಿತವಾಗುತ್ತಿವೆ.

ಗುಲಬರ್ಗಾ ಜಿಲ್ಲೆಯಲ್ಲಿ ಬುಡಕಟ್ಟೇತರ ರಾಜಕೀಯವನ್ನು ಬುಡಕಟ್ಟು ರಾಜಕೀಯಕ್ಕೆ ಹೋಲಿಕೆ ಮಾಡಿದರೆ ಸಾಕಷ್ಟು ಅಂತರ ಇರುವುದನ್ನು ಈ ಸಂಶೋಧನೆಯಿಂದ ಕಂಡುಬಂದಿದೆ. ಇಂದು ಜಿಲ್ಲೆಯಲ್ಲಿ ಯಾವುದೇ ಒಂದು ಜಾತಿ; ಧರ್ಮ ಎನ್ನದೇ ಎಲ್ಲಾರೂ ರಾಜಕೀಯದಲ್ಲಿ

ಭಾಗವಹಿಸಿ ಅದರ ಪ್ರಗತಿಗೆ ಶ್ರಮಿಸುತ್ತಿದ್ದಾರೆ. ಈ ಬುಡಕಟ್ಟೇತರ ರಾಜಕೀಯ ಪ್ರಗತಿಗೆ ಹಲವಾರು ಅಂಶಗಳು ಸಹಾಯವಾಗಿವೆ.

**೧. ಸಮಾಜ ನಾಯಕರನ್ನು ತಯಾರಿಸುತ್ತದೆ:** ಕೆಲವರು ಹುಟ್ಟು ನಾಯಕತ್ವದ ಗುಣಗಳನ್ನು ಬೆಳೆಸಿಕೊಂಡರೆ ಮತ್ತೆ ಕೆಲವರು ಸಮಾಜ ನಿರ್ಮಿತ ನಾಯಕತ್ವದ ಗುಣಗಳನ್ನು ಬೆಳೆಸಿಕೊಂಡಿರುತ್ತಾರೆ ಎಂಬಂತೆ ಗುಲಬರ್ಗಾ ಜಿಲ್ಲೆಯ ಬುಡಕಟ್ಟೇತರ ನಾಯಕರಿಗೆ ಅವರ ಸಮುದಾಯದ ಬೆಂಬಲ ಸಂಪೂರ್ಣವಾಗಿ ಪಡೆದುಕೊಂಡಿರುತ್ತಾರೆ. "ಬೆಳೆಯುವ ಪೈರು ಮೊಳಕೆಯಲ್ಲಿ ಕಾಣು" ಎನ್ನುವ ಹಾಗೆ ಸಮಾಜದ ಹಿತರಕ್ಷಣೆಗಾಗಿ ದುಡಿಯುವ ಸಮುದಾಯದ ಯುವ ಪ್ರತಿಭೆಯನ್ನು ಗುರುತಿಸಿ ಅವನನ್ನು ರಾಜಕೀಯವಾಗಿ ಮೇಲೆತ್ತಲೂ ಎಲ್ಲ ಸಮುದಾಯಗಳು ಶ್ರಮಿಸುತ್ತಿರುವುದು ಕಂಡುಬರುತ್ತದೆ. ಅವರ ಹಬ್ಬ ಹರಿದಿನಗಳಲ್ಲಿ, ಕಷ್ಟ-ನಷ್ಟಗಳಲ್ಲಿ ಮನಪೂರ್ವಕವಾಗಿ ಸ್ಪಂದಿಸಿದ ವ್ಯಕ್ತಿಗೆ ಆ ಸಮಾಜ ಸಂಪೂರ್ಣ ಬೆಂಬಲ ನೀಡುತ್ತದೆ. ಆದರೆ ಈ ಒಂದು ಬೆಂಬಲ ಬುಡಕಟ್ಟು ರಾಜಕೀಯದಲ್ಲಿ ಕಾಣುವುದಿಲ್ಲ. ಹಲವಾರು ಸಮುದಾಯಗಳಿದ್ದು, ರಾಜಕೀಯ ಆಸಕ್ತಿ, ಕುತೂಹಲ ಸಾಮಾನ್ಯವಾಗಿ ಇವರಲ್ಲಿ ಕಂಡುಬರುವುದಿಲ್ಲ.

**೨. ಗಾಡಫಾದರ್ಸ್ ಬೆಂಬಲ :** ಬುಡಕಟ್ಟೇತರ ರಾಜಕೀಯದಲ್ಲಿ ಸ್ಥಳೀಯ ಮಟ್ಟದ ನಾಯಕರನ್ನು ರಾಜಕೀಯವಾಗಿ ಬೆಳೆಸಲು ಹಿರಿಯ ನಾಯಕರು ಶ್ರಮಿಸುತ್ತಾರೆ. ೧೯೫೦ರ ನಂತರ ಇಲ್ಲಿಯವರೆಗೆ ರಾಜಕೀಯ ಇತಿಹಾಸದಲ್ಲಿ ಹಲವಾರು ಬುಡಕಟ್ಟೇತರ ನಾಯಕರು. ರಾಜ್ಯ ಮತ್ತು ರಾಷ್ಟ್ರಮಟ್ಟದ ರಾಜಕೀಯದಲ್ಲಿ ಪಾಲ್ಗೊಂಡು ಅಧಿಕಾರದ ರುಚಿ ಕಂಡುಕೊಂಡಿದ್ದಾರೆ. ರಾಜಕೀಯದಿಂದ ತಮ್ಮ ಸಮುದಾಯಗಳಿಗೆ ಆಗುವ ಲಾಭವನ್ನು ತಿಳಿದುಕೊಂಡಿದ್ದಾರೆ. ಅಧಿಕಾರದಲ್ಲಿ ಶಾಶ್ವತವಾಗಿ ಉಳಿಯಬೇಕಾದರೆ ಅವರ ಸಮುದಾಯದ ನಾಯಕರ ಬೆಂಬಲ ಸಾಮಾನ್ಯವಾಗಿ ಅವರಿಗೆ ಬೇಕು. ಆದ್ದರಿಂದ ಯಾವುದೇ ಜಾತಿಯ ನಾಯಕನು ಇದ್ದರು ಅವನ ವಿಚಾರಗಳಿಗೆ ಸ್ಪಂದಿಸುವ, ಆದರ್ಶಗಳನ್ನು ಪಾಲಿಸುವ ಪ್ರತಿಭಾನ್ವಿತ ವ್ಯಕ್ತಿಯನ್ನ ರಾಜಕೀಯವಾಗಿ ಬೆಳೆಯಲು ವಾತಾವರಣ ಕಲ್ಪಿಸಿಕೊಡುತ್ತಾರೆ. ಇದು ಎಲ್ಲಾ ಸಮುದಾಯದ ನಾಯಕರು ಸಾಮಾನ್ಯವಾಗಿ ಅನುಸರಿಸುವ ತತ್ವ. ಆದರೆ ಗುಲಬರ್ಗಾ ಜಿಲ್ಲೆಯಲ್ಲಿ ಇಂತಹ ಬುಡಕಟ್ಟೇತರ ರಾಜಕೀಯ ನಾಯಕರು ಆ ಕಾರ್ಯವನ್ನು ನಿರ್ವಹಿಸುತ್ತಿರುವರು.

ಜಿಲ್ಲೆಯ ವ್ಯಾಪ್ತಿಯಲ್ಲಿ ೨೦ ಬುಡಕಟ್ಟುಗಳು ವರದಿಯಾಗಿದ್ದು ಸಾಮಾನ್ಯವಾಗಿ ಯಾವುದೇ ಬುಡಕಟ್ಟು ರಾಜಕೀಯ ಲಾಭ ಪಡೆಯದೆ ಇದ್ದದ್ದು ಕಂಡುಬರುತ್ತದೆ. ಅಧಿಕಾರಕ್ಕಾಗಿ ಕಚ್ಚಾಟ ಈ ಬುಡಕಟ್ಟುಗಳಲ್ಲಿ ಇದ್ದು ಇವರನ್ನು ರಾಜಕೀಯವಾಗಿ ಬೆಳೆಸುವ ರಾಷ್ಟ್ರಮಟ್ಟದ ನಾಯಕರ ಕೊರತೆ ಇದೆ.

**೩. ಆಡಳಿತಾತ್ಮಕ ಕಲೆ :** ಆಳುವದು ಮತ್ತು ಆಡಳಿತ ನಡೆಸುವದು ಒಂದು ಕಲೆ ಎಂದು ಪ್ಲೇಟೊ ಹೇಳುತ್ತಾನೆ. ಆ ಕಲೆ ಗುಲಬರ್ಗಾ ಜಿಲ್ಲೆಯ ಬುಡಕಟ್ಟೇತರ ರಾಜಕೀಯದಲ್ಲಿ ಕಂಡುಕೊಳ್ಳುತ್ತೇವೆ. ಹಲವಾರು ವರ್ಷಗಳಿಂದ ಕಾನೂನು, ಆಡಳಿತ, ಅಧಿಕಾರ, ರಾಜಕೀಯ ಇವುಗಳಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ. ಬುಡಕಟ್ಟು ಸಮುದಾಯದ ರಾಜಕೀಯದಲ್ಲಿ ಇವು ಕಂಡುಬರುವುದಿಲ್ಲ. ಮೀಸಲಾತಿಯಿಂದ ರಾಜಕೀಯದಲ್ಲಿ ಬಂದಿದ್ದಾರೆ. ಒಂದು ವೇಳೆ ಆ ಸೌಲಭ್ಯ ಇಲ್ಲದಿದ್ದರೆ, ರಾಜಕೀಯ ಇವರಿಗೆ ಕನಸ್ಸಾಗಿ ಉಳಿಯುತ್ತಿತ್ತು.

**೪. ಆರ್ಥಿಕ ಭದ್ರತೆ:** ಆರ್ಥಿಕತೆಯು ರಾಜಕೀಯಕ್ಕೆ ಬೆನ್ನಲುಬು ಎಂಬುವ ವಿಚಾರವನ್ನ ಈಗಾಗಲೇ ಹಿಂದೆ ಹೇಳಲಾಗಿದೆ. ಬುಡಕಟ್ಟೇತರ ರಾಜಕೀಯದಲ್ಲಿ ಸಾಮಾನ್ಯವಾಗಿ ಹೆಚ್ಚಿನ ಸಮುದಾಯಗಳು ಸ್ಥಿರಾಸ್ತಿಯನ್ನು ಹೊಂದಿವೆ. ರಾಜಕೀಯವಾಗಿ ಯಾವುದೇ ಒಂದು ಸಮುದಾಯ ಮೇಲೆ ಬರಲು ಆದಕ್ಕೆ ಆಸ್ತಿಯು ಬೇಕೇ ಬೇಕು. ಆದರೆ ಆಲೆಮಾರಿ ಜೀವನ ಸಾಗಿಸುವ ಬುಡಕಟ್ಟುಗಳು ಯಾವುದೇ ಸ್ಥಿರಾಸ್ತಿ ಹೊಂದಿರದ ಕಾರಣ ಆವರು ರಾಜಕೀಯಕ್ಕೆ ಯಾವುದೇ ಮಹತ್ವ ನೀಡದಿರುವುದು ಕಂಡುಬಂದಿದೆ.

**೫. ಪರಿಸರ :** ರಾಜಕೀಯ ಆಸಕ್ತಿ ಯಾವುದೇ ಒಂದು ಸಮುದಾಯದಲ್ಲಿ ಬೆಳೆಯಬೇಕಾದರೆ ಅದಕ್ಕೆ ಪರಿಸರವು ಮಹತ್ವದ ಪಾತ್ರವಹಿಸುತ್ತದೆ. ಬುಡಕಟ್ಟೇತರ ರಾಜಕೀಯ ಬೆಳೆಯಲು ಸಹ ಆವರು ವಾಸಿಸುವ ಗ್ರಾಮ, ಪಟ್ಟಣ, ನಗರ ಪರಿಸರ ಬಹಳ ಮುಖ್ಯವಾಗಿದೆ. ಆದರೆ ಬುಡಕಟ್ಟು ರಾಜಕೀಯಕ್ಕೆ ಈ ರೀತಿಯ ಆವಕಾಶಗಳು ಇರುವುದಿಲ್ಲ.

**೬. ಸಂಸ್ಕೃತಿಯು ಅಧಿಕಾರವನ್ನು ನಿಯಂತ್ರಿಸುತ್ತದೆ:** ಬುಡಕಟ್ಟೇತರ ರಾಜಕೀಯದಲ್ಲಿ ವಿಶೇಷವಾಗಿ ನಾಡಿನ ಸಂಸ್ಕೃತಿ, ಆಚಾರ-ವಿಚಾರಗಳು ಮತ್ತು ಭವ್ಯ ಪರಂಪರೆಗೆ ಆನುಗುಣವಾಗಿ ಅಧಿಕಾರವನ್ನು ಪಡೆಯುತ್ತಾರೆ. ಸಮುದಾಯಗಳು ಯಾವುದೇ ವ್ಯಕ್ತಿಗೆ ತಮ್ಮನ್ನು ಅಳುವ

ಅಧಿಕಾರವನ್ನು ವಹಿಸಬೇಕಾದರೆ. ಅವನ ತಮ್ಮ ಸಮುದಾಯದ ಸಂಸ್ಕೃತಿಗೆ ಧಕ್ಕೆ ಬರದಂತೆ ಹಾಗೂ ತಮ್ಮ ಸಮುದಾಯದ ಅಸಕ್ತಿಗೆ ಧಕ್ಕೆ ಬರದಂತೆ ನೋಡಿಕೊಳ್ಳುವ ವ್ಯಕ್ತಿಗೆ ಅಧಿಕಾರವನ್ನು ವಹಿಸುತ್ತದೆ. ಆದರೆ ಬುಡಕಟ್ಟೇತರ ರಾಜಕೀಯದಲ್ಲಿ ಹಲವಾರು ಬುಡಕಟ್ಟು ಸಮುದಾಯಗಳು ಇದ್ದು ಒಂದು ಸಮುದಾಯದ ಸಂಸ್ಕೃತಿ ಮತ್ತೊಂದು ಸಮುದಾಯದ ಸಂಸ್ಕೃತಿಗೆ ವ್ಯತ್ಯಾಸವಿರುತ್ತದೆ. ಬುಡಕಟ್ಟು ಅಥವಾ ಬುಡಕಟ್ಟೇತರ ನಾಯಕರಾಗಿದ್ದರು ಸಹಿತ ಅವರು ಬುಡಕಟ್ಟೇತರ ಮತ್ತು ಬುಡಕಟ್ಟು ಸಮುದಾಯಗಳ ಆಸಕ್ತಿಗೆ ಮತ್ತು ರಕ್ಷಣೆ ನೀಡುತ್ತಾರೆ ಎಂಬ ಭರವಸೆ ಕಂಡುಬಂದರೆ ಆವನನ್ನು ಎಲ್ಲಾ ಸಮುದಾಯಗಳು ರಾಜಕೀಯವಾಗಿ ಬೆಳೆಸುತ್ತವೆ. ರಾಜಕೀಯ ಯಶಸ್ವಿಯು ಈ ಮೇಲಿನ ಎಲ್ಲಾ ಅಂಶಗಳ ಜೊತೆಗೆ ರಾಜಕೀಯ ನಾಯಕರು, ಪ್ರಮಾಣೀರು ನಿಷ್ಠವಂತರು, ಸಂಘಟನಾ ಸಾಮರ್ಥ್ಯವುಳ್ಳವರಾಗಿರಬೇಕು.

# ಸಮಾರೋಪ

ವಿಪುಲವಾದ ಜನ ಸಂಪತ್ತಿನಿಂದ ಕೂಡಿರುವ ಭಾರತದಲ್ಲಿಯೂ ಮೂಲನಿವಾಸಿಗಳೆಂದು ಪರಿಗಣಿತವಾಗಿರುವ ಆದಿವಾಸಿಗಳಿಗೆ ಕೊರತೆಯೇನಿಲ್ಲ. ದೇಶದ ಜನಸಂಖ್ಯೆಯ ಶೇ. ೭.೫ ರಷ್ಟಿರುವ ಈ ಸಮುದಾಯಗಳು ಮಿಕ್ಕುಳಿದ ಕಥಾ-ಕಥಿತ ನಾಗರಿಕ ಜನರಂತೆ ಭಾರತದ ಪ್ರಜೆಗಳೇ ಆಗಿದ್ದು, ಎಲ್ಲಾ ಬಗೆಯ ಸಂವಿಧಾನದ ಹಕ್ಕುಗಳಿಗೆ ಭಾಜನರಾಗಿದ್ದಾರೆ. ದೇಶದ ಅನ್ಯ ರಾಜ್ಯಗಳ ಮೂಲೆ ಮೂಲೆಗಳಲ್ಲಿ ಬೆಟ್ಟ-ಗುಡ್ಡಗಳಲ್ಲಿ ಮತ್ತು ಕಾಡು-ಮೇಡುಗಳಲ್ಲಿ ವಾಸಿಸುವ ಈ ಜನರ ಜೀವನ ಕ್ರಮ ನಾನಾ ತೆರನಾಗಿದ್ದು ಅವರ ಜೀವನದ ವೈಚಿತ್ಯ-ವೈಶಿಷ್ಠತೆಗಳನ್ನು ತಿಳಿದುಕೊಳ್ಳುವುದು, ಅವರ ಸಮಸ್ಯೆ ಸವಾಲುಗಳನ್ನು ಅರಿತುಕೊಳ್ಳುವುದು ಮತ್ತು ನಾಗರಿಕತೆಯ ಪಥದಲ್ಲಿ ಮುನ್ನೆಡೆಯಲು ಅವಕಾಶ ಕಲ್ಪಿಸಿಕೊಡುವುದು ನಾಗರಿಕ ಸಮುದಾಯದ ಕರ್ತವ್ಯವಾಗಿದೆ.

ಭಾರತದ ಆದಿವಾಸಿಗಳ ಜೀವನ ವಿಧಾನ ಮುಖ್ಯವಾಗಿ ಅವರ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ, ಮತ್ತು ಧಾರ್ಮಿಕ, ರಾಜಕೀಯ ಮತ್ತಿತರ ಅಂಶಗಳನ್ನು ತಿಳಿದುಕೊಳ್ಳುವ, ಅವರನ್ನು

